# ಹರಿದಾಸ ಸಾಹಿತ್ಯ - ಶ್ರೀಮದ್ಭಾಗವತ

## ಋಣ ಮತ್ತು ವೃದ್ಧಿ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ



ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಫೆಬ್ರವರಿ ೨೦೦೫

# ಹರಿದಾಸ ಸಾಹಿತ್ಯ - ಶ್ರೀಮದ್ಭಾಗವತ

## ಋಣ ಮತ್ತು ವೃದ್ಧಿ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು
ಮಾನಕರಿ ಶ್ರೀನಿವಾಸಾಚಾರ್ಯ



ಮಾರ್ಗದರ್ಶಕರು
ಪ್ರೊ.ಎ.ವಿ.ನಾವಡ
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ



ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಫೆಬ್ರವರಿ ೨೦೦೫

## ಮಾರ್ಗದರ್ಶಕರ ಪ್ರಮಾಣ ಪತ್ರ

ಮಾನಕರಿ ಶ್ರೀನಿವಾಸಾಚಾರ್ಯ ಅವರು **ಹರಿದಾಸ ಸಾಹಿತ್ಯ - ಶ್ರೀಮದ್ಭಾಗವತ : ಋಣ ಮತ್ತು ವೃದ್ಧಿ** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಪ್ರೊ. ಎ.ವಿ.ನಾವಡ**
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
**ಹಸ್ತಪ್ರತಿಶಾಸ್ತ್ರ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೪.೨.೨೦೦೭
ಸ್ಥಳ : ವಿದ್ಯಾರಣ್ಯ

## ಪರಿವಿಡಿ

# ಸಂಶೋಧಕರ ಪ್ರಮಾಣ ಪತ್ರ

ಹರಿದಾಸ ಸಾಹಿತ್ಯ - ಶ್ರೀಮದ್ಭಾಗವತ : ಋಣ ಮತ್ತು ವೃದ್ಧಿ ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿ.ಎಚ್.ಡಿ.ಪದವಿಗಾಗಿ ಪ್ರೊ.ಎ.ವಿ.ನಾವಡ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ :
ಸ್ಥಳ : ವಿದ್ಯಾರಣ್ಯ

**ಮಾನಕರಿ ಶ್ರೀನಿವಾಸಾಚಾರ್ಯ**
ಸಂಶೋಧಕರು
**ಹಸ್ತಪ್ರತಿಶಾಸ್ತ್ರ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಅಧ್ಯಾಯ ಒಂದು

# ಅಧ್ಯಯನದ ಪರಿಗ್ರಹಿಕೆ

೧.೧. ಹರಿದಾಸ ಸಾಹಿತ್ಯ : ಪ್ರವೇಶ

೧.೨. ಅಧ್ಯಯನದ ಹಿಂದಣ ಹೆಜ್ಜೆಗಳು

೧.೩. ಅಧ್ಯಯನದ ಉದ್ದೇಶ ಮತ್ತು ವಿನ್ಯಾಸ

# ೧

# ಅಧ್ಯಯನದ ಪರಿಗ್ರಹಿಕೆ

## ೧.೧. ಹರಿದಾಸ ಸಾಹಿತ್ಯ : ಪ್ರವೇಶ

ಭಾರತ ದೇಶದ ಜನರು ಇತಿಹಾಸ ಪೂರ್ವಕಾಲದಿಂದಲೂ ಪೂಜಿಸುತ್ತ ಬಂದಿರುವ ಅನೇಕ ದೇವತೆಗಳ ಮಧ್ಯೆ ವಿಷ್ಣುವಿಗೆ ಮಹತ್ವದ ಸ್ಥಾನವಿದೆ. ವಿವಿಧ ಪ್ರದೇಶಗಳ, ಭಾಷೆಗಳ, ವರ್ಗಗಳ ಜನರು ತಮ್ಮನ್ನು ತಾವು ವಿಷ್ಣುಭಕ್ತರೆಂದು ಗುರುತಿಸಿಕೊಂಡಿದ್ದಾರೆ. ಇಂದಿಗೂ ಎಲ್ಲ ಜಾತಿಗಳಲ್ಲೂ ಕೆಲವು ವಿಷ್ಣುಭಕ್ತ ಮನೆತನಗಳು ಕಂಡುಬರುತ್ತವೆ. ಹೊಲೆದಾಸ, ಚೆನ್ನದಾಸ, ನೇಕಾರದಾಸ, ಉಪ್ಪಾರದಾಸ, ಗೊಲ್ಲದಾಸ, ದೊಂಬಿದಾಸ, ಬೇಡದಾಸ, ಕುರುಬದಾಸ ಮುಂತಾದ ಪಂಗಡದವರು ವೈಷ್ಣವ ಆಚರಣೆಗಳನ್ನು ಉಳಿಸಿಕೊಂಡಿದ್ದಾರೆ.

ಇವರ ಮನೆಗಳಲ್ಲಿ ಇತರ ದೇವತೆಗಳನ್ನು ಪೂಜಿಸುವ ಸಂಪ್ರದಾಯವಿದ್ದರೂ ಪ್ರಧಾನವಾಗಿ ರಾಮ, ಕೃಷ್ಣ ವೆಂಕಟೇಶ, ನರಸಿಂಹ, ಪಾಂಡುರಂಗ, ರಂಗನಾಥ ಅಥವಾ ಸ್ಥಳೀಯ ಹೆಸರಿನ ಯಾವುದಾದರೊಂದು ರೂಪದ ವಿಷ್ಣುವನ್ನು ಇವರು ಆರಾಧಿಸುತ್ತಾರೆ. ಉದಾ. ನರಸಿಂಹ ದೇವರನ್ನು ಕದರಪ್ಪ (ಖಾದ್ರಿ ನರಸಿಂಹ), ಓಬಳಪ್ಪ (ಅಹೋಬಲ ನರಸಿಂಹ), ಈರಣ್ಣ, ಹಿರಣ್ಯಯ್ಯ (ಹಿರಣ್ಯಮರ್ದನ), ಗುಂಡಪ್ಪ

(ಗುಂಡಿನ, ಶಾಲಗ್ರಾಮದ ರೂಪದಲ್ಲಿರುವವನು), ಬಂಡೆಪ್ಪ, ಕಟ್ಟೆಪ್ಪ, ಉಗ್ರಪ್ಪ ಮುಂತಾದ ತಮ್ಮದೇ ಆದ ಆಡುಭಾಷೆಯ ಆತ್ಮೀಯ ಹೆಸರುಗಳಿಂದ ಕರೆಯುತ್ತಾರೆ. ವೆಂಕಟೇಶ ದೇವರನ್ನು ಯಂಕಪ್ಪ, ಸೀನಪ್ಪ, ಮಲೆಯಪ್ಪ, ಮಲ್ಲಪ್ಪ, ಚಲಪತಿ, ಗಿರೀಶ ಮುಂತಾದ ಹೆಸರುಗಳಿಂದ ಕರೆಯುತ್ತಾರೆ.

ಇದೇ ರೀತಿ ಕೃಷ್ಣಾದಿ ವಿವಿಧ ರೂಪಗಳಿಗೆ ಬೇರೆ ಬೇರೆ ಹೆಸರುಗಳಿವೆ. ರಾಮದೂತನಾದ ಹನುಮಂತದೇವರಿಗೆ ನಡೆದುಕೊಳ್ಳುವುದು, ಹರಿನಾಮ ಸ್ಮರಣೆ ಮಾಡುವುದು. ಹಣೆಯಲ್ಲಿ ನಾಮ ಹಚ್ಚಿಕೊಳ್ಳುವುದಾದರೆ ಉದ್ದ ನಾಮ ಧರಿಸುವುದು, ಸ್ತೋತ್ರ ರೂಪವಾದ ಹಾಡನ್ನು ಹೇಳುವುದು (ತಮಗೆ ಬರದಿದ್ದರೆ ಇತರರಿಂದ ಹೇಳಿಸುವುದು), ಸಾಮೂಹಿಕ ಭಜನೆ ಮಾಡುವುದು, ಪೂಜಾಕಾಲಕ್ಕೆ ಹನುಮ-ಗರುಡರ ಪ್ರತಿಮೆಗಳುಳ್ಳ ಗಂಟೆಗಳನ್ನು; ಶಂಖ, ಜಾಗಟೆಗಳನ್ನು ಬಳಸುವುದು, ಶಂಖ-ಚಕ್ರ, ವರಾಹ, ಗರುಡ ಚಿಹ್ನೆಗಳನ್ನು ಗೌರವಿಸುವುದು, ಭಗವಂತನ-ಭಗವದ್ಭಕ್ತರ ಹೆಸರನ್ನು ಇಟ್ಟುಕೊಳ್ಳುವುದು, ಗೋವುಗಳನ್ನು ಗೌರವಿಸುವುದು, ತಮಗೆ ಸಾಧ್ಯವಿದ್ದರೆ ಪಾದಚಾರಿಗಳಾಗಿ ತೀರ್ಥಕ್ಷೇತ್ರ ಯಾತ್ರೆ ಮಾಡುವುದು, ಶಿವ ಇತ್ಯಾದಿ ದೇವತೆಗಳನ್ನು ಅವಮಾನಿಸದೆ ಇರುವುದು, ದೇವರಿಗಾಗಿ ಪ್ರಾಣಿಬಲಿ ಕೊಡದಿರುವುದು ಮುಂತಾದ ಸಾರ್ವತ್ರಿಕ ಆಚರಣೆಗಳನ್ನು ಇಂದಿಗೂ ಎಲ್ಲ ವೈಷ್ಣವ ಮನೆತನಗಳಲ್ಲಿ ಕಾಣುತ್ತೇವೆ.

ಅನಾದಿ ಕಾಲದಿಂದ ನಡೆದುಬಂದ ಈ ಜೀವನ ಪದ್ಧತಿಯಲ್ಲಿ ಅನೇಕ ಶಾಖೋಪಶಾಖೆಗಳು ಬೆಳೆದಿವೆ. ಶೈವ, ಶಾಕ್ತ, ಬೌದ್ಧ, ಜೈನ ಮೊದಲಾದ ಮತ ಧರ್ಮಗಳ ಹಾಗೂ ಅದ್ವೈತ, ವಿಶಿಷ್ಟಾದ್ವೈತ ಹಾಗೂ ದ್ವೈತ ಸಂಪ್ರದಾಯಗಳ ವಿವಿಧ ಸಾಧು ಸಂತರ ಪ್ರೇರಣೆ, ಪ್ರಭಾವಗಳಿಂದ ತಮಿಳುನಾಡು, ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರ, ಬಂಗಾಳ, ಗುಜರಾತ್, ಬಿಹಾರ, ಉತ್ತರಪ್ರದೇಶ ಮೊದಲಾದ ರಾಜ್ಯಗಳಲ್ಲಿ ವೈಷ್ಣವ ಸಂಸ್ಕೃತಿಯು ಬಹುರೂಪಗಳನ್ನು ತಾಳಿದೆ. ಇವುಗಳಲ್ಲಿ ಕರ್ನಾಟಕದ ಶ್ರೀಹರಿದಾಸ ಪರಂಪರೆಯೂ ಪ್ರಮುಖವಾಗಿದೆ.

ಕರ್ನಾಟಕದಲ್ಲಿ ವಿಷ್ಣುಭಕ್ತರು ಇತಿಹಾಸಪೂರ್ವ ಕಾಲದಿಂದಲೂ ಇದ್ದಿರಬೇಕು. ಕನ್ನಡ ಭಾಷೆಯನ್ನು ಆಡುತ್ತಿದ್ದ ಕಾಲದಿಂದಲೂ ಭಕ್ತಿಗೀತೆಗಳನ್ನು ರಚಿಸಿ ಹಾಡುತ್ತಲೂ ಇದ್ದಿರಬೇಕು. ಆದರೆ ಅವುಗಳಿಗೆ ಸಾಂಸ್ಕೃತಿಕ ಮಹತ್ವ ದೊರೆತಿರಲಿಲ್ಲ. ಇತರ ಮತಗಳ ಉತ್ಕರ್ಷದ ಕಾಲ ಘಟ್ಟಗಳಲ್ಲಿ ಕನ್ನಡ ವೈಷ್ಣವ ಸಾಹಿತ್ಯಕ್ಕೆ ಪ್ರೇರಣೆ ಪ್ರೋತ್ಸಾಹಗಳು ದೊರೆಯುವಂತಿರಲಿಲ್ಲ. ಅದು ದೊರೆತದ್ದು ಕನ್ನಡ ಸಂತರಾದ ಮಧ್ವಾಚಾರ್ಯರಿಂದ. ಹದಿಮೂರನೇ ಶತಮಾನದಲ್ಲಿ ಕನ್ನಡ ನಾಡಿನಲ್ಲಿ ಐತಿಹಾಸಿಕ ಕಾರಣಗಳಿಂದ ವಿಷ್ಣುಭಕ್ತಿಯು ಕ್ಷೀಣಿಸುತ್ತಿದ್ದ ದಿನಗಳಲ್ಲಿ ಮಧ್ವಾಚಾರ್ಯರು ತಮ್ಮ ಜೀವನ, ಸಾಧನೆ ಹಾಗೂ ಉಪದೇಶಗಳ ಮೂಲಕ ಜನಮನದಲ್ಲಿ ಅನಾದಿ ಪರಂಪರಾಗತ ವಿಷ್ಣು ಪ್ರಜ್ಞೆಯನ್ನು ಮತ್ತೊಮ್ಮೆ ಜಾಗೃತಗೊಳಿಸಿದರು. ಶ್ರೀಮದ್ಭಾಗವತ ಮಹಾಪುರಾಣದ ವ್ಯಾಪಕ ಪ್ರಸಾರ ಮಾಡಿದರು.

ಈ ಜಗತ್ತಿನ ಸರ್ವ ಜಡ ಚೇತನಗಳಲ್ಲಿ ಭಗವಂತನ ಇರುವಿಕೆಯನ್ನು ಸಾರಿದರು. ಸರ್ವ ಚೇತನರಲ್ಲಿ ನೆಲೆಸಿದ ಪರಮಾತ್ಮನ ವಿಶಿಷ್ಟ ರೂಪವನ್ನು ಪ್ರಾಚೀನ ಗ್ರಂಥಗಳಲ್ಲಿ 'ಬಿಂಬ', 'ಶ್ರೀಹರಿ' ಎಂಬ ಪಾರಿಭಾಷಿಕ ಪದದಿಂದ ಕರೆಯಲಾಗಿದೆ ಎಂದು ಸೂಚಿಸಿದರು. ಮುಕ್ತಿಗೆ ಭಕ್ತಿಯೇ ಮುಖ್ಯವೆಂದು ಬೋಧಿಸಿದರು.

ಮಧ್ವಾಚಾರ್ಯರ ಶಿಷ್ಯರು ಬಿಂಬೋಪಾಸನೆಯನ್ನು ತಮ್ಮ ಮುಖ್ಯ ಸಾಧನವನ್ನಾಗಿ ಸ್ವೀಕರಿಸಿದರು. ತಮ್ಮ ಸರ್ವಸ್ವವನ್ನು ಬಿಂಬರೂಪಿ ಶ್ರೀಹರಿಗೆ ಸಮರ್ಪಿಸಿಕೊಂಡರು. ತಾವು ಶ್ರೀಹರಿಯ ದಾಸರು ಎಂದು ಕರೆದುಕೊಂಡರು. ತಮ್ಮ ಬಿಂಬನಾದ ಶ್ರೀಹರಿಯನ್ನು ಸ್ತುತಿಸಲು ವೇದಭಾಷೆ-ದೇವಭಾಷೆಯಾದ ಸಂಸ್ಕೃತವನ್ನೂ, ಮನೆಭಾಷೆ-ಮನಭಾಷೆಯಾದ ಕನ್ನಡವನ್ನೂ ಸಮಸಮವಾಗಿ ಬಳಸಿ ಶ್ರುತಿ ಕೆಡದಂತೆ ಹಾಡಿದರು. ಹೀಗೆ ಮಧ್ವಾಚಾರ್ಯರ ಪ್ರಭಾವದಿಂದ ನರಹರಿತೀರ್ಥರ ಕಾಲದಲ್ಲಿ ಕರ್ನಾಟಕದಲ್ಲಿ ಶ್ರೀಹರಿದಾಸ ಪರಂಪರೆಯು ಕಾಣಿಸಿಕೊಂಡಿತು.

ಹರಿದಾಸರು ಅಚ್ಚ ಕನ್ನಡಿಗರು. ಅವರ ಬಹುಪಾಲು ರಚನೆಗಳು ಕನ್ನಡದಲ್ಲಿವೆ. ಹರಿದಾಸ ಸಂಸ್ಕೃತಿಯು ಧಾರ್ಮಿಕ ನಂಬಿಕೆ ಹಾಗೂ ಆಚರಣೆಯ ದೃಷ್ಟಿಯಿಂದ ಮಾಧ್ವ ಬ್ರಾಹ್ಮಣವಲಯಕ್ಕೂ; ಭಾಷೆಯ ಕಾರಣದಿಂದ ಕರ್ನಾಟಕಕ್ಕೂ ಸೀಮಿತವಾಗಬಹುದಾಗಿತ್ತು. ಆದರೆ ಹಾಗಾಗಲಿಲ್ಲ. ಅವರು ತಮ್ಮ ಸರಳ ಪ್ರಾಮಾಣಿಕ ಹರಿಭಕ್ತಿ ಹಾಗೂ ಮಾನವ ಪ್ರೇಮಗಳ ಮೂಲಕ; ತಮ್ಮ ತ್ಯಾಗ ಸಾಧನೆ, ಸಿದ್ಧಿಗಳ ಮೂಲಕ ಸಮಸ್ತ ಜನಮಾನಸದಲ್ಲಿ ನೆಲೆಸಿ ನಿಂತಿದ್ದಾರೆ.

ಹರಿದಾಸರಾದ ಪುರಂದರದಾಸರು ಮತ್ತು ಕನಕದಾಸರು, ಕನ್ನಡಿಗರ ಭಾಷೆ-ಬದುಕು- ಬರಹಗಳಿಗೆ ಹೊಸತನವನ್ನು ತಂದ ಹಿರಿಯರು. ಶ್ರೀಪಾದರಾಜರು-ವ್ಯಾಸರಾಜರು-ವಾದಿರಾಜರೆಂಬ ಮುನಿತ್ರಯರು ಅವರ ಬೆಂಬಲಕ್ಕಿದ್ದರು. ಮುಂದೆ ರಾಘವೇಂದ್ರಗುರುಸಾರ್ವಭೌಮರ ಅನುಗ್ರಹದ ಬೆಂಗಾವಲಿನಲ್ಲಿ ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು, ಹೆಳವನಕಟ್ಟೆ ಗಿರಿಯಮ್ಮನವರು, ಹರಪನಹಳ್ಳಿ ಭೀಮವ್ವನವರು, ಗೋನವಾರದ ರಾಮದಾಸರು, ವಿದ್ಯಾಪ್ರಸನ್ನತೀರ್ಥರು ಮೊದಲಾದವರು ಈ ಪಂಥ ವನ್ನು ಉಳಿಸಿ ಬೆಳೆಸಿದ್ದಾರೆ.

"ಈ ಪರಂಪರೆಯ ಮೂಲಕ ಹರಿದ ಭಕ್ತಿವಾಹಿನಿ ಮತ್ತೊಮ್ಮೆ ಕರ್ನಾಟಕದ ಜನಮನವನ್ನು ಪುನೀತಗೊಳಿಸಿತು. ಈ ಯುಗದಲ್ಲಿ ದೇಶದಾದ್ಯಂತ ವ್ಯಾಪಿಸಿಕೊಂಡಿದ್ದ ಭಕ್ತಿಪಂಥದ ಪ್ರತಿಬಿಂಬ ಕರ್ನಾಟಕದಲ್ಲಿ ಈ ರೂಪದಲ್ಲಿ ಕಾಣಿಸಿಕೊಂಡಿತೆಂಬುದಷ್ಟೇ ಅಲ್ಲ. ಇದರಿಂದ ಕರ್ನಾಟಕದ ಧಾರ್ಮಿಕ ಜಗತ್ತಿನ ಒಂದು ಮುಖ ಉದ್ಧಾರವಾದುದು ಮಾತ್ರವಲ್ಲ, ಸಾಹಿತ್ಯಲೋಕವೂ ಕೃತಾರ್ಥವಾಯಿತು. ಜಾಗತಿಕ ಸಾಹಿತ್ಯಕ್ಕೆ ನಮ್ಮ ಕೊಡುಗೆಗಳಲ್ಲಿ ಇದೂ ಒಂದು ಎಂದು ಹೇಳಿಕೊಳ್ಳಬಹುದಾದಂಥ ಅಮೂಲ್ಯ ಸಾಹಿತ್ಯ ಇದರಿಂದ ನಮಗೆ ದೊರೆಯಿತು"(ಪ್ರಧಾನ್ ಗುರುದತ್ತ, ೧೯೯೦:೩೫).

ಶಿಷ್ಟ-ಪರಿಶಿಷ್ಟವೆಂಬ ಭೇದವಿಲ್ಲದೆ ಬಹುಸಂಖ್ಯಾಕ ಕನ್ನಡ ವೈಷ್ಣವ ಜನಸಮುದಾಯಗಳು ದಾಸರ ಪದಗಳನ್ನು ಜಾತಿಯ ಸೀಮಿತ ದೃಷ್ಟಿಯಿಂದ ನೋಡದೆ ಹರಿಭಕ್ತಿ ನೀತಿಗಳ ವಿಶಾಲ ದೃಷ್ಟಿಯ ಮಹತ್ವದ ಕಾರಣಕ್ಕಾಗಿ ತಮ್ಮ ಸಾಹಿತ್ಯವೆಂದು ಆತ್ಮೀಯವಾಗಿ ಸ್ವೀಕರಿಸಿದ್ದಾರೆ. ವಿವಿಧ ವರ್ಗಗಳ ಲಕ್ಷಾಂತರ ಮಹಿಳೆಯರು, ನಿರಕ್ಷರಸ್ಥರಾಗಿದ್ದ ಹಳ್ಳಿಗರು, ಸಂಗೀತಗಾರರು, ಹಾಡಿ ಹಾಡಿ ಇಂದಿಗೂ ನಮಗೆ ಉಳಿಸಿಕೊಟ್ಟಿದ್ದಾರೆ. ಹರಿದಾಸರ ರಚನೆಗಳು ರಾಮ ಭಜನೆ, ಹರಿಕಥೆ, ಭಾಗವತರಾಟ, ಭಾಗವಂತಿಕೆ ಮೇಳ, ಧ್ವನಿ ಸುರುಳಿಗಳು ಮತ್ತು ಸಿ.ಡಿ.ಗಳಂತಹ ಹತ್ತಾರು ರೂಪಗಳಲ್ಲಿ ನಮ್ಮ ನಡುವೆ ಪ್ರಸಾರದಲ್ಲಿವೆ. ಹರಿದಾಸರ ಅನೇಕ ನುಡಿಗಳು ಗಾದೆಮಾತಿನಂತೆ ನಮ್ಮ ಜನರ ನಾಲಿಗೆಯಲ್ಲಿ ನೆಲೆನಿಂತಿವೆ.

ಅಸಮಾನತೆಯ ಅಂತಃಕಲಹಗಳಿಂದ ಆತಂಕಗೊಂಡಿದ್ದ ಜನರ ಭರವಸೆ ತಪ್ಪಿದ ಬದುಕಿಗೆ; ಹರಿದಾಸರು ಭಕ್ತಿಯ ಬೆಂಬಲವನ್ನೊದಗಿಸಿದರು. ಜೀವನ ಮೌಲ್ಯಗಳನ್ನು ತಮ್ಮ ಸರಳ-ಸಂಗೀತ ಮಾಧ್ಯಮದ ಪದ ಪದ್ಯಗಳ ಮೂಲಕ ಮನೆ ಮನೆಗೂ ಬಿತ್ತರಿಸಿಗರು. ಕಪಟ, ಆಡಂಬರ, ದುರಾಚಾರ ಹಾಗೂ ಮೇಲ್ವರ್ಗದ ಮೇಲರಿಮೆಗಳನ್ನು ಕಟುವಾಗಿ ಖಂಡಿಸಿದರು. ಅವರ ಕೀರ್ತನೆಗಳಲ್ಲಿ ಲೌಕಿಕ ಬದುಕನ್ನು ಇಲ್ಲಿಯ ಅನೇಕ ತಲ್ಲಣ ಆತಂಕಗಳ ಮಧ್ಯೆಯೂ ಸಹನೀಯವಾಗಿರಿಸಿಕೊಳ್ಳಬೇಕೆಂಬ ಅಗಾಧ ಜೀವನ ಪ್ರೇಮವಿದೆ. ಬದುಕಿನ ಏಳು ಬೀಳುಗಳಿಗೆ ಜಗ್ಗದ ಕುಗ್ಗದ ನಿರಂತರ ಜೀವನೋತ್ಸಾಹಗಳಿವೆ. ಹರಿದಾಸರು ವೈಯಕ್ತಿಕ ಸುಧಾರಣೆಯ ಮೂಲಕ ಮನುಕುಲದ ಸುಧಾರಣೆ ಸಾಧ್ಯವೆಂದು ನಂಬಿದವರು.

ಅವರೆಂದೂ ಗುಂಪು ಕಟ್ಟಲಿಲ್ಲ. ಹರಿದಾಸರು ಜನಪರವಾಗಿದ್ದರೂ ಜನರ ಗುಂಪಿನ ಗೊಂದಲದಲ್ಲಿ ಕಳೆದು ಹೋಗದೆ ಬಾಳಿದರು. ಕ್ರಾಂತಿ, ನೂತನ ಧರ್ಮಸ್ಥಾಪನೆ, ಮತ ಪರಿವರ್ತನೆಗಳಂತಹ ವಿಕಾರಗಳಿಗೆ ಮುಂದಾಗದೆ 'ನಮ್ಮ ಮತಿ ಶುದ್ಧವಾಗಲಿ; ನಡೆ ಸರಳವಾಗಲಿ, ಬದುಕು ಸುಂದರವಾಗಲಿ' ಎಂಬ ದಿಕ್ಕಿನಲ್ಲಿ ತಮ್ಮ ಸರ್ವಸ್ವವನ್ನೂ ಸವೆಸಿದರು. ಮನೆ ಮನೆಗೆ ಸಂಚರಿಸಿ ಮಾನವ ಜೀವನದ ಮೌಲ್ಯಗಳ ಬಗೆಗೆ ಎಚ್ಚರಿಕೆ ನೀಡಿದರು. ಅವರು ಸಮಸ್ಯೆಗಳ ತೀವ್ರತೆಯನ್ನು ವರ್ಣಿಸಿ ಜನರನ್ನು ಹೆದರಿಸಿ ಅವರಲ್ಲಿ ಜುಗುಪ್ಸೆ ಮೂಡಿಸಲಿಲ್ಲ. ಬದಲಾಗಿ, ಕಷ್ಟದ ನಿಜ ಸ್ವರೂಪವನ್ನು, ಅದರ ಕಾರಣ-ಪರಿಣಾಮ-ಪರಿಹಾರಗಳನ್ನು ಹೇಳಿ; ಜನರ ಭರವಸೆ ತಪ್ಪಿದ ಬದುಕಿಗೆ ಸಾಂತ್ವನದ ತಂಪೆರೆದರು. ಈ ಮೂಲಕ ಜೀವನ ನಿಷ್ಠೆಯನ್ನು ಸ್ವತಃ ಆಚರಣೆಗೆ ತಂದರು. ಅದನ್ನೇ ಸರಳ ಕನ್ನಡ ಪದಗಳಲ್ಲಿ ಪ್ರತಿಪಾದಿಸಿದರು. 'ಈಸಬೇಕು ಇದ್ದು ಜಯಿಸಬೇಕು' ಎಂದು ಕರೆನೀಡಿದರು.

ಯಾವುದೇ ಸಮಸ್ಯೆಗೆ ಸಾವು-ಜುಗುಪ್ಸೆಗಳೇ ಪರಿಹಾರವಲ್ಲ. ಯಾರಿಗೂ ಇಲ್ಲದ ಕಷ್ಟಗಳು ನಮಗೆ ಮಾತ್ರ ಬಂದಿಲ್ಲ. ನಮಗೆ ಅನೇಕ ಕರ್ತವ್ಯಗಳಿವೆ. ಅವುಗಳನ್ನು ಪಾಲಿಸದಿದ್ದರೆ ಕರ್ತವ್ಯ ಪಾಲನೆಯ ಹೊಣೆಗಾರಿಕೆಯಿಂದ ನುಣುಚಿಕೊಂಡಂತಾಗುತ್ತದೆ. ಎಂದು ಎಚ್ಚರಿಸಿದರು. ''ಮೀರಿ ಆಸೆ ಮಾಡದ್ಹಾಂಗೆ

ಈಸಬೇಕು ಇದ್ದು ಜಯಿಸಬೇಕು" ಎಂಬ ದಾಸರ ಮಾತುಗಳು ಎಂದಿಗಿಂತ ಇಂದಿನ ದಿನಗಳಲ್ಲಿ ಹೆಚ್ಚು ಪ್ರಸ್ತುತವಾಗಿವೆ. ನಮ್ಮ ಹೊಸ ತಲೆಮಾರಿನಲ್ಲಿ ಜೀವನಪ್ರೇಮವನ್ನು ಜಾಗೃತಿಗೊಳಿಸಲು ಶ್ರೀ ಹರಿದಾಸರ ಸಂದೇಶಗಳ ಮನನ ಸಹಾಯಕವಾಗುತ್ತದೆ.

ದಿನದನದ ಬದುಕಿನ ಜಂಜಡಗಳ ಮಧ್ಯೆ, ನೆಮ್ಮದಿಯನ್ನು ಹಂಬಲಿಸಿ ಹಲುಬುತ್ತಿರುವಾಗ, ಕನ್ನಡದ ಹರಿದಾಸರ ಸಾಂತ್ವನದ ಮಾತುಗಳು ನಮಗೆ ತಟ್ಟನೆ ನೆನಪಿಗೆ ಬರುತ್ತವೆ. ಎಂದೋ, ಯಾರೋ, ಎಲ್ಲೋ, ಆಡಿದ, ಹಾಡಿದ ಈ ಪದಗಳು; ಒಂದೇ ಗಳಿಗೆಯಲ್ಲಿ ನಮ್ಮ ಮುಖದಲ್ಲಿ ಮೂಡಿದ್ದ ಚಿಂತೆಯ ಗೆರೆಗಳನ್ನು, ಚಿತ್ತಿಲ್ಲದಂತೆ ಒರೆಸಿ ತೆಗೆಯುತ್ತವೆ. ಸಮಾಧಾನದ ನಿಟ್ಟುಸಿರಿನೊಡನೆ ಮತ್ತೆ ಮತ್ತೆ ಹೊರಹೊಮ್ಮುವ ಅವೇ ಎಳೆಗಳು ನಮ್ಮ ಮನದ ಆಳದಲ್ಲಿ ಬಹುಕಾಲ ನೆಲೆಸಿ ನಿಲ್ಲುತ್ತವೆ. ಈ ಅನುಭವವನ್ನು ಪಡೆಯಲು ಓದು ಬರೆಹದ ಒತ್ತಾಯವಿಲ್ಲ. ದನಿಯೆತ್ತಿ ಹಾಡುವ ದಾಸರಪದಗಳನ್ನು ಕೇಳುವ ಕಿವಿಯೊಂದಿದ್ದರೆ, ಹರಿದಾಸರ ನಡೆ ನುಡಿಗಳನ್ನು ಪೂರ್ವಗ್ರಹವಿಲ್ಲದೆ ಪ್ರೀತಿಯಿಂದ ಕೇಳಿ ಸೈರಿಸುವ ಸಜ್ಜನಿಕೆ ಇದ್ದರೆ ಸಾಕು.

ಆಡಂಬರವಿಲ್ಲದ ಹರಿದಾಸರ ಸರಳ ರಚನೆಗಳು, ಕೇಳುವ ಕಿವಿಗೆ, ಹಾಡುವ ನಾಲಿಗೆಗೆ, ನೆನಪಿಡುವ ಮನಸ್ಸಿಗೆ ಸುಲಭವಾಗಿವೆ. ಸುಖಕರವಾಗಿವೆ. ಇವರ ಉಪದೇಶದ ನುಡಿಗಳು ವೇದ, ಉಪನಿಷತ್ತು, ಭಗವದ್ಗೀತೆ, ರಾಮಾಯಣ, ಮಹಾಭಾರತ, ಭಾಗವತ ಮೊದಲಾದ ಶಾಸ್ತ್ರ ಗ್ರಂಥಗಳ ಸಾರಸಂಗ್ರಹವಾಗಿವೆ. ವಯಸ್ಸಿನ ಲೆಕ್ಕವಿಲ್ಲದೆ, ಒಳ್ಳೆಯವರಾಗಿ ಬದುಕಲು ಬಯಸುವ ಎಲ್ಲ ಕಾಲದ ನೀತಿ ಪ್ರಿಯರಿಗೆ ದಾರಿದೀಪವಾಗಿವೆ.

ಹರಿದಾಸ ಸಂಸ್ಕೃತಿಯು ಕಾವೇರಿಯಿಂದ ಭೀಮರಥಿಯವರೆಗೆ ಹಬ್ಬಿದೆ. ತುಂಗಭದ್ರೆಯ ಇಕ್ಕೆಲಗಳಲ್ಲಿ ದಟ್ಟವಾಗಿ ಬೀಡುಬಿಟ್ಟಿದೆ. ಕರಾವಳಿಯ, ಮಲೆನಾಡಿನ ಹಾಗೂ ಬಯಲು ಸೀಮೆಯ ವಿವಿಧ ಜನಪದ ಗಳಲ್ಲಿ ವ್ಯಾಪಿಸಿದೆ. ಪೂರ್ವದಲ್ಲಿ ಆಂಧ್ರದ ತಿರುಪತಿ, ಪಶ್ಚಿಮದಲ್ಲಿ ಕರ್ನಾಟಕದ ಉಡುಪಿ, ಉತ್ತರದಲ್ಲಿ ಇಂದಿನ ಮಹಾರಾಷ್ಟ್ರದ ಪಂಢರಪುರ, ದಕ್ಷಿಣದಲ್ಲಿ ತಮಿಳುನಾಡಿನ ಶ್ರೀರಂಗ ಈ ನಾಲ್ಕು ವೈಷ್ಣವ ಕ್ಷೇತ್ರಗಳು ಎಲ್ಲ ಹರಿದಾಸರ ಸ್ಫೂರ್ತಿ ಕೇಂದ್ರಗಳಾಗಿವೆ. ಈ ಚತುರ್ಧಾಮಗಳನ್ನು ಸೇರಿಸುವ ರೇಖೆಗಳು ಹರಿದಾಸ ಸಂಸ್ಕೃತಿಯ ದಟ್ಟ ಪ್ರಭಾವವನ್ನು ಸೂಚಿಸುವ ಸೀಮಾರೇಖೆಗಳಾಗಿವೆ.

ಹೀಗೆ ಕರ್ನಾಟಕ ಮೂಲದ ಹರಿದಾಸ ಪಂಥವು ದಕ್ಷಿಣ ಭಾರತದಾದ್ಯಂತ ವ್ಯಾಪಿಸಿದೆ. ಕನ್ನಡಿಗರು ನೆಲೆಸಿರುವ ಹಾಗೂ ಸಂಚರಿಸುವ ವಿವಿಧ ದೇಶಗಳಲ್ಲೂ ಇದರ ಪ್ರಭಾವವು ಗೋಚರಿಸತೊಡಗಿದೆ. ದಾಸರ ಕೃತಿಗಳನ್ನು ದಕ್ಷಿಣ ಭಾರತದ ಕನ್ನಡ ಬಲ್ಲ ಸಮಸ್ತ ಜನರು ಏಕರೂಪದ ಶ್ರದ್ಧೆಯಿಂದ, ಪ್ರೀತಿಯಿಂದ ಹಾಡಿಕೊಂಡು ಬಂದಿದ್ದಾರೆ. ಹಾಡಿದ್ದನ್ನು ಸಹನೆಯಿಂದ ಕೇಳಿಸಿಕೊಂಡು ತಮ್ಮಲ್ಲಿ ತಾವು

ಗುಣುಗುಣಿಸಿದ್ದಾರೆ. ಅಂದಂದಿನ ಚಿಂತೆಗಳಿಗೆ ದಾಸರ ಮಾತುಗಳಲ್ಲಿ ಪರಿಹಾರ ಕಂಡುಕೊಂಡಿದ್ದಾರೆ. ಹರಿದಾಸರ ಪದಗಳು ನಾಲ್ಕೈದು ಶತಮಾನಗಳ ದೀರ್ಘಕಾಲಾವಧಿಯ ವಿಸ್ಮೃತಿಯ ಪರೀಕ್ಷೆಯಲ್ಲಿ ಗೆದ್ದು ಉಳಿದುಬಂದಿವೆ. ಇಂದಿಗೂ ಪ್ರಸ್ತುತವಾಗಿವೆ. ಅಮೂಲ್ಯವಾಗಿವೆ.

ಹರಿದಾಸರ ರಚನೆಗಳ ಜನಪ್ರಿಯತೆಗೆ ಅಲ್ಲಿನ ಸಾಹಿತ್ಯಕ ಗುಣವೊಂದೇ ಕಾರಣವಲ್ಲ. ಸಂಗೀತದ ಪಾತ್ರವಿದ್ದರೂ ಅದೇ ಮುಖ್ಯ ಅಂಶವಲ್ಲ. ಹರಿದಾಸರ ಕೃತಿಗಳ ಮಹತ್ವವಿರುವುದು :

೧. ಅವರ ಸರಳ ಪ್ರಾಮಾಣಿಕ ದೈವಭಕ್ತಿಯಲ್ಲಿ

೨. ಅದನ್ನು ಜನಸಾಮಾನ್ಯರೂ ಒಪ್ಪುವ ರೀತಿಯಲ್ಲಿ, ಶಾಸ್ತ್ರಸಮ್ಮತವಾಗಿ ಅರಿತು, ಅನುಸರಿಸಿ, ಆಚರಿಸಿ, ಮನೆ ಮನೆಗೂ ತಿಳಿಸಿ ಹೇಳಿದ ಕಾಳಜಿಯಲ್ಲಿ

೩. ಈ ನೆಲದ ಮಣ್ಣಿನಲ್ಲಿ, ಇಲ್ಲಿಯ ಜನರ ಮನಸ್ಸಿನ ಮೂಲೆ ಮೂಲೆಗಳಲ್ಲಿ, ಆ ಮೊದಲೇ ತುಂಬಿ ನಿಂತಿದ್ದ ರಾಮಾಯಣ, ಮಹಾಭಾರತ ಮತ್ತು ಭಾಗವತ ಮಹಾಪುರಾಣಗಳ ಉತ್ತಮ ಮೌಲ್ಯಗಳನ್ನು ಸರಿಯಾಗಿ ಗುರುತಿಸಿ, ಮೂಲಕ್ಕೆ ಧಕ್ಕೆಬರದಂತೆ ಕನ್ನಡದಲ್ಲಿ ಆಕರ್ಷಕವಾಗಿ ತಿಳಿಸಿಕೊಡುವ ಸಾಂಸ್ಕೃತಿಕ ಜವಾಬ್ದಾರಿಯನ್ನು(ಕನ್ನಡ ಸಾಹಿತ್ಯದ ಇತರ ಪರಂಪರೆಗಳು ಕೈಬಿಟ್ಟಿದ್ದಾಗ, ಹರಿದಾಸರು ಆ ಹೊಣೆಗಾರಿಕೆಯನ್ನು) ಸಮರ್ಪಕವಾಗಿ ನಿರ್ವಹಿಸಿದ್ದರಲ್ಲಿ

೪. ಇತರ ಜಾತಿ, ಮತಗಳೊಂದಿಗೆ (ಕೆಲವು ಆಚರಣೆಗಳನ್ನೂ ತತ್ವಗಳನ್ನೂ ಒಪ್ಪದಿದ್ದರೂ) ತಾತ್ವಿಕ ಭಿನ್ನಾಭಿಪ್ರಾಯದ ಮಧ್ಯೆಯೂ ಪರಸ್ಪರ ಗೌರವದಿಂದ ಬಾಳಲು ಸಾಧ್ಯವೆಂಬುದನ್ನು ಬಾಳಿ ತೋರಿಸಿದ ಮಾನವಪ್ರೇಮದಲ್ಲಿ

೫. ಭಾಗವತದ ಪ್ರಾಚೀನ ಜೀವನ ಮೌಲ್ಯಗಳನ್ನೇ ಪ್ರೀತಿಯಿಂದ ಮತ್ತೆ ಮತ್ತೆ ಹಾಡಿದ ತಾಳ್ಮೆಯಲ್ಲಿ

೬. ಜನರು ಇದನ್ನು ಖಂಡಿತ ಕೇಳಿಸಿಕೊಳ್ಳುತ್ತಾರೆ, ನೆನಪಿಟ್ಟುಕೊಳ್ಳುತ್ತಾರೆ, ತಮ್ಮ ಬದುಕಿನ ಓರೆಕೋರೆಗಳನ್ನು ತಿದ್ದಿಕೊಳ್ಳುತ್ತಾರೆ-ಎಂದೆಲ್ಲ ನಂಬಿದ್ದರಲ್ಲ; ಆ ನಂಬಿಕೆಯಲ್ಲಿ

೭. ಮನುಷ್ಯನ ಲೌಕಿಕ-ಆಧ್ಯಾತ್ಮಿಕ ಬದುಕನ್ನು ಸುಧಾರಿಸಲು ಮತಾಂತರ ಬೇಕಿಲ್ಲ ಭಗವಂತನನ್ನು ಒಲಿಸಲು ಮತ ಪರಿವರ್ತನೆ ಬೇಡ, ಮತಿ ಸರಿಯಾಗಿದ್ದರೆ ಸಾಕು; ಜಾತಿಗಿಂತ ಭಕ್ತಿ, ನೀತಿಯೇ ಮುಖ್ಯ ಎಂಬ ಇಂದಿಗೂ ಪ್ರಸ್ತುತವಾದ ವಾಸ್ತವ ಸತ್ಯವನ್ನು ಅಂದೇ ಕಂಡುಕೊಂಡರಲ್ಲ; ಆ ಉದಾತ್ತ ಜೀವನ ದರ್ಶನದಲ್ಲಿ

೮. ಯಾವುದೇ ಕ್ರಾಂತಿಯ ಭ್ರಮೆಯನ್ನು ಸೃಷ್ಟಿಸದೆ, ಇರುವ ಸೌಲಭ್ಯಗಳಲ್ಲೇ ಶಾಂತಿ-ತೃಪ್ತಿಗಳಿಂದ ಬಾಳಲು ಸಾಧ್ಯವಿರುವುದನ್ನು ಬೋಧಿಸಿ, ಸಾಧಿಸಿ ತೋರಿಸಿದ್ದರಲ್ಲಿ

ಹರಿದಾಸರ ಈ ಮನಃಪರಿಪಾಕಕ್ಕೆ ಪ್ರೇರಣೆ ಎಲ್ಲಿಂದ ದೊರೆತಿರಬಹುದು? ಹರಿದಾಸ ಸಂಸ್ಕೃತಿಯ ವಿಶಿಷ್ಟ ಲಕ್ಷಣಗಳಾದ ಸತತ ಸಂಚಾರ, ತಾಳ-ತಂಬೂರಿಗಳ ಬಳಕೆ, ಗೀತ-ನರ್ತನ, ಸತತ ಹರಿನಾಮಸ್ಮರಣೆ, ವಿಷ್ಣು-ವೈಷ್ಣವ ಕಥಾ ನಿರೂಪಣೆ, ಭಕ್ತಿ-ವೈರಾಗ್ಯಗಳಿಗೆ ವಿಶೇಷ ಪ್ರಾಶಸ್ತ್ಯ, ಸಾಮಾನ್ಯತಾ ಪ್ರೀತಿ, ಲೋಕ ನೀತಿಗಳಿಗೆಲ್ಲ ಆಕರವೆನಿಸುವ ಪೂರ್ವಪರಂಪರೆಯೊಂದು ಆ ಮೊದಲು ಇತ್ತೆ? ಅದರ ಸ್ವರೂಪವೇನು ಎಂಬ ಜಿಜ್ಞಾಸೆ ಅಗತ್ಯವೆನಿಸುತ್ತದೆ.

ಇದುವರೆಗೆ ತಿಳಿದುಬಂದ ಮಟ್ಟಿಗೆ ಸಂಸ್ಕೃತದ ಶ್ರೀಮದ್ಭಾಗವತ ಪುರಾಣವು ಹರಿದಾಸರ ಸರ್ವಲಕ್ಷಣಗಳ ಮಹತ್ವವನ್ನು ಏಕತ್ರ ಪ್ರತಿಪಾದಿಸುವ ಪ್ರಾಚೀನ ಆಕರ ಗ್ರಂಥವಾಗಿದೆ. ಇತರ ಎಲ್ಲ ವೈಷ್ಣವ ವಾಙ್ಮಯದ ಸಾರರೂಪವಾದ ಭಾಗವತವು ಭಾರತದೇಶದ ಮಧ್ಯಕಾಲೀನ ಐತಿಹಾಸಿಕ ಭಕ್ತಿಪಂಥಗಳ ಮೇಲೆ ಗಾಢವಾದ ಪ್ರಭಾವ ಬೀರಿದೆ. ಹರಿದಾಸ ಸಾಹಿತ್ಯದ ಬಹುಭಾಗವು ಭಾಗವತಾನು ಸಾರಿಯಾಗಿದೆ. ಆದ್ದರಿಂದ ಹರಿದಾಸ ಸಾಹಿತ್ಯದ ಸ್ವರೂಪದ ತಿಳುವಳಿಕೆಯ ಸ್ಪಷ್ಟತೆ ಹಾಗೂ ಸಮಗ್ರತೆಗಾಗಿ; ಹರಿದಾಸರ ಕೃತಿಗಳನ್ನು ಭಾಗವತದೊಂದಿಗೆ ತೌಲನಿಕವಾಗಿ ಪರಿಶೀಲಿಸುವುದು ಅಗತ್ಯವೆನಿಸುತ್ತದೆ.

## ೧.೨. ಅಧ್ಯಯನದ ಹಿಂದಣ ಹೆಜ್ಜೆಗಳು

ಕನ್ನಡ ದಾಸ ಸಾಹಿತ್ಯವನ್ನು ಭಾಗವತದೊಂದಿಗೆ ತೂಗಿನೋಡುವ ಪ್ರಯತ್ನ ಇಂದು ನಿನ್ನೆಯದಲ್ಲ. ಡಾ.ಎ.ಟಿ.ಪಾಟೀಲರು (೧೯೪೫) ಈಗ್ಗೆ ಆರು ದಶಕಗಳ ಹಿಂದೆಯೇ ಈ ಮಾರ್ಗವನ್ನು ಆರಂಭಿಸಿದ್ದಾರೆ. ಪಾಟೀಲರ **'ಪ್ರಸನ್ನ ವೆಂಕಟದಾಸರು ಮತ್ತು ಅವರ ಕೃತಿಗಳು'** ಎಂಬ ಗ್ರಂಥವು ಹರಿದಾಸ ಸಾಹಿತ್ಯದ, ಮಾತ್ರವಲ್ಲದೆ ಕನ್ನಡ ಸಾಹಿತ್ಯ ಕ್ಷೇತ್ರದ ಮೊದಲ ಸಂಶೋಧನ ಮಹಾಪ್ರಬಂಧವೆಂಬ ಐತಿಹಾಸಿಕ ಮಹತ್ವಹೊಂದಿದೆ. ಈ ಗ್ರಂಥದಲ್ಲಿ ಮೊದಲು ವೈಷ್ಣವ ಧರ್ಮದ ಇತಿಹಾಸ, ಹರಿದಾಸ ಪರಂಪರೆ, ಪ್ರಸನ್ನ ವೆಂಕಟದಾಸರ ಜೀವನ ಹಾಗೂ ಸಾಹಿತ್ಯಗಳನ್ನು ಪರಿಚಯಿಸಿದ ನಂತರ, ಕೀರ್ತನ ಗುಚ್ಛದ ರೂಪದಲ್ಲಿರುವ, ದಾಸರ ದಶಮಸ್ಕಂಧ ಕನ್ನಡ ಭಾಗವತವನ್ನು ಸಂಸ್ಕೃತ ಮೂಲವಾದ ಭಾಗವತ ದಶಮಸ್ಕಂಧ ಪೂರ್ವಾರ್ಧದೊಂದಿಗೆ ತೌಲನಿಕವಾಗಿ ವಿಶ್ಲೇಷಿಸಿದ್ದಾರೆ.

ಸಂಶೋಧಕರು ಮೂಲದ ಒಂದೊಂದು ಶ್ಲೋಕವನ್ನೂ ಬಿಡದೆ ಜಾಲಾಡಿ, ದಾಸರು ಮೂಲದಿಂದ ಸ್ವೀಕರಿಸಿದ ಮತ್ತು ಕೈಬಿಟ್ಟ ಕಥಾಂಶಗಳ ಸೂಕ್ಷ್ಮಾತಿ ಸೂಕ್ಷ್ಮ ಘಟಕಗಳನ್ನು ಸುದೀರ್ಘವಾಗಿ ಸಮೀಕ್ಷಿಸಿದ್ದಾರೆ. ಪ್ರಸನ್ನ ವೆಂಕಟದಾಸರ ಕೀರ್ತನೆಗಳ ಕಾವ್ಯಗುಣ, ಸ್ವಂತಿಕೆ ಹಾಗೂ ಮಹತ್ವಗಳನ್ನು ಸಮರ್ಪಕವಾಗಿ ಗುರುತಿಸಿ ಮೌಲ್ಯಮಾಪನ ಮಾಡಿದ್ದಾರೆ. ಇಲ್ಲಿ ವ್ಯಕ್ತವಾಗುವ ಅವರ ಅಧ್ಯಯನ ಶ್ರದ್ಧೆ ಮತ್ತು ಅಪಾರ ಪರಿಶ್ರಮದ ಬಗ್ಗೆ ಗೌರವ ಮೂಡುತ್ತದೆ. ಆಧುನಿಕ ಕನ್ನಡ ವಿಮರ್ಶೆ ರೂಪುಗೊಳ್ಳುವ ಮೊದಲೇ

ನಡೆದ ಈ ಸಂಶೋಧನೆಯಲ್ಲಿ ಅತಿನೂತನ ಮಾನದಂಡಗಳ ಹಿನ್ನೆಲೆಯನ್ನು ನಿರೀಕ್ಷಿಸುವಂತಿಲ್ಲ. ವಸ್ತುವು ಕಥಾ ಪ್ರಧಾನವಾದ್ದರಿಂದ ಹೆಚ್ಚಿನ ತಾತ್ವಿಕ ಸಾಮಾಜಿಕ ವಿಚಾರಗಳ ಚರ್ಚೆಗೆ ಆಸ್ಪದವಾಗಿಲ್ಲ.

ಡಾ.ಟಿ.ಎನ್.ನಾಗರತ್ನ(೧೯೭೫) ಅವರ **'ಹರಿದಾಸ ಸಾಹಿತ್ಯದಲ್ಲಿ ಭಕ್ತಿಯ ಸ್ವರೂಪ'** ಎಂಬ ಸಂಶೋಧನ ಮಹಾಪ್ರಬಂಧವು ದಾಸರ ಕೃತಿಗಳಲ್ಲಿ ವ್ಯಕ್ತವಾದ ಭಕ್ತಿತತ್ವದ ಸಮಗ್ರ ಸಮರ್ಪಕ ಅಧ್ಯಯನವಾಗಿದೆ. ಇದರಲ್ಲಿ ಅವರು ಸಾಕಾರ ಸಗುಣಭಕ್ತಿ, ನವವಿಧ ಭಕ್ತಿ, ಪಂಚಭಾವಗಳು, ದಾಸ ಸಾಹಿತ್ಯದಲ್ಲಿ ಭಾಗವತದ ಬಳಕೆ ಮತ್ತು ದಶಾವತಾರ ಚಿತ್ರಣಗಳನ್ನು ವಿವರಿಸುವಾಗ ಭಾಗವತವನ್ನು ಹಾಗೂ ಅದೇ ವಸ್ತುವುಳ್ಳ ಹರಿದಾಸರ ಪದಗಳನ್ನು ಔಚಿತ್ಯಪೂರ್ಣವಾಗಿ ತುಲನಾತ್ಮಕವಾಗಿ ಸಮಾಲೋಚಿಸಿದ್ದಾರೆ.

ವಾಸುದೇವ ಅಗ್ನಿಹೋತ್ರಿ(೧೯೮೪) ಅವರು **'ಪುರಂದರ ದಾಸರು ಮತ್ತು ಶ್ರೀಮದ್ಭಾಗವತ ಒಂದು ತೌಲನಿಕ ಅಧ್ಯಯನ'** ಎಂಬ ಸಂಶೋಧನ ಮಹಾಪ್ರಬಂಧದಲ್ಲಿ ಪುರಂದರ ದಾಸರನ್ನು ಆದರ್ಶದಾಸರೆಂದೂ, ಭಾಗವನ್ನು ಆದರ್ಶಪುರಾಣವೆಂದೂ ನಿರೂಪಿಸಿದ್ದಾರೆ. ಕನ್ನಡ ಭಾಗವತ ಕಾವ್ಯಗಳು ಹಾಗೂ ಹರಿದಾಸರ ಕೀರ್ತನೆಗಳಲ್ಲಿ ಕಂಡುಬರುವ ಭಾಗವತ ವಸ್ತುವನ್ನು ಅವಲೋಕಿಸಿದ್ದಾರೆ.

ಪುರಂದರ ದಾಸರ ಕೀರ್ತನೆಗಳಲ್ಲಿರುವ ಶ್ರೀಮದ್ಭಾಗವತ ವಿವರಗಳನ್ನು 'ಆದರ್ಶ ಭಕ್ತರು' ಹಾಗೂ 'ದಶಮಸ್ಕಂಧ ಅಥವಾ ಕೃಷ್ಣಲೀಲೆ' ಎಂಬ ಭಾಗಗಳಲ್ಲಿ ವಿಸ್ತಾರವಾಗಿ ಚರ್ಚಿಸಿದ್ದಾರೆ. ಕಥಾ ಕೇಂದ್ರಿತ ದೃಷ್ಟಿಯಿಂದ ನಡೆದ ಈ ಅಧ್ಯಯನದಲ್ಲಿ ದಾಸರ ಕೃತಿಗಳ ರಸವಿಮರ್ಶೆ ಸೊಗಸಾಗಿ ಮೂಡಿ ಬಂದಿದೆ.

ಅವರೇ ಹೇಳಿರುವಂತೆ, ಹರಿದಾಸ ಸಾಹಿತ್ಯ ವಲಯದಲ್ಲಿ ಅದುವರೆಗೆ ಪ್ರಕಟವಾದ ಕೃತಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳುವುದಾದರೆ ಪುರಂದರ ದಾಸರ ಕೃತಿಗಳನ್ನು ಭಾಗವತ ಮೂಲಕ್ಕೆ ಹೋಲಿಸಿ ಅವುಗಳ ವೈಶಿಷ್ಟ್ಯ ಮತ್ತು ಸ್ವಾರಸ್ಯವನ್ನು ಸಹೃದಯರಿಗೆ ತೋರಿಸುವಲ್ಲಿ ಇದು ಪ್ರಥಮ ಸೂಕ್ತ ಪ್ರಯತ್ನವೆನ್ನಬಹುದು. ಇಲ್ಲಿ ತತ್ವ ಪ್ರತಿಪಾದನೆ ಹಾಗೂ ಜೀವನ ದೃಷ್ಟಿಯನ್ನು ಕುರಿತ ಪುರಂದರದಾಸರ ಭಾಗವತ ಸಂಬಂಧಿ ಕೀರ್ತನೆಗಳು ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿಲ್ಲ.

ನಾರಾಯಣಾಚಾರ್ಯ ಧೂಳಖೇಡ (೧೯೮೭) ಅವರ **'ಶ್ರೀ ಹರಿಕಥಾಮೃತ ಸಾರ ಹಾಗೂ ಭಾಗವತ ಧರ್ಮ ಒಂದು ತೌಲನಿಕ ಅಧ್ಯಯನ'** ಎಂಬ ಮಹಾಪ್ರಬಂಧವು ಭಾಗವತ ಪುರಾಣದ ಬೋಧನೆಗಳ ಸಾರವಾದ 'ಮೂವತ್ತು ಭಾಗವತ ಧರ್ಮಗಳ' ಪರಿಚಯ ಹಾಗೂ ಹರಿದಾಸ ಪರಂಪರೆಯ ಮೇರುಕೃತಿಯಾದ, 'ಹರಿಕಥಾಮೃತ ಸಾರ'ದಲ್ಲಿ, ಜಗನ್ನಾಥ ದಾಸರು ಅವುಗಳನ್ನು ಪ್ರತಿಪಾದಿಸಿರುವ ಕ್ರಮದ ಅಧ್ಯಯನವಾಗಿದೆ. ಇಲ್ಲಿ ಭಕ್ತಿ ತತ್ವ ವಿಕಾಸ, ಭಾಗವತ ಧರ್ಮದ ಪ್ರಾಚೀನತೆ ಹಾಗೂ ಬೆಳವಣಿಗೆ, ಕನ್ನಡ ಸಾಹಿತ್ಯದಲ್ಲಿ ವಿಷ್ಣುಭಕ್ತಿ ನಿರೂಪಣೆ ಮುಂತಾದ ಐತಿಹಾಸಿಕ ಸಮೀಕ್ಷೆಗೆ ಹೆಚ್ಚು ಒತ್ತು ನೀಡಿದ್ದಾರೆ.

ಸಂತ ಭದ್ರಗಿರಿ ಅಚ್ಯುತದಾಸರು 'ಹರಿಕಥಾಮೃತ ಸಿಂಧು ಶ್ರೀಮದ್ಭಾಗವತ ಶ್ರೀ ಕೃಷ್ಣಕಥಾವಾಹಿನಿ' ಭಾಗ-೧ (೧೯೯೩) ಮತ್ತು ಭಾಗ-೨ (೨೦೦೨) ಎಂಬ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಹರಿಕಥಾ ಕೀರ್ತನೆಗೆ ಅನುಕೂಲವಾಗುವಂತೆ ಶ್ರೀಮದ್ಭಾಗವತದ ಕತೆ ತತ್ವ ಮೌಲ್ಯಗಳನ್ನು ಸಮರಸವಾಗಿ ಸಮಗ್ರತೆ ಕೆಡದಂತೆ ಸಂಕ್ಷಿಪ್ತವಾಗಿ ಸರಳ ಗದ್ಯದಲ್ಲಿ ನಿರೂಪಿಸುತ್ತಾ ಜೊತೆ ಜೊತೆಗೆ ಅದೇ ವಸ್ತುವುಳ್ಳ ಹರಿದಾಸರ ಕೀರ್ತನೆಗಳನ್ನು ಬಳಸಿದ್ದಾರೆ. ಇದು ಒಂದು ರೀತಿಯ ತೌಲನಿಕ ಅಧ್ಯಯನವೇ ಆಗಿದೆ. ಇದರಲ್ಲಿ ಭದ್ರಗಿರಿ ಅಚ್ಯುತದಾಸರ 'ಮೂಲನಾರಾಯಣ' ಅಂಕಿತದ ಸ್ವರಚಿತ ಕೀರ್ತನೆಗಳು ಹೆಚ್ಚಿನ ಸಂಖ್ಯೆಯಲ್ಲಿ ಮುದ್ರಿತ ವಾಗಿವೆ.

ಈ ಮೇಲಿನ ಐದು ಕೃತಿಗಳು ಅನುಕ್ರಮವಾಗಿ ತೌಲನಿಕ, ತಾತ್ವಿಕ, ಕಾವ್ಯಾತ್ಮಕ, ಚಾರಿತ್ರಿಕ ಹಾಗೂ ಅನ್ವಯಿಕ ಅಧ್ಯಯನ ವಿಧಾನಗಳನ್ನು ಪ್ರತಿನಿಧಿಸುತ್ತವೆ. ದಾಸರ ಕೃತಿಗಳನ್ನು ವಿವರಿಸುವ ಇತರ ಹಲವು ಗ್ರಂಥಗಳು ಹಾಗೂ ಲೇಖನಗಳಲ್ಲಿ ಅಲ್ಲಲ್ಲಿ ಕಂಡುಬರುವ ಹೊಳಹುಗಳು ಸಹ ಈ ಕ್ಷೇತ್ರದಲ್ಲಿ ಕೆಲಸ ಮಾಡುವವರಿಗೆ ಹೊಸ ಸಾಧ್ಯತೆಗಳ ಹಂಬಲವನ್ನು ಹುಟ್ಟಿಸುವಂತಿವೆ.

## ೧.೩. ಅಧ್ಯಯನದ ಉದ್ದೇಶ ಮತ್ತು ವಿನ್ಯಾಸ

ಕಳೆದ ನಾಲ್ಕಾರು ಶತಮಾನಗಳಿಂದ ಕನ್ನಡಿಗರ ಭಾಷೆ ಬರಹ ಬದುಕುಗಳ ಮೇಲೆ ದಟ್ಟ ಪ್ರಭಾವ ಬೀರಿ ಇಂದಿಗೂ ಪ್ರಚಲಿತವಾಗಿರುವ ಹರಿದಾಸ ಸಂಸ್ಕೃತಿಯು ಕನ್ನಡ ನಾಡಿನ ಜನ ಜೀವನ ಪದ್ಧತಿಯ ವಿಶಿಷ್ಟ ಮುಖಗಳಲ್ಲೊಂದು. ಈ ಪರಂಪರೆಯ ಕೊಡುಗೆಗಳ ಸೈದ್ಧಾಂತಿಕ ವಿಶ್ಲೇಷಣೆಯು ನಮ್ಮ ಅರಿವಿನ ವಲಯವನ್ನು ವಿಸ್ತರಿಸಬಲ್ಲದು.

ಹರಿದಾಸ ಸಾಹಿತ್ಯವನ್ನು ಕುರಿತು ಕನ್ನಡದಲ್ಲಿ ಈಗಾಗಲೇ ಸಾಕಷ್ಟು ಚಿಂತನೆ, ಬರವಣಿಗೆಗಳಾಗಿವೆ. ಸಾಹಿತ್ಯ ಚರಿತ್ರೆ, ಆಕರ ಗ್ರಂಥಗಳು, ಸಮೀಕ್ಷಾ ಲೇಖನಗಳು, ದಾಸರ ಕೃತಿಗಳನ್ನು ಕುರಿತ ವಿಮರ್ಶೆಗಳು ಹಾಗೂ ಸಂಶೋಧನಾತ್ಮಕ ಅಧ್ಯಯನಗಳು ಪ್ರಕಟವಾಗಿವೆ. ಆದರೆ ಇದುವರೆಗೆ ಬಂದ ಬರಹಗಳ ಹೆಚ್ಚಿನ ಭಾಗದಲ್ಲಿ ಭಕ್ತಿ ಪಂಥದ ಇತಿಹಾಸ, ಹರಿದಾಸ ಪರಂಪರೆಯ ಹಿನ್ನೆಲೆ, ಉಗಮ, ವಿಕಾಸ, ದಾಸರ ಜೀವನ ಚರಿತ್ರೆ, ವ್ಯಾಸಕೂಟ-ದಾಸಕೂಟಗಳೆಂಬ ಕಲ್ಪಿತ ಪಂಥಗಳ ಜಗ್ಗಾಟದ ನಿರೂಪಣೆಯಂತಹ ವಿಷಯಗಳೇ ಪುನರಾವರ್ತಿತವಾಗಿವೆ. ಈ ಭಾಗಗಳಿಂದ ಹೆಚ್ಚಿನ ಉಪಕಾರವನ್ನು ನಿರೀಕ್ಷಿಸುವಂತಿಲ್ಲ.

ಈ ಅಭಿಪ್ರಾಯಕ್ಕೆ ಅಪವಾದವೆಂಬಂತಹ ಮಹತ್ವದ ಬರಹಗಳುಳ್ಳ ಭಾಗಗಳೂ ಸಾಕಷ್ಟಿವೆಯೆಂಬುದು ಸಮಾಧಾನಕರ ಸಂಗತಿ. ದಾಸರ ಪದಗಳ ರಸವಿಮರ್ಶೆ, ಸಾಮಾಜಿಕ ವಿಮರ್ಶೆ ಹಾಗೂ ತೌಲನಿಕ ವಿಮರ್ಶೆಯ ರೂಪದ ಅಧ್ಯಯನಗಳನ್ನು ಈ ಗುಂಪಿನಲ್ಲಿ ಪರಿಗಣಿಸಬಹುದು.

ಆದರೆ ಹರಿದಾಸರ ಕೃತಿಗಳ ವಸ್ತು-ಆಶಯ-ಆಕೃತಿಗಳು; ಒಂದು ಸಾಂಸ್ಕೃತಿಕ ರೂಪವಾಗಿ ಅವು ಸಂಸ್ಕೃತಿಯನ್ನೂ, ವ್ಯಕ್ತಿತ್ವಗಳನ್ನೂ ರೂಪಿಸುವ ರೀತಿ ಇವುಗಳನ್ನು ಸೈದ್ಧಾಂತಿಕವಾಗಿ ಚರ್ಚಿಸುವ ಯತ್ನವು ವಿರಳವಾಗಿ ನಡೆದಿದೆ. ಇಂತಹ ಅಧ್ಯಯನಗಳು ಇಂದಿನ ಅಗತ್ಯಗಳಾಗಿವೆ.

ಹರಿದಾಸರ ಪದಗಳ ತಾತ್ವಿಕ ಸ್ವರೂಪವೇನು? ಅವುಗಳನ್ನು ಸೃಜನಶೀಲ ಸಾಹಿತ್ಯದ ಗುಂಪಿನಲ್ಲಿ ಪರಿಗಣಿಸಬಹುದೆ? ದಾಸರ ರಚನೆಗಳ ಮೇಲೆ ಪರಂಪರೆಯ ಪ್ರಭಾವ ಯಾವ ರೀತಿಯದು? ಅವರ ವೈಯಕ್ತಿಕ ಕೊಡುಗೆಗಳನ್ನು ನಿರ್ಧರಿಸುವ ಮಾನದಂಡಗಳಾವುವು? ಈ ನೆಲದ ಬದುಕನ್ನು ದಾಸರು ಯಾವ ದೃಷ್ಟಿಯಿಂದ ಕಂಡಿದ್ದಾರೆ? ಪುರುಷ ಪ್ರಯತ್ನದ ಬಗ್ಗೆ ಅವರ ನಿಲವೇನು? ಇದುವರೆಗೆ ಬಂದ ಕನ್ನಡ ಸಾಹಿತ್ಯ ಚರಿತ್ರೆಗಳು ಹಾಗೂ ವಿಮರ್ಶೆಗಳು ಹರಿದಾಸ ಪರಂಪರೆಯನ್ನು ವಿಶ್ಲೇಷಿಸಿದ ವಿಧಾನಗಳ ಔಚಿತ್ಯವೆಷ್ಟು? ಹರಿದಾಸರ ಭಕ್ತಿಗೀತೆಗಳ ಸಂದೇಶಗಳು ನಮ್ಮ ಸಮಕಾಲೀನ ತಲ್ಲಣಗಳನ್ನು ಎದುರಿಸುವಲ್ಲಿ ಯಾವ ಅರ್ಥದಲ್ಲಿ ಎಷ್ಟರ ಮಟ್ಟಿಗೆ ಉಪಯುಕ್ತವಾಗಬಲ್ಲವು? ಇತ್ಯಾದಿ ಗಂಭೀರ ಪ್ರಶ್ನೆಗಳನ್ನು ಕೇಳಿಕೊಳ್ಳಬೇಕಾಗಿದೆ. ಆಧುನಿಕ ಸಂಸ್ಕೃತಿ ಅಧ್ಯಯನದ ಅಂತರ್ ಶಿಸ್ತೀಯ ವಿಧಾನಗಳಿಂದ ಸಂಶೋಧನೆ ನಡೆಸಿ ಖಚಿತ ಉತ್ತರಗಳನ್ನು ಕಂಡುಕೊಳ್ಳಬೇಕಾಗಿದೆ. ಇದಕ್ಕಾಗಿ ಹರಿದಾಸ ಸಂಸ್ಕೃತಿಯ ಸ್ಪಷ್ಟ ತಿಳುವಳಿಕೆಯ ಹಿನ್ನೆಲೆಯಲ್ಲಿ ಸಮಗ್ರ ಹರಿದಾಸ ಸಾಹಿತ್ಯದೊಂದಿಗೆ ಮುಖಾಮುಖಿ ನಡೆಸಬೇಕಾಗಿದೆ. ಈ ನಿಟ್ಟಿನ ಒಂದು ಪ್ರಯತ್ನವಾಗಿ **'ಹರಿದಾಸಸಾಹಿತ್ಯ-ಶ್ರೀಮದ್ಭಾಗವತ : ಋಣ ಮತ್ತು ವೃದ್ಧಿ'** ಎಂಬ ವಿಷಯವನ್ನು ಸಂಶೋಧನೆಗಾಗಿ ಆಯ್ಕೆ ಮಾಡಿಕೊಂಡು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ವಸ್ತು-ಆಶಯ-ಆಕೃತಿಗಳಿಗೆ ಸಂಬಂಧಿಸಿದಂತೆ ಹರಿದಾಸರ ಬಹುಪಾಲು ಕೃತಿಗಳು ಸಂಸ್ಕೃತದ ಶ್ರೀಮದ್ಭಾಗವತ ಪುರಾಣದಿಂದ ಪ್ರಭಾವಿತವಾಗಿರುವುದು ಕಂಡುಬರುವುದರಿಂದ; ಕಥನ, ತತ್ವಪ್ರತಿಪಾದನೆ ಮತ್ತು ಮೌಲ್ಯಪ್ರತಿಪಾದನೆಗಳೆಂಬ ಮೂರು ನೆಲೆಗಳಲ್ಲಿ ಹರಿದಾಸರು ಶ್ರೀಮದ್ಭಾಗವತದೊಂದಿಗೆ ಬೆಳೆಸಿಕೊಂಡ ಋಣಾನುಬಂಧದ ಸ್ವರೂಪವೇನು? ಭಾಗವತವನ್ನು ಕನ್ನಡೀಕರಿಸಿದಾಗ ಅವರು ಸಾಧಿಸಿದ ಅನನ್ಯತೆಯ ಲಕ್ಷಣಗಳೇನು? ಎಂಬುದರ ಅಧ್ಯಯನವೇ ಪ್ರಸ್ತುತ ಮಹಾಪ್ರಬಂಧದ ವಸ್ತುವಾಗಿದೆ.

ಸಂಸ್ಕೃತಿಯೊಂದು ಆಯಾ ಕಾಲದ ಅಗತ್ಯಗಳಿಗೆ ಅನುಗುಣವಾಗಿ ತನ್ನನ್ನು ತಾನು ಸಾಹಿತ್ಯ ಕೃತಿಗಳ ಮೂಲಕ ಪುನಾರಚಿಸಿಕೊಳ್ಳುವಾಗ, ಪರಂಪರೆ ಹಾಗೂ ವ್ಯಕ್ತಿಪ್ರತಿಭೆಗಳು ಸಂಯೋಜಿತವಾಗಿ ಸೃಜನ ಕ್ರಿಯೆಯನ್ನು ನಿರ್ವಹಿಸುವ ಬಗೆಯನ್ನು ಮುದ್ದಣನು 'ಋಣ ಮತ್ತು ವೃದ್ಧಿ' ಎಂಬ ಪಾರಿಭಾಷಿಕ ಪದಗಳಿಂದ ವರ್ಣಿಸಿದ್ದಾನೆ. ಈ ಪರಿಕಲ್ಪನೆಯು ಭಾರತೀಯ ಕಾವ್ಯಮೀಮಾಂಸಕರ 'ಅನನ್ಯ ಪರತಂತ್ರ', 'ಸ್ವೀಕರಣ' ಇತ್ಯಾದಿ ಪರಿಭಾಷೆಗಳಿಗಿಂತ ಹೆಚ್ಚು ವ್ಯಾಪಕವಾಗಿದೆ ಮತ್ತು ಹೆಚ್ಚು ಉಚಿತವಾಗಿದೆ. ಈ 'ಋಣ ಮತ್ತು ವೃದ್ಧಿ'ಗಳು ಸಾಹಿತ್ಯ ವಿಮರ್ಶೆಯ ಮತ್ತು ಸಂಸ್ಕೃತಿ ಪುನರ್ನಿರ್ಮಾಣದ ಪರಿಕರಗಳಾಗಿ

ದುಡಿಯುವ ಬಗೆಯನ್ನು ನಿರೂಪಿಸಿ; ಅದನ್ನೇ ಪ್ರಸ್ತುತ ಅಧ್ಯಯನದ ಸಂಶೋಧನ ವಿಧಾನವನ್ನಾಗಿ ಬಳಸಿಕೊಳ್ಳಲಾಗಿದೆ.

ಅಂದರೆ ಋಣ ಮತ್ತು ವೃದ್ಧಿಯ ಪರಿಕಲ್ಪನೆಯ ಮೂಲಕವಾಗಿ ಹರಿದಾಸ ಸಾಹಿತ್ಯ ಹಾಗೂ ಶ್ರೀಮದ್ಭಾಗವತದ ಸಂಬಂಧಗಳನ್ನು ವಿಶ್ಲೇಷಿಸಿ ಅವುಗಳ ಅನುಭವದ ಸ್ವರೂಪ, ಅಭಿವ್ಯಕ್ತಿ ವಿಧಾನ ಹಾಗೂ ಜೀವನ ದೃಷ್ಟಿಯ ಲಕ್ಷಣ ಮತ್ತು ಉಪಯುಕ್ತತೆಗಳನ್ನು ಕಂಡುಕೊಳ್ಳುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ಅನವಶ್ಯಕ ಸ್ಪರ್ಧೆ, ಆತಂಕ, ಅರಕ್ಷಿತಭಾವಗಳ ಮಧ್ಯೆ ಮಾನವ ಸಂಬಂಧಗಳು ಶಿಥಿಲಗೊಳ್ಳುತ್ತಿದ್ದರೂ ಆಡಂಬರದ ಬದುಕಿಗೆ ಹಪಹಪಿಸುತ್ತಿರುವ ಇಂದಿನ ದಿನಗಳಲ್ಲಿ ನಾವು ಎದುರಿಸುತ್ತಿರುವ ಸವಾಲುಗಳನ್ನು ಬಗೆಹರಿಸಿಕೊಳ್ಳುವಲ್ಲಿ ಭಾಗವತರಾದ ಹರಿದಾಸರು ಸೂಚಿಸಿದ ಪರಿಹಾರೋಪಾಯಗಳು ಎಷ್ಟರಮಟ್ಟಿಗೆ ಪ್ರಸ್ತುತವಾಗಬಲ್ಲವು ಎಂಬ ಕುತೂಹಲದಿಂದ ಈ ಅಧ್ಯಯನವನ್ನು ಆರಂಭಿಸಿದೆ.

ಹರಿದಾಸರ ಕೃತಿಗಳಲ್ಲಿ ಅಡಗಿರುವ ಭಾಗವತದ ಸತ್ವವನ್ನು ನಮ್ಮ ಇಂದಿನ ವೈಚಾರಿಕತೆಗೆ ಒಗ್ಗಿಸಿಕೊಳ್ಳಲು ಹೊಸವಿಧಾನಗಳ ಶೋಧ ಅನಿವಾರ್ಯವಾಗಿದೆ. ಆದ್ದರಿಂದ ಪ್ರಸ್ತುತ ಮಹಾಪ್ರಬಂಧದಲ್ಲಿ ಹರಿದಾಸ ಸಾಹಿತ್ಯಾಧ್ಯಯನದ ಜೊತೆ ಜೊತೆಗೆ; ಅದನ್ನು ವಿಶ್ಲೇಷಿಸಲು ಬೇಕಾದ 'ವಿಧಾನ'ಗಳ ಅಧ್ಯಯನಕ್ಕೆ ಹೆಚ್ಚು ಒತ್ತು ನೀಡಿದೆ.

ಇದುವರೆಗಿನ ದಾಸಸಾಹಿತ್ಯಾಧ್ಯಯನದಲ್ಲಿ ಬಹುಚರ್ಚಿತವಾದ ಭಕ್ತಿಪರಂಪರೆ, ವೈಷ್ಣವ ಪರಂಪರೆ, ಭಾಗವತ ಪರಂಪರೆ ಹಾಗೂ ಹರಿದಾಸ ಪರಂಪರೆಗಳ ಇತಿಹಾಸ; ಹರಿದಾಸರ ಜೀವನ-ಸಾಧನ ವಿಚಾರ ಗಳು-ಪ್ರಸ್ತುತ ವಿಷಯದ ವ್ಯಾಪ್ತಿಗೆ ಒಳಪಡದಿರುವುದರಿಂದ ಈ ಮಹಾಪ್ರಬಂಧದಲ್ಲಿ ಅವುಗಳ ಬಗ್ಗೆ ಹೆಚ್ಚಾಗಿ ಪ್ರಸ್ತಾಪಿಸುವುದಿಲ್ಲ.

ದಾಸರ ಕೃತಿಗಳ ಸಂಖ್ಯೆ ಹೆಚ್ಚಾಗಿದ್ದು ಮಹಾಪ್ರಬಂಧದ ಗಾತ್ರವು ನಿಗದಿತವಾಗಿರುವುದರಿಂದ, ಪ್ರಸ್ತುತ ಅಧ್ಯಯನವನ್ನು ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಪುರಂದರದಾಸರು ಮತ್ತು ಕನಕದಾಸರು- ಈ ಐವರ (ಅಂದರೆ ಮೊದಲ ಘಟ್ಟದ ಹರಿದಾಸರ) ಕನ್ನಡ ಪ್ರಾತಿನಿಧಿಕ ಕೃತಿಗಳಿಗೆ ಮಾತ್ರ ಸೀಮಿತ ಗೊಳಿಸಿಕೊಳ್ಳಲಾಗಿದೆ.

ಇಲ್ಲಿ ದಾಸರ ಪ್ರತಿಯೊಂದು ಕೀರ್ತನೆಯ ಕಟ್ಟಡದಲ್ಲಿ ಸಂಸ್ಕೃತ ಭಾಗವತ ಶ್ಲೋಕದ ಇಟ್ಟಿಗೆಗಳು ಎಷ್ಟೆಷ್ಟು ಸೇರಿಕೊಂಡಿವೆ ಎಂದು ಎಣಿಸುತ್ತ ಕೊಡುವ ಗೀಳಿಗೆ ಬೀಳದೆ; 'ಋಣ ಮತ್ತು ವೃದ್ಧಿ'ಯ ಹಲವು ಮಾದರಿಗಳನ್ನು ಹಾಗೂ ಅವುಗಳನ್ನು ದಾಸರು ಆಯ್ದುಕೊಂಡ ಕಾರಣಗಳು ಮತ್ತು ಅವುಗಳಿಂದ

ಆದ ಸೌಲಭ್ಯಗಳನ್ನು ಶೋಧಿಸುವತ್ತ ಗಮನಹರಿಸಲಾಗಿದೆ. ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಭಾಗವತದ ಎಲ್ಲ ವಿವರಗಳನ್ನು ಹಾಗೂ ದಾಸರ ಎಲ್ಲ ಕೀರ್ತನೆಗಳ ವಿಶ್ಲೇಷಣೆಯನ್ನು ನಿರೀಕ್ಷಿಸುವಂತಿಲ್ಲ.

ಇಲ್ಲಿನ ಕೆಲವು ಅಧ್ಯಾಯಗಳಲ್ಲಿ ಪ್ರಸ್ತಾಪಿಸಿರುವ ವಿಚಾರಗಳು ಮೇಲ್ನೋಟಕ್ಕೆ ಸಾಧಾರಣ, ಅನಗತ್ಯ ಎನಿಸಬಹುದಾಗಿದ್ದರೂ ಅವೇ ಮಾಹಿತಿಗಳು ಅನಂತರದ ಅಧ್ಯಾಯಗಳಲ್ಲಿ ಪರಿಕಲ್ಪನೆಗಳನ್ನು ಕಟ್ಟಲು, ದಾಸರ ರಚನೆಗಳನ್ನು ವ್ಯಾಖ್ಯಾನಿಸಲು ಉಪಯುಕ್ತವಾಗುವಂತಿವೆ. ಗ್ರಂಥಗಳಲ್ಲಿ ದೊರೆಯಲಾರದ ಈ ರೀತಿಯ ಕೆಲವು ವಿಚಾರಗಳನ್ನು ಹರಿದಾಸ ಪಂಥದ ಅನುಯಾಯಿಗಳ ಆಚರಣೆಗಳ ಅವಲೋಕನದ ಮೂಲಕ ಗ್ರಹಿಸಿ ಇಲ್ಲಿ ಪೂರಕ ಮಾಹಿತಿಯನ್ನಾಗಿ ಬಳಸಿಕೊಳ್ಳಲಾಗಿದೆ.

ಈ ಮಹಾಪ್ರಬಂಧದಲ್ಲಿ ಎಂಟು ಅಧ್ಯಾಯಗಳಿವೆ. ಪ್ರಸ್ತುತ ಅಧ್ಯಯನದಲ್ಲಿ ಸಿದ್ಧಮಾದರಿಗಳನ್ನು ಸಾಧ್ಯವಾದಷ್ಟೂ ಕೈಬಿಟ್ಟು ಹೊಸ ವಿಧಾನಗಳನ್ನು ಗುರುತಿಸುವ, ವರ್ಗೀಕರಿಸುವ, ಅನ್ವಯಿಸುವ ಮೂಲಕ; ಅವುಗಳ ಸ್ವರೂಪ ಮತ್ತು ಉಪಯುಕ್ತತೆಯನ್ನು ಕಂಡುಕೊಳ್ಳುವ ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ.

ಅಧ್ಯಾಯ ಎರಡು

# ಋಣ ಮತ್ತು ವೃದ್ಧಿಯ ತಾತ್ವಿಕತೆ

೨.೧. ಪರಿಕಲ್ಪನೆ

೨.೧.೧. ತೌಲನಿಕ ಪರಿಶೀಲನೆ

೨.೧.೨. 'ಋಣ ಮತ್ತು ವೃದ್ಧಿ'ಯ ಔಚಿತ್ಯ

೨.೨. ಸಾಹಿತ್ಯ ವಿಮರ್ಶೆಯ ಪರಿಕರ

೨.೩. ಸಂಸ್ಕೃತಿ ಶೋಧದ ಆಯಾಮ

ಅಧ್ಯಾಯ ಎರಡು

# ಋಣ ಮತ್ತು ವೃದ್ಧಿಯ ತಾತ್ವಿಕತೆ

೨.೧. ಪರಿಕಲ್ಪನೆ

೨.೧.೧. ತೌಲನಿಕ ಪರಿಶೀಲನೆ

೨.೧.೨. 'ಋಣ ಮತ್ತು ವೃದ್ಧಿ'ಯ ಔಚಿತ್ಯ

೨.೨. ಸಾಹಿತ್ಯ ವಿಮರ್ಶೆಯ ಪರಿಕರ

೨.೩. ಸಂಸ್ಕೃತಿ ಶೋಧದ ಆಯಾಮ

೨

# ಋಣ ಮತ್ತು ವೃದ್ಧಿಯ ತಾತ್ವಿಕತೆ

## ಪ್ರವೇಶ

ಕವಿಯು ತನ್ನ ಕಾವ್ಯರಚನೆಗೆ ಯಾವ ವಸ್ತುವನ್ನು ಆಯ್ಕೆಮಾಡಿಕೊಂಡಿದ್ದಾನೆ ಎಂಬ ಪ್ರಶ್ನೆಯು ಕವಿ-ಕಾವ್ಯ ವಿಶ್ಲೇಷಣೆಯಲ್ಲಿ ಮುಖ್ಯವಾಗುತ್ತದೆ. ವಸ್ತುವಿನ ಆಯ್ಕೆಯು ಅವನ ಜೀವನದೃಷ್ಟಿಯ ದಿಕ್ಸೂಚಿಯೂ ಆಗಿರುವ ಸಾಧ್ಯತೆಯಿದೆ.

ಕೆಲವು ಕವಿಗಳು ಜನಜೀವನದಿಂದ ನೇರವಾಗಿ ಹೊಸ ಹೊಸ ಕಥಾವಸ್ತುಗಳನ್ನು ಕಂಡುಕೊಳ್ಳುವುದುಂಟು. ವಾಸ್ತವ ಘಟನೆಗಳಿಗೆ ಕಲ್ಪನೆಯ ರಕ್ತಪೂರಣ ಮಾಡುವ ಮೂಲಕ ವಿನೂತನ ಕಥಾಸಂವಿಧಾನವನ್ನು ಸಾಧಿಸಿದ ಪ್ರತಿಭಾವಂತ ಕವಿಗಳು ಜನಮನ್ನಣೆ ಗಳಿಸುತ್ತಾರೆ. ಇಂತಹ ಹೊಸವಸ್ತುಗಳನ್ನು ಕಂಡುಕೊಂಡ ಕವಿಗಳ ಸ್ವಂತಿಕೆಯನ್ನು ವಿಮರ್ಶಕರು, 'ಅಪೂರ್ವ', 'ಅನನ್ಯ' 'ಸ್ವೋಪಜ್ಞ' ಎಂಬ ಪದಗಳಿಂದ ಗುರುತಿಸಿ ಕೊಂಡಾಡುತ್ತಾರೆ.

ಇನ್ನಿತರ ಕವಿಗಳು ಸಿದ್ಧ ಪ್ರಾಚೀನ ಆಕರಗಳಿಂದ ವಸ್ತುವನ್ನು ಆಯ್ದುಕೊಳ್ಳುತ್ತಾರೆ. ಇದು ಕೃತಿ ಚೌರ್ಯವಲ್ಲ; ಪ್ರತಿಭಾದಾರಿದ್ರ್ಯದ ಕುರುಹೂ ಅಲ್ಲ. ಹೊಸದಾದ ನೂರಾರು ಕಥೆಗಳನ್ನು ಹೆಣೆಯಬಲ್ಲ

ಪ್ರತಿಭೆಯಿದ್ದರೂ, ಅವರು ತಮ್ಮ ಕಾಲಕ್ಕೆ ಮೊದಲೇ ಪ್ರಸಿದ್ಧವಾಗಿ ಜನಮಾನಸದಲ್ಲಿ ನೆಲೆಸಿನಿಂತ ಸಾಂಪ್ರದಾಯಿಕ ವಸ್ತುಗಳನ್ನೇ ಆರಿಸಿಕೊಳ್ಳುತ್ತಾರೆ. ಈ ಪದ್ಧತಿಯು ಹಿಂದಿನಿಂದಲೂ ನಡೆದುಬಂದಿದೆ.

ಇಂತಹ ಸಿದ್ಧವಸ್ತುವಿನ ಆಯ್ಕೆಯ ಮೂಲಕ ಕವಿಯು ಬಹುಜನ ಕೇಳುಗ-ಓದುಗರನ್ನು ಸುಲಭವಾಗಿ ತಲುಪುತ್ತಾನೆ. ತನ್ನ ಪ್ರಾಚೀನ ಪರಂಪರೆಯ ಕಥಾ ಚೌಕಟ್ಟಿನಲ್ಲಿ ತಾನು ಕಂಡುಕೊಂಡ ಮೌಲ್ಯಗಳನ್ನು ಅಳವಡಿಸಿ ಬಿಂಬಿಸುವ ಮೂಲಕ ಪರಂಪರೆಯನ್ನು ಸಮಕಾಲೀನಗೊಳಿಸುತ್ತಾನೆ. ಅದೇ ಹೊತ್ತಿಗೆ ಸಮಕಾಲೀನ ಮನಸ್ಸುಗಳನ್ನು ಪರಂಪರೆಯ ಉತ್ತಮಾಂಶಗಳೊಂದಿಗೆ ಬೆಸೆಯುತ್ತಾನೆ. ಅಪರಿಚಿತವಾದ ನೂತನವಸ್ತುವಿಗಿಂತಲೂ ಚಿರಪರಿಚಿತವಾದ ಪ್ರಾಚೀನ ವಸ್ತು ಹೆಚ್ಚು ಸುಲಭವಾಗಿ, ಸಮರ್ಪಕವಾಗಿ ಸಂವಹನಗೊಳ್ಳುವ, ಸಹೃದಯರೊಂದಿಗೆ ಹೃದಯ ಸಂವಾದ ಸ್ಥಾಪಿಸಲು ನೆರವಾಗುವ ರಹಸ್ಯವನ್ನು ತಿಳಿದೇ ಆಯ್ಕೆ ಮಾಡುತ್ತಾನೆ.

ಹೀಗೆ ಕವಿಯು ತನ್ನ ಪೂರ್ವಪರಂಪರೆಯೊಂದಿಗೆ ಪ್ರಜ್ಞಾಪೂರ್ವಕವಾಗಿಯೇ ಋಣಾನುಬಂಧ ಸ್ಥಾಪಿಸಿಕೊಳ್ಳುವ ಪ್ರಕ್ರಿಯೆಯನ್ನು **'ಋಣ ಮತ್ತು ವೃದ್ಧಿ'** ಎಂಬ ನುಡಿಗಟ್ಟಿನ ಮೂಲಕ ವಿವರಿಸ ಬಹುದಾಗಿದೆ.

ಪಂಪನಿಂದ ಕುವೆಂಪುವರೆಗಿನ ಬಹುತೇಕ ಪ್ರಾಚೀನ ಕನ್ನಡ ಕವಿಗಳು ತಮ್ಮ ದೀರ್ಘಕಾವ್ಯಗಳಿಗೆ ಪೂರ್ವಪ್ರಸಿದ್ಧ ಆಕರಗಳಿಂದ ವಸ್ತುವನ್ನು ಸ್ವೀಕರಿಸಿದ್ದಾರೆ. ಪೂರ್ವ ಕವಿಗಳಿಗೆ ತಾವು ಋಣಿಗಳೆಂದು ಕೃತಜ್ಞತೆಯಿಂದ ಹೇಳಿಕೊಂಡಿದ್ದಾರೆ. ಸ್ವೀಕೃತ ವಸ್ತುವನ್ನು ತಮ್ಮ ಪ್ರತಿಭೆಯಿಂದ, ಸಮಕಾಲೀನ ಸಾಂಸ್ಕೃತಿಕ ಅಗತ್ಯಗಳಿಗೆ ತಕ್ಕಂತೆ 'ವೃದ್ಧಿ'ಗೊಳಿಸಿದ್ದಾರೆ. ಆ ಮೂಲಕ ಕನ್ನಡ ಚಿಂತನೆಯ ವಿಶಿಷ್ಟ ಹೆಜ್ಜೆ ಗುರುತುಗಳನ್ನು ಉಳಿಸಿದ್ದಾರೆ.

ಇಂತಹ ಪ್ರಾಚೀನ ಕನ್ನಡ ಕಾವ್ಯಗಳನ್ನು ಅವುಗಳ ಆಕರಗ್ರಂಥಗಳೊಂದಿಗೆ ತೌಲನಿಕವಾಗಿ ವಿವೇಚಿಸಿರುವ ಪ್ರೌಢಪ್ರಬಂಧಗಳು ಈಗಾಗಲೇ ಪ್ರಕಟವಾಗಿವೆ. ಕವಿಯು ಆಕರಗ್ರಂಥಗಳಿಂದ ಪಡೆದ ಪ್ರೇರಣೆ, ಸ್ಫೂರ್ತಿ; ಅದನ್ನು ಬಳಸಿಕೊಂಡು ತನ್ನ ಕೃತಿಯನ್ನು ನಿರ್ವಹಿಸಿದ ವಿಧಾನ ಹಾಗು ಮೆರೆದ ಸ್ವಂತಿಕೆಯನ್ನು ನಿರ್ಣಯಿಸಿ ಬೆಲೆಗಟ್ಟಲಾಗಿದೆ.

ಜನಮುಖಿ ಚಿಂತನೆಗಳನ್ನು ರೂಪಿಸಿದ ಕನ್ನಡ ಕವಿಗಳನೇಕರು ಬಿಡಿ ರಚನೆಗಳಿಗೆ ಒಲಿದವರು. ವಚನಕಾರರು, ಹರಿದಾಸರು, ತತ್ವಪದಕಾರರು, ಜನಪದ ತ್ರಿಪದಿ ಗಾಯಕರು ಹಾಗೂ ಸರ್ವಜ್ಞನಂತಹ ಕವಿಗಳು ಕಿರುಗವನಗಳ ಮೂಲಕವೇ ಜನಮನವನ್ನು ಮುಟ್ಟಿದವರು. ಆಧುನಿಕ ಭಾವಗೀತ ಕವಿಗಳನ್ನೂ ಇದೇ ವರ್ಗದಲ್ಲಿ ಪರಿಗಣಿಸಬಹುದು. ಇಂತಹ ಮುಕ್ತಕ ಮಾದರಿಯ ಕೃತಿಗಳನ್ನು ಅನೇಕ ವೇಳೆ

ಆಶುರಚನೆಗಳೆಂದೇ ಭಾವಿಸಲಾಗುತ್ತದೆ. ಅಲ್ಲಿಯ ವಿಶಿಷ್ಟಾಂಶಗಳನ್ನು ಕವಿಯ ಸ್ವೋಪಜ್ಞತೆಯ ಸಾಕ್ಷಿಗಳೆಂದು ಗೃಹೀತವಾಗಿ ತಿಳಿದು ವ್ಯವಹರಿಸಿ ಸಂಭ್ರಮಿಸಲಾಗುತ್ತದೆ.

ಹರಿದಾಸರಂತೂ ಕೀರ್ತನ ಪ್ರಕಾರಕ್ಕೆ ಒಗ್ಗಿದವರು. ಸದಾಕಾಲ ಚಲಿಸುತ್ತ ತಾವು ಕಂಡುಂಡ ಜನಜೀವನದ ಬವಣೆಗಳಿಗೆ, ರೀತಿ-ನೀತಿಗಳಿಗೆ ದನಿಯಾದವರು. ನಿಂತಲ್ಲೇ ಪದಕಟ್ಟಿ ಹಾಡಿದವರು. ಆದ್ದರಿಂದ ಅವರ ಹಾಡುಗಳ ಸತ್ವವನ್ನು ವೈಯಕ್ತಿಕ ಕೊಡುಗೆಯೆಂದೇ ಜನಸಾಮಾನ್ಯರು ಗ್ರಹಿಸಬಹುದಾದ ಸಂದರ್ಭಗಳಿವೆ. ಆದರೆ ಹರಿದಾಸರ ಜನಪರ ಕಾಳಜಿಗೆ ಪೂರಕವಾದ ಮನಃಪರಿಪಾಕವನ್ನು ನಿರ್ಮಿಸುವಲ್ಲಿ, ಅವರ ರಚನೆಗಳಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುವ ಶ್ರೀಮದ್ಭಾಗವತ ಪುರಾಣದ ಪಾತ್ರವನ್ನು ಚರ್ಚಿಸದೆ ದಾಸರ ಕೃತಿಗಳ ಅಧ್ಯಯನಕ್ಕೆ ಸಮಗ್ರತೆ ಒಗುವಂತಿಲ್ಲ. ಹೀಗಾಗಿ ಹರಿದಾಸ ಸಾಹಿತ್ಯ ಮತ್ತು ಶ್ರೀಮದ್ಭಾಗವತದ ಸ್ವೀಕರಣ ಪ್ರಕ್ರಿಯೆಯ ಅಧ್ಯಯನ ಕೈಗೊಳ್ಳಲು ಉಪಯುಕ್ತವಾಗಬಲ್ಲ ತಾತ್ವಿಕತೆಯನ್ನು ಸ್ಪಷ್ಟಪಡಿಸಿಕೊಳ್ಳಲು ಋಣ ಮತ್ತು ವೃದ್ಧಿ ಎಂಬ ಆಧುನಿಕ ವಿಮರ್ಶಾ ಪರಿಕಲ್ಪನೆಯನ್ನು ಇಲ್ಲಿ ವಿವೇಚಿಸಲಾಗುತ್ತದೆ.

## ೨.೧. ಪರಿಕಲ್ಪನೆ

ಕವಿಯು ತನ್ನ ಪ್ರಾಚೀನ ಪರಂಪರೆಯ ಆಕರ ಗ್ರಂಥಗಳಿಗೆ ಋಣಿಯಾಗಿ ಅಲ್ಲಿಯ ಉತ್ತಮಾಂಶಗಳನ್ನು ಆಯ್ದುತಂದು, ಸ್ವೀಕೃತ ಪರಿಕರಗಳನ್ನು ತನ್ನ ದೇಶ, ಕಾಲ, ಮನಃಸ್ಥಿತಿಗಳ ಹಿನ್ನೆಲೆಯಲ್ಲಿ ಅನುಸಂಧಾನಮಾಡಿ, ಹಿತವೆನಿಸುವಂತೆ ವೃದ್ಧಿಗೊಳಿಸಿ ಬಳಸಿಕೊಳ್ಳುವ ಪ್ರಕ್ರಿಯೆಯನ್ನು ವಿವರಿಸಲು **'ಋಣ ಮತ್ತು ವೃದ್ಧಿ'** ಎಂಬ ಪರಿಭಾಷೆಯನ್ನು ಬಳಸುತ್ತೇವೆ. ಈ ಪರಿಭಾಷೆಯನ್ನು ಇದುವರೆಗೆ ಯಾರೂ ವ್ಯಾಖ್ಯೆಯ ರೂಪದಲ್ಲಿ ವಿವರಿಸಿಲ್ಲ. ಬಹುಪರಿಚಿತವಲ್ಲದ ಈ ಪದಪುಂಜದ ಅರ್ಥವನ್ನು 'ಸಾಲ ಮತ್ತು ಬಡ್ಡಿ', 'ಮೂಲಗ್ರಂಥದಿಂದ ಕೈಬಿಟ್ಟ ಭಾಗಗಳು ಮತ್ತು ಮೂಲಕ್ಕೆ ಸೇರಿಸಿದ ಭಾಗಗಳು' ಎಂಬುದಾಗಿ ಜನಸಾಮಾನ್ಯರು ಗ್ರಹಿಸಿದಂತಿದೆ. ಈ ತಪ್ಪುಕಲ್ಪನೆಗಳನ್ನು ನಿವಾರಿಸಿಕೊಳ್ಳಬೇಕಾಗಿದೆ.

**'ಋಣ'** ಎಂಬ ಪದಕ್ಕೆ 'guilt' 'ಹಂಗು'; 'debt' 'ಸಾಲ' 'ಕಡ' ಎಂಬ ಪ್ರಸಿದ್ಧಾರ್ಥಗಳಿವೆ.[೧] 'minus', 'negative' ಎಂಬ ಅರ್ಥಗಳೂ ಬಳಕೆಯಲ್ಲಿವೆ. ಆದರೆ ಸಾಹಿತ್ಯ ವಿಮರ್ಶೆಯಲ್ಲಿ ಋಣ ಎಂಬ ಪದವನ್ನು 'obligation' 'ಉಪಕಾರ' 'ಆಭಾರ' ಎಂಬ ಅರ್ಥಗಳಲ್ಲಿ ಬಳಸಲಾಗುತ್ತದೆ. ಉದಾ: 'ಗ್ರಂಥ ಋಣ' ಎಂಬಲ್ಲಿ ಉಪಕಾರವೆಂಬ ಅರ್ಥವೇ ಹೆಚ್ಚು ಮುಖ್ಯವಾಗಿದೆ. 'ದೇವ ಋಣ', 'ಋಷಿ ಋಣ', 'ಪಿತೃ ಋಣ', 'ಬಂಧು ಋಣ' ಎಂಬಲ್ಲೆಲ್ಲ ಋಣ ಎಂಬ ಪದಕ್ಕೆ ಸಾಲ, ಕಡ, ಹಂಗು ಇತ್ಯಾದಿ ಅರ್ಥಗಳು ಹೊಂದುವುದಿಲ್ಲ. ಉಪಕಾರವೆಂಬ ಅರ್ಥವೇ ಸೂಕ್ತವಾಗಿದೆ. ಕವಿಗಳು ತಮ್ಮ ಕೃತಿರಚನೆಗೆ ಅಗತ್ಯವಾದ ವಸ್ತು-ಆಶಯ-ಆಕೃತಿ-ಭಾಷೆ-ತಂತ್ರ ಇತ್ಯಾದಿಗಳನ್ನು ಪಡೆಯುವ ಮೂಲಕ ಪರಂಪರೆಯಿಂದ ಉಪಕೃತರಾಗಿರುತ್ತಾರೆ. ಆದ್ದರಿಂದ ಋಣವು ಅನಿವಾರ್ಯ ಸಾರ್ವತ್ರಿಕ ಪ್ರಕ್ರಿಯೆಯಾಗಿದೆ.

‘ವೃದ್ಧಿ’ ಎಂಬ ಪದಕ್ಕೆ ‘ಬಡ್ಡಿ’ ‘ಅಭಿವೃದ್ಧಿ’ ‘ಜನನದಿಂದ ಸಂಭವಿಸುವ ಆಶೌಚ’ ಮುಂತಾದ ಅನೇಕಾರ್ಥಗಳಿದ್ದರೂ; ‘increment’ ‘ಲಾಭ’ ‘ಹೆಚ್ಚುವರಿ’; ‘augumentation’ ‘ವಿಸ್ತರಿಸುವಿಕೆ’ ‘ವರ್ಧನೆ’; ‘success’ ‘ಸಿದ್ಧಿ’ ‘ಜಯ’ ‘ಯಶಸ್ಸು’ ಎಂಬ ಅರ್ಥಗಳು ಸಾಹಿತ್ಯ ಕ್ಷೇತ್ರಕ್ಕೆ ಹೆಚ್ಚು ಪ್ರಸಕ್ತವಾಗಿವೆ. ಆಕರ ಗ್ರಂಥಗಳಿಂದ ಸ್ವೀಕರಿಸಿದ ಅಂಶಗಳನ್ನು ಸಿದ್ಧಿಮಾಡಿಕೊಳ್ಳುವುದು; ತನ್ನ ಅಗತ್ಯಕ್ಕೆ ಅನುಗುಣವಾಗಿ ವರ್ಧಿಸುವುದು ಅಥವಾ ವಿಸ್ತರಿಸುವುದೇ ವೃದ್ಧಿಯ ಕಾರ್ಯವಾಗಿದೆ. ಇದರಿಂದ ಆಕರ ಗ್ರಂಥಕ್ಕೂ, ನೂತನ ಕೃತಿಗೂ ಜಯ ಹಾಗೂ ಕೀರ್ತಿಗಳು ಲಭಿಸುತ್ತವೆ.

‘ಋಣ’ದ ಕಲ್ಪನೆ ‘ವೃದ್ಧಿ’ಯನ್ನೂ, ‘ವೃದ್ಧಿ’ಯ ಕಲ್ಪನೆ ‘ಋಣ’ವನ್ನೂ ಹೊಂದಿಕೊಂಡೇ ಬರುತ್ತವೆ. ಆದ್ದರಿಂದ ಅವೆರಡು ಪರಸ್ಪರ ಪೂರಕ ಕ್ರಿಯೆಗಳಾಗಿವೆ; ಮತ್ತು ಜೊತೆ ಜೊತೆಗೇ ಬಳಕೆಯಾಗುತ್ತವೆ.

‘ಋಣ’ ಮತ್ತು ‘ವೃದ್ಧಿ’ ಎಂಬ ಪದಗಳನ್ನು ಕನ್ನಡ ಕಾವ್ಯದಲ್ಲಿ ಮೊದಲ ಬಾರಿಗೆ ಬಳಸಿದವನು ಮುದ್ದಣ.

ಮೂಲವಳಿಸದೆ ವೃದ್ಧಿಯನೆ ಬಹುಪದಾರ್ಥಕನು
ಕೂಲಮಂಗೆಯ್ದು ಋಣಶೇಷಗಳ ಭೇದಿಸುತೆ
ಕಾಲಕರ್ಮಗಳ ಬಿಡದನುಸರಿಸಿ ನಿತ್ಯಕರ್ತೃಕ್ರಿಯೆ ವಿಭಕ್ತಿಗಳೊಳು।
ಮೇಲೆನಿಸಿ ಸತ್ಕೃತಿಯೆಸಗೆ ಮಾನ್ಯನಹನಂತೆ
ವೋಲೆಸೆಯೆ ಮೃದುವಚನಚಯದಿಂದೆ ಸಂತತಂ
ಮೇಲದರೊಳೇಕವಚನಕ್ರಮವ ಪಿಡಿದಿರಲ್ಕವನ ಮತಿ ವಿಸ್ತರಿಪುದು॥

(ಶ್ರೀರಾಮಪಟ್ಟಾಭಿಷೇಕಂ ೧:೯)

ಇಲ್ಲಿ ವ್ಯಾಪಾರಿ ಮತ್ತು ಕವಿಯ ಕಾರ್ಯಗಳನ್ನು ಶ್ಲೇಷೆಯಿಂದ ವರ್ಣಿಸಲಾಗಿದೆ. ‘ಆಕರ ಗ್ರಂಥದಲ್ಲಿ ಕಂಡುಬರುವ ಕಥಾಹಂದರವನ್ನು ನಾಶ ಮಾಡದೆ ಅನೇಕ ಶಬ್ದಾರ್ಥ ವೈವಿಧ್ಯದಿಂದ ವೃದ್ಧಿಯನ್ನು ಸಾಧಿಸುವ ಮೂಲಕ ಋಣಶೇಷವನ್ನು(ಇತರರಿಂದ ಸ್ವೀಕರಿಸಿದ ಉಪಕಾರವನ್ನು) ತೀರಿಸಲು ಯತ್ನಿಸುತ್ತಾ, ಉತ್ತಮ ಕಾವ್ಯವನ್ನು ರಚಿಸಲು ತೊಡಗಿದರೆ ಕವಿಯ ಪ್ರತಿಭೆ ವಿಸ್ತಾರವಾಗುತ್ತದೆ’ ಎಂಬ ಅರ್ಥದ ಈ ಪದ್ಯದಲ್ಲಿ, ಆಕರ ಗ್ರಂಥಗಳ ಋಣವನ್ನು ವೃದ್ಧಿಯ ಮೂಲಕ ತೀರಿಸಬಹುದು ಎಂಬ ಅಭಿಪ್ರಾಯ ಕಂಡುಬರುತ್ತದೆ.

ಮೇಲಿನ ಪದ್ಯಕ್ಕೆ ವಿವರಣೆ ಬರೆದ ರಾಮಚಂದ್ರ ಉಚ್ಚಿಲರು ಮುದ್ದಣನ ಯಕ್ಷಗಾನ ಮತ್ತು ಇತರ ಕೃತಿಗಳು ಮೂಲ ಆಕರಗ್ರಂಥಗಳೊಂದಿಗೆ ಹೊಂದಿರುವ ಸಂಬಂಧವನ್ನು ತೌಲನಿಕವಾಗಿ ವಿವೇಚಿಸುವಾಗ “ಋಣ ಮತ್ತು ವೃದ್ಧಿಗಳನ್ನು ಲಕ್ಷ್ಯದಲ್ಲಿರಿಸಿಕೊಂಡು ಹೇಳುತ್ತೇನೆ”(ರಾಮಚಂದ್ರ ಉಚ್ಚಿಲ : ೧೯೭೮:೧೧೧) ಎಂದು ಸ್ಪಷ್ಟವಾಗಿ ಹೇಳಿಕೊಂಡಿದ್ದಾರೆ. ನನ್ನ ತಿಳುವಳಿಕೆಯ ಮಟ್ಟಿಗೆ ‘ಋಣ ಮತ್ತು

ವೃದ್ಧಿ'ಯ ಪರಿಕಲ್ಪನೆಯನ್ನು ವಿಮರ್ಶೆಯ ಪರಿಕರವನ್ನಾಗಿ ಬಳಸಿದವರಲ್ಲಿ ಇವರೇ ಮೊದಲಿಗರಾಗಿ ಕಂಡುಬರುತ್ತಾರೆ.

ಡಾ.ಶಿವರಾಮ ಪಡಿಕ್ಕಲರು ತಮ್ಮ ಸಂಶೋಧನ ಪ್ರಬಂಧದಲ್ಲಿ ಅನುವಾದ-ರೂಪಾಂತರಗಳಿಗೆ ಸಂಬಂಧಿಸಿದಂತೆ ಮಂಡಿಸಿದ ಪ್ರಮೇಯಗಳು (ಶಿವರಾಮ ಪಡಿಕ್ಕಲ್, ೨೦೦೧ : ೧೫೫-೧೫೮) 'ಋಣ ಮತ್ತು ವೃದ್ಧಿ'ಯ ಅಧ್ಯಯನಕ್ಕೆ ಗಂಭೀರ ಚಿಂತನೆಯ ಸ್ವರೂಪವನ್ನು ನೀಡಲು ಸಹಾಯಕವಾಗಿವೆ. ಅಲ್ಲಿಯ ಚಿಂತನಾಂಶಗಳನ್ನು ಬಳಸಿಕೊಂಡು ಮುದ್ದಣನ ಕೃತಿಗಳಿಗೆ ಅನ್ವಯಿಸಿ ರಚಿಸಿದ, ಡಾ.ಪುರುಷೋತ್ತಮ ಬಿಳಿಮಲೆಯವರ 'ಮುದ್ದಣ : ಋಣ ಮತ್ತು ವೃದ್ಧಿ' ಎಂಬ ಲೇಖನವು (ಪುರುಷೋತ್ತಮ ಬಿಳಿಮಲೆ, ೧೯೯೨ : ೧-೧೬); ಈ ವಿಧಾನದ ಅಧ್ಯಯನಗಳಿಗೆ ಉತ್ತಮ ಮಾದರಿಯಾಗಿದೆ.

ಹೀಗೆ ಹೊಸಗನ್ನಡ ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ ದೇಶೀಯವಾಗಿ ರೂಪುಗೊಂಡ 'ಋಣ ಮತ್ತು ವೃದ್ಧಿ' ಎಂಬ ಪರಿಕಲ್ಪನೆಯು, ಒಂದು ಸಾಹಿತ್ಯ ಕೃತಿಯನ್ನು ಅದರ ಆಕರ ಗ್ರಂಥಗಳೊಂದಿಗೆ ತೌಲನಿಕವಾಗಿ ವಿವೇಚಿಸುವಲ್ಲಿ ಉಪಯುಕ್ತವಾಗಿದೆ.

### ೨.೧.೧. ತೌಲನಿಕ ಪರಿಶೀಲನೆ

ಋಣ ಮತ್ತು ವೃದ್ಧಿಯ ಪರಿಭಾಷೆ ಹೊಸದು. ಇದರ ವಿಕಾಸದ ಹಿಂದಣ ಹೆಜ್ಜೆಗಳೆನ್ನಬಹುದಾದ ಸಮಾನಾಂತರವಾದ ಪರಿಕಲ್ಪನೆಗಳೇನಾದರೂ ಇದ್ದವೆ? ಒಂದೊಮ್ಮೆ ಇದ್ದರೆ ಆ ಪರಿಕಲ್ಪನೆಗಳಿಗೂ 'ಋಣ ಮತ್ತು ವೃದ್ಧಿ'ಗೂ ಇರುವ ಸಂಬಂಧಗಳೇನು? ಎಂಬ ಸಂಕ್ಷಿಪ್ತ ಚರ್ಚೆ ಅಗತ್ಯವೆನಿಸುವ ಹಿನ್ನೆಲೆಯಲ್ಲಿ ಭಾರತೀಯ ಕಾವ್ಯ ಮೀಮಾಂಸಕರ 'ಅನನ್ಯ ಪರತಂತ್ರ', 'ಹರಣ', 'ಸ್ವೀಕರಣ'ಗಳನ್ನೂ; ಟಿ.ಎಸ್. ಎಲಿಯೆಟ್‌ನ 'ಪರಂಪರೆ ಮತ್ತು ವ್ಯಕ್ತಿ ಪ್ರತಿಭೆ'ಯ ಪರಿಕಲ್ಪನೆಯನ್ನೂ ಕನ್ನಡ ವಿದ್ವಾಂಸರ ವಿಶ್ಲೇಷಣೆಗಳ ಹಿನ್ನೆಲೆಯಲ್ಲಿ ಅವಲೋಕಿಸಬೇಕಾಗಿದೆ.

**ಅನನ್ಯ ಪರತಂತ್ರ :** ಭಾರತೀಯ ಕಾವ್ಯಮೀಮಾಂಸಕನಾದ ಮಮ್ಮಟನು ಕಾವ್ಯದ ಸ್ವರೂಪವನ್ನು 'ಅನನ್ಯಪರತಂತ್ರ' ವೆಂದಿದ್ದಾನೆ. ಮಮ್ಮಟನ ಪ್ರಕಾರ 'ಅನನ್ಯಪರತಂತ್ರ' ಎಂದರೇನು? ಕವಿ ಕೃತಿ ಹೇಗೆ ಅನನ್ಯಪರತಂತ್ರವಾಗುತ್ತದೆ ಎಂಬ ಜಿಜ್ಞಾಸೆ ಕೈಗೊಂಡ ಕುವೆಂಪು ಅವರು 'ಕವಿಯ ಅನನ್ಯತೆ ಸ್ವತಂತ್ರವಾದುದಲ್ಲ, ಅಸಹಾಯವಾದುದಲ್ಲ'ವೆಂಬುದನ್ನು ವಿವರಿಸುವಾಗ, ಸ್ವತಂತ್ರ ಎಂದರೆ 'ಅನ್ಯಾಶ್ರಯ ನಿರಪೇಕ್ಷಣೀಯವಾಗಿ ತನಗೆ ತಾನೆ ಕೈಗೊಳ್ಳುವ ವಿಧಾನದ ಶಕ್ತಿ ಜ್ಞಾನವುಳ್ಳದ್ದು' ಎಂದು ಅರ್ಥಮಾಡಿದ್ದಾರೆ. ಅವರು ಮುಂದುವರಿದು; "ಈ ಅರ್ಥದಲ್ಲಿ ಕವಿಕೃತಿಯನ್ನು ಸ್ವತಂತ್ರ ಎಂದು ವರ್ಣಿಸುವ ಹಾಗಿಲ್ಲ. ಏಕೆಂದರೆ ಈ ಅರ್ಥದಲ್ಲಿ ಕವಿಯೇ 'ಸ್ವತಂತ್ರ'ನಲ್ಲ. ಇನ್ನು ಅವನ ಕೃತಿಗೆಲ್ಲಿಂದ ಬಂದೀತು ಸ್ವಾತಂತ್ರ್ಯ?

ಅಲ್ಲದೆ ಕಲಾಕೃತಿ ಲೋಕವಸ್ತು ಲೋಕಾನುಭವ ಇತ್ಯಾದಿಗಳನ್ನೆಲ್ಲ ತನಗೆ ಬಂಡವಾಳವಾಗಿ ಮೂಲಾಧಾರವಾಗಿ ಇಟ್ಟುಕೊಳ್ಳದೆ ಗತಿಯಿಲ್ಲ. ಅನೇಕ ಕವಿಕೃತಿಗಳು ನೂರಕ್ಕೆ ನೂರುಪಾಲು ಋಣಿಗಳಾಗಿರುತ್ತವೆ... ಯಾವ ದೃಷ್ಟಿಯಿಂದ ಪರಿಶೀಲಿಸಿದರೂ ಕವಿಕೃತಿ ಈ ಅರ್ಥದಲ್ಲಿ 'ಸ್ವತಂತ್ರ' ಎಂಬ ವಿಶೇಷಣಕ್ಕೆ ಅರ್ಹವಾಗಲಾರದು. ಬಹುಶಃ ಈ ಅರ್ಥದಲ್ಲಿ ಸರ್ವೇಶ್ವರನೊಬ್ಬನಿಗೆ ಹೊರತು ಇನ್ನಾರಿಗೂ 'ಸ್ವತಂತ್ರ' ಎಂಬ ಬಿರುದು ಸಲ್ಲುವುದಿಲ್ಲ"(ಕುವೆಂಪು, ೨೦೦೩:೪೫೨) ಎಂಬ ನಿರ್ಣಯಕ್ಕೆ ಬಂದಿದ್ದಾರೆ. "ಅನನ್ಯ ಪರತಂತ್ರ' ಎಂದರೆ 'ತನ್ನತನ'ದ ತಂತ್ರವುಳ್ಳದ್ದು. ಆ 'ತನ್ನತನ'ದಲ್ಲಿ ಅಸ್ವತಂತ್ರತೆ ಇರಬಹುದು; ಅಂದರೆ ಅನ್ಯಮೂಲಗಳಿಂದ ಆಹಾರಪಡೆದು, ಅನ್ಯಾಧಾರಗಳಿಂದ ಪುಷ್ಟಿಹೊಂದಿ, ನರರೂಪದ ಲೋಕರೂಪದ ಕೃತಿರೂಪದ ಅನೇಕ ಗುರುಗಳಿಂದ ದೀಕ್ಷೆವೆತ್ತು ಎನಿತೆನಿತೊ ಕೃಪೆಗೆ ಋಣಿಯಾಗಿ ಆ ತನ್ನತನ ಸಿದ್ಧವಾಗಬಹುದು. ವಿಷಯ, ಕಥೆ, ವಸ್ತು, ಭಾವ ಇವು ಪ್ರಕೃತಿ ಲೋಕದಿಂದಲೊ ಇತರ ಕೃತಿ ಲೋಕಗಳಿಂದಲೊ ಬಂದಿರಬಹುದು. ಆದರೆ ಅವೆಲ್ಲವೂ ಕವಿಯ ತನ್ನತನದ ರಸಶಕ್ತಿಗಳಲ್ಲಿ ಜೀರ್ಣವಾಗಿ, ಅವನ ಹೃದಯ ಸಂವೇದನದಿಂದ ಆರ್ದ್ರವಾಗಿ, ಅವನ ರಸಾನುಭವದಿಂದ ಪರಿವರ್ತಿತವಾಗಿ, ನವೋನವ ವಾಗಿ, ಆ ಹೊಸತನಕ್ಕೆ ತಕ್ಕಂತೆ ಅದರ ಶಕ್ತಿ ಸೌಂದರ್ಯ ರಸ ಸತ್ಯ ಇವುಗಳ ಅಭಿವ್ಯಕ್ತಿಗೆ ಸಮರ್ಥವೂ ಸಮರ್ಪಕವೂ ಆದ ಮುಖ್ಯಪಾತ್ರಗಳಾಗಿ, ನೂತನವೂ ವಿವಿಧವೂ ಆಗಿರುವ ಅಂಗ ಉಪಾಂಗ ಅವಯವ ಗಳನ್ನು ಮೊಳೆಯಿಸಿ, ಬಳೆಯಿಸಿ, ಅರಳಿಸಿ, ಹೊಸ ರೂಪಧಾರಣೆ ಮಾಡಿ ಹೊಸ ಜನ್ಮವೆತ್ತಬೇಕಾಗುತ್ತದೆ.[೨] ಕವಿಯ ನವೀನ 'ದರ್ಶನ' ಪ್ರಕಾಶನಕ್ಕಾಗಿಯೇ ಹೊಮ್ಮುವ ನವೋನವ ಪ್ರತಿಮೆಯಾಗಬೇಕಾಗುತ್ತದೆ" (ಕುವೆಂಪು ೨೦೦೩:೪೫೪)ಎಂಬ ವಿವರಣೆ ನೀಡಿದ್ದಾರೆ.

ಭಾಮಹನ ಆಶಯವನ್ನು ವಿವರಿಸುವ ಕುವೆಂಪು ಅವರ ಈ ವ್ಯಾಖ್ಯಾನವು 'ಋಣ ಮತ್ತು ವೃದ್ಧಿ'ಯ ಮೂಲ ಸತ್ವವನ್ನು ಹೇಳಿದಂತಿದೆ. ಆದರೆ ಇಷ್ಟರಿಂದಲೇ 'ಅನನ್ಯ ಪರತಂತ್ರ' ಎಂಬ ನುಡಿಗಟ್ಟು 'ಋಣ'ದ ಸ್ವರೂಪ ಮತ್ತು ಅಗತ್ಯವನ್ನೂ; 'ವೃದ್ಧಿ'ಯ ಪ್ರಭೇದಗಳು ಮತ್ತು ತಾತ್ವಿಕತೆ ಯನ್ನೂ ವಿವೇಚಿಸುವಷ್ಟು ವಿಶಾಲವಾದ ವ್ಯಾಪ್ತಿಯನ್ನು ಹೊಂದಿತ್ತೆಂದು ಹೇಳಲು ಸಾಧ್ಯವಾಗುವುದಿಲ್ಲ. ಪ್ರಾಚೀನ ಕಾಲದಲ್ಲಿ ಅಂತಹ ಅಧ್ಯಯನಗಳು ನಡೆದಿರುವುದಿಲ್ಲ.

**ಹರಣ :** ಕವಿಯು ಕೃತಿರಚನೆಯ ಸಂದರ್ಭದಲ್ಲಿ ಮತ್ತೊಬ್ಬರಿಗೆ ಋಣಿಯಾಗುವ ಸಾರ್ವತ್ರಿಕ ಪ್ರಕ್ರಿಯೆಯನ್ನು ರಾಜಶೇಖರನೆಂಬ ಕಾವ್ಯಮೀಮಾಂಸಕನು 'ಹರಣ' ಮತ್ತು 'ಸ್ವೀಕರಣ' ಎಂಬ ಪದಗಳಿಂದ ನಿರ್ದೇಶಿಸಿದ್ದಾನೆ. ಇಲ್ಲಿರುವ ಸಮಸ್ಯೆಯೆಂದರೆ ಅವನು 'ಹರಣ' ಎಂದರೇನು? 'ಸ್ವೀಕರಣ' ಎಂದರೇನು? ಎಂದು ವ್ಯಾಖ್ಯೆಯ ರೂಪದಲ್ಲಿ ಹೇಳದಿರುವುದು.

**'ಹರಣ'** ಎಂಬ ಪದಕ್ಕೆ 'ಕಳ್ಳತನ' 'ಚೌರ್ಯ' ಎಂಬ ಅರ್ಥಗಳು ಪ್ರಸಿದ್ಧವಾಗಿವೆ. ಕೋಶದಲ್ಲಿ 'ಹರಣ'ಕ್ಕೆ 'ಸ್ವೀಕಾರ' ಎಂಬ ಮತ್ತೊಂದು ಉತ್ತಮಾರ್ಥವಿದ್ದರೂ; ಕಾವ್ಯಮೀಮಾಂಸಕರ ಪ್ರಭಾವದಿಂದ ಅದಕ್ಕೆ ಕ್ರಮೇಣ ಹೀನಾರ್ಥ ಪ್ರಾಪ್ತವಾದಂತಿದೆ.

'Encyclopaedia of Britannica' ಎಂಬ ಬೃಹತ್ಕೋಶದಲ್ಲಿ "ವಾಕ್ಚೌರ್ಯ" ಅಥವಾ "ಹರಣ"ದ(plagiarism) ಲಕ್ಷಣವು ಹೀಗೆ ಹೇಳಿದೆ: "An appropriation or copying from the work of another in literature or art and the passing off of the same as original or without acknowledgement of the real authorship or source". ಸಮಗ್ರವಾದ ಗ್ರಂಥವನ್ನಾಗಲಿ ಅಥವಾ ಅದರ ಬಹುಭಾಗವನ್ನಾಗಲಿ ಒಬ್ಬ ಕವಿಯು ಇನ್ನೊಬ್ಬನಿಂದ ಅಪಹರಿಸಿದ್ದರೆ ಆಗ ಅದು ಹರಣವೆಂದು ಸಾರಲು ಯಾವ ಅಡ್ಡಿಯೂ ಇಲ್ಲ. ಇದನ್ನು ಎಲ್ಲರೂ ನಿಂದಿಸಿದರೆ ಯಾವ ತಪ್ಪೂ ಇಲ್ಲ."(ತೀನಂಶ್ರೀ, ೧೯೫೫:೭೩) ಇದುವರೆಗಿನ ವಿಶ್ಲೇಷಣೆಯಿಂದ 'ಹರಣ'ವೆಂಬ ಪರಿಕಲ್ಪನೆಯು ಒಂದು ದೋಷವನ್ನು ಕುರಿತಿದೆ ಮತ್ತು ಅದು ಅನಪೇಕ್ಷಣೀಯವಾದುದು ಎಂಬ ಅಂಶ ವ್ಯಕ್ತವಾಗುತ್ತದೆ.

"ಕದಿಯದ ಕವಿಯಿಲ್ಲ, ಕದಿಯದ ವರ್ತಕನಿಲ್ಲ, ಯಾರು ಬಚ್ಚಿಡಲು ಬಲ್ಲನೋ ಅವನು ಮಾತಿಗೆ ಸಿಕ್ಕದೆ ಬಾಳುತ್ತಾನೆ." ಎಂದು ರಾಜಶೇಖರನು ಹೇಳಿದನು (ಆದರೆ ಈ ಮಾತನ್ನು ತೀನಂಶ್ರೀ ಒಪ್ಪುವುದಿಲ್ಲ) "ಅನ್ಯರದನ್ನು ತನ್ನದೆಂದು ಮರೆಮಾಚಿ ಹೇಳುವುದೇ ನಿಜವಾದ ಹರಣ. ನಿಜವಾದ ದೋಷ. ಪರರ ಕೃತಿಗಳಿಂದ ಮುಚ್ಚುಮರೆ ಇಲ್ಲದೆ ತೆಗೆದುಕೊಂಡು ಅದಕ್ಕೆ ಹೊಸದೊಂದು ಮೆರುಗನ್ನು ತನ್ನ ಪ್ರತಿಭಾ ವ್ಯಾಪಾರದಿಂದ ಅಳವಡಿಸುವುದು ಈ ಜಾತಿಗೆ ಸೇರಲಾರದು. ಅದು ಹರಣವಲ್ಲ ಸ್ವೀಕರಣ. ಅದನ್ನು ಮಾಡದ ಕವಿಯೇ ಇಲ್ಲ" ಎಂದಿದ್ದಾರೆ.(ತೀನಂಶ್ರೀ, ೧೯೯೦:೧೫೬)

"ಒಬ್ಬ ಕವಿ ಮತ್ತೊಬ್ಬರ ಮಾತುಗಳನ್ನು ತನ್ನದೆಂದು ಮರೆಮಾಚಿ ಹೇಳುವುದು ಹರಣ. ಆದರೆ ಕವಿಗಳು ಒಬ್ಬರಿಂದ ಒಬ್ಬರು ಏನನ್ನೂ ಕೊಡುಕೊಳೆ ನಡೆಸಬಾರದೆಂದಲ್ಲ. ಹಾಗಾದಾಗಲೂ ಇತರರಿಂದ ಪಡೆದದ್ದನ್ನು ತನ್ನದನ್ನಾಗಿ ಮಾಡಿಕೊಳ್ಳುವಷ್ಟು ಪ್ರತಿಭೆಯಾದರೂ ಇರಬೇಕು. ಇಲ್ಲದಿದ್ದರೆ ಅದು ಹರಣ; ದೋಷ. ಇದನ್ನು ಕುರಿತು ಮೊದಲು ಆಲೋಚನೆ ನಡೆಸಿದವನು ರಾಜಶೇಖರ. ಹರಣದಲ್ಲಿ ಪರಿತ್ಯಾಜ್ಯ ಮತ್ತು ಅನುಗ್ರಾಹ್ಯ ಎಂಬ ಎರಡು ಬಗೆಗಳು. ಹರಣಕೂಡದೆಂದು ಪೂರ್ವಾಚಾರ್ಯರ ಅಭಿಪ್ರಾಯ. ರಾಜಶೇಖರನು ಯಾವುದೇ ಕಾರಣಕ್ಕೂ ಹರಣವನ್ನು ಒಪ್ಪುವುದಿಲ್ಲ. ಹರಣದ ವಿಚಾರದಲ್ಲಿ ಅವಂತಿ ಸುಂದರಿಯ ನಿಲುವು ಹೀಗಿದೆ:

"ಶಬ್ದಹರಣವನ್ನಾಗಲೀ, ಅರ್ಥಹರಣವನ್ನಾಗಲೀ ಸಮರ್ಪಕ ಕಾರಣಗಳಿಂದ ಕೈಗೊಂಡರೆ ತಪ್ಪೇನಿಲ್ಲ. ಹಿಂದಿನ ಈ ಕವಿ ಅಪ್ರಸಿದ್ಧ, ನನಗೆ ಪ್ರಸಿದ್ಧಿ ಬಂದಿದೆ; ಇವನು ಅಪ್ರತಿಷ್ಠ, ನನಗೆ ಪ್ರತಿಷ್ಠೆ ಲಭಿಸಿದೆ; ಇವನ ಸಂವಿಧಾನ ಕಲೆ ಅಪೂರ್ಣ; ನನ್ನ ಸಂವಿಧಾನ ಕಲೆ ಪರಿಪೂರ್ಣ; ಅವನ ಮಾತು ಒಗರು, ನನ್ನದು ದ್ರಾಕ್ಷಿಯಂತೆ ಸವಿ; ಇವನಿಗೆ ಮಿಕ್ಕ ಭಾಷೆಗಳ ವೈಶಿಷ್ಟ್ಯದ ಪರಿಜ್ಞಾನವಿಲ್ಲ, ನನಗೆ ಭಾಷಾವಿಶೇಷಗಳ ಪರಿಜ್ಞಾನವುಂಟು. ಇದನ್ನರಿಯುವವರೇ ಯಾರೂ ಇಲ್ಲ; ಇದು ಯಾರೋ ದೇಶಾಂತರದವರು ಮಾಡಿದ್ದು; ಇದನ್ನು ಬರೆದವರು ಯಾರೆಂಬುದೇ ಯಾರಿಗೂ ಗೊತ್ತಿಲ್ಲ; ಇದು ಅಪಶಬ್ದಗಳಿಂದಲೂ ಕೋಪದಿಂದ

ಕೂಡಿದ ಕಟುವಾದ ಭಾಷೆಯಿಂದಲೂ ಮೆಚ್ಚುಗೆಯಾಗುವಂತಿಲ್ಲ." ಇವುಗಳನ್ನು ಹರಣಕ್ಕೆ ಸಕಾರಣವೆನ್ನ ಲಾಗಿದೆ. ಎಂದರೆ ಅನ್ಯರಿಂದ ಕದ್ದರೂ ಅದರ ಬಳಕೆಯಿಂದ ಹೆಚ್ಚನ್ನು ಸ್ಥಾಪಿಸಬೇಕೆಂದು ಹೇಳಿದಂತಾಯಿತು. (ಶಿವರುದ್ರಪ್ಪ ಜಿ.ಎಸ್., ನಾರಾಯಣ ಕೆ.ವಿ., ೧೯೯೪:೨೨೪)

ಒಬ್ಬ ಕವಿಯು ಮತ್ತೊಬ್ಬನಿಂದ ಉಪಕೃತನಾಗುವುದು ಸಹಜ. ಇನ್ನೊಬ್ಬ ಕವಿಯಿಂದ ತೆಗೆದುಕೊಂಡದ್ದು ಅರ್ಥಾಂತರವಲ್ಲಿ ಪರಿಣಾಮಗೊಂಡರೆ ಅದು ಸ್ವೀಕರಣ. ಎಂದರೆ ಮೊದಲಿನ ಕವಿಯು ಬಳಸಿದ್ದಕ್ಕಿಂತಲೂ ಬೇರೆಯಾದ ಅರ್ಥದಲ್ಲಿ ಎರವಲು ಪಡೆದವನು ಬಳಸಬೇಕು. ಇಲ್ಲದಿದ್ದರೆ ಅದು ಹರಣ. ಕೃತಿಗಳಲ್ಲಿರುವ ಸಮಾನ ಅಂಶಗಳೇ ಹರಣ ಸೂಚಕವೆಂದು ರಾಜಶೇಖರನು ಹೇಳಿದನು."

ರಾಜಶೇಖರನ 'ಹರಣ'ದ ಪರಿಕಲ್ಪನೆಗೆ ಕೃತಿಚೌರ್ಯವನ್ನು ನಿಷೇಧಿಸುವುದೇ ಮೊದಲಾದ ಪ್ರಯೋಜನ ವಿರಬಹುದಾದರೂ, ಎರಡು ಕೃತಿಗಳಲ್ಲಿ ಕಂಡುಬರುವ ಸಮಾನ ಅಂಶಗಳು ಹರಣ ಸೂಚಕಗಳೆಂದು ಸಾರಾಸಗಟಾಗಿ ನಿರ್ಧರಿಸಿ ಹೇಳುವುದಾದರೆ ಸಮಸ್ಯೆ ಎದುರಾಗುತ್ತದೆ. ಹರಣವು ದೋಷವನ್ನು ಹೇಳ ಹೊರಟಿದೆಯೇಹೊರತು ಅವಂತೀ ಸುಂದರಿಯ ನಿಲುವನ್ನನುಸರಿಸಿ ಯೋಚಿಸಿದಾಗಲೂ ಅದನ್ನು ಗುಣರೂಪವಾಗಿ ಸಮರ್ಥಿಸಲು ಬರುವಂತಿಲ್ಲ.

ಆದರೆ 'ಋಣ'ವು ಗುಣರೂಪವಾಗಿದ್ದು ಇದನ್ನು ದೋಷವೆನ್ನುವಂತಿಲ್ಲವಾದ್ದರಿಂದ 'ಹರಣ' ಮತ್ತು 'ಋಣ' ಎಂಬ ಪರಿಕಲ್ಪನೆಗಳಿಗೆ ಯಾವುದೇ ಸಾದೃಶ್ಯವಿಲ್ಲ; ಮಾತ್ರವಲ್ಲದೆ ವೈದೃಶ್ಯಾತ್ಮಕ ಸಂಬಂಧವಿದೆ ಎಂದು ಹೇಳಬೇಕಾಗುತ್ತದೆ.

**ಸ್ವೀಕರಣ :** ಪರರ ಕೃತಿಗಳನ್ನು ಮುಚ್ಚುಮರೆಯಿಲ್ಲದೆ ತೆಗೆದುಕೊಂಡು ಅದಕ್ಕೆ ಹೊಸತೊಂದು ಮೆರುಗನ್ನು ತನ್ನ ಪ್ರತಿಭಾ ವ್ಯಾಪಾರದಿಂದ ಅಳವಡಿಸುವುದು ಸ್ವೀಕರಣ; ಅದು ದೋಷವಲ್ಲ. ಸ್ವೀಕರಣ ಪ್ರಜ್ಞಾಪೂರ್ವಕವಾಗಿರುವಂತೆ, ಗೊತ್ತಿಲ್ಲದೆಯೂ ಆಗಿರಬಹುದು. ಗೊತ್ತಿಲ್ಲದೆ ಸ್ವೀಕರಿಸುವುದು ಎಂದರೆ ಕೃತಿಕಾರನು ಸಮಷ್ಟಿ ಸುಪ್ತಪ್ರಜ್ಞೆಯ ಅಂಗವಾಗಿ ಮೂಲ ಮಾದರಿಗಳನ್ನು ಆವರ್ತನಗೊಳಿಸುತ್ತಿರುವುದು. (ಶಿವರುದ್ರಪ್ಪ ಜಿ.ಎಸ್., ನಾರಾಯಣ ಕೆ.ವಿ., ೧೯೯೯:೨೨೩)

"ಒಬ್ಬ ಕವಿಯ ಕಾವ್ಯವನ್ನು ಇನ್ನೊಬ್ಬನು ನೋಡಿರುವ ಸಂಭವವೇ ಇಲ್ಲದಾಗಲೂ ಒಂದೇ ಅಭಿಪ್ರಾಯ, ಕೆಲವು ವೇಳೆ ಒಂದೇ ಉಕ್ತಿ ಕೂಡ ಕಾಣಬರುವುದು ಅಶಕ್ಯವಲ್ಲ. "ಸಂವಾದಿನ್ಯೋ ಮೇಧಾವೀನಾಂ ಬುದ್ಧಯಃ" ಮೇಧಾವಿಗಳ ಬುದ್ಧಿಗಳು ಒಂದನ್ನೊಂದು ಹೋಲುತ್ತವೆ ಎಂಬ ಗಾದೆಯೇ ಇದೆ. ಇಂಥ ಕಡೆಗಳಲ್ಲಿ ಒಬ್ಬನ ಅಭಿಪ್ರಾಯವನ್ನು ಇನ್ನೊಬ್ಬನು ಅಪಹರಿಸಿದನೆಂದಾಗಲಿ, ಸ್ವೀಕರಿಸಿದ ನೆಂದಾಗಲಿ ಹೇಳಬೇಕಾದ ಸಂದರ್ಭವೇ ಇರುವುದಿಲ್ಲ. ಉಳಿದ ಕಡೆಗಳಲ್ಲಿ ಗೋಚರವಾಗುವ ಹೋಲಿಕೆ ಗಳನ್ನು ಆನಂದವರ್ಧನನು "ಪ್ರತಿಬಿಂಬಕಲ್ಪ", "ಆಲೇಖ್ಯಪ್ರಖ್ಯ", "ಸಮಾನದೇಹಿಕಲ್ಪ" ಎಂದು

ಮೂರು ಬಗೆಯಾಗಿ ವಿಂಗಡಿಸುತ್ತಾನೆ. ಇವಕ್ಕೆ 'ಪುರಪ್ರವೇಶ ಸದೃಶ'ವೆಂಬ ನಾಲ್ಕನೆಯ ಬಗೆಯನ್ನು ರಾಜಶೇಖರನು ಸೇರಿಸಿ ಅವುಗಳ ಒಳ ಪ್ರಭೇದವನ್ನು ಅನೇಕ ಉದಾಹರಣೆಗಳೊಂದಿಗೆ ವಿಸ್ತರಿಸುತ್ತಾನೆ.

'ಪ್ರತಿಬಿಂಬಕಲ್ಪ' ಎಂಬುದು ಹೆಸರೇ ಸೂಚಿಸುವಂತೆ ಅದರ ತಿರುಳೆಲ್ಲವೂ ಪರಕವಿಯದು. ಮಾತಿನ ಹೊದಿಕೆ ಮಾತ್ರ ಇವನದು. ಒಬ್ಬ ಮನುಷ್ಯನ ರೂಪಚಿತ್ರದಂತಿರುವ 'ಆಲೇಖ್ಯಪ್ರಖ್ಯ'ವು ಹಿಂದಿನದಕ್ಕಿಂತ ಉತ್ತಮ. ಆದರೆ ಇವೆರಡರಲ್ಲೂ ಮೂಲಕಾವ್ಯದ ನೆನಪು ಥಟ್ಟನೆ ಬಂದು ಎದುರಿಗಿರುವುದರ ಕಡೆಗೆ ಗಮನ ಹೋಗುವುದಿಲ್ಲ. ಈ ಬಗೆಯ ಅನುಕರಣೆ ತ್ಯಾಜ್ಯವೇ ಸರಿ. 'ಸಮಾನ ದೇಹಿಕಲ್ಪ'ದ ವಿಷಯ ಬೇರೆ. ಒಬ್ಬನಿಗೂ ಇನ್ನೊಬ್ಬನಿಗೂ ಆಕಾರದಲ್ಲಿ ಹೋಲಿಕೆ ಇರಬಹುದು. ಆದರೆ ಇವರಿಬ್ಬರಿಗೂ ಪ್ರತ್ಯೇಕವಾದ ವ್ಯಕ್ತಿತ್ವವಿರುವುದರಿಂದ ಅದು ದೋಷವಾಗುವುದಿಲ್ಲ.

"ಪೂರ್ವಕವಿ-ಕೃತಿಯಲ್ಲಿ ದೊರೆಯುವ ವಿಷಯವನ್ನೇ ಒಬ್ಬನು ಸ್ವೀಕರಿಸಿ ಹೊಸಬಗೆಯಲ್ಲಿ ಉಪಯೋಗಿಸಿ, ದೋಷಕ್ಕೆ ಗುರಿಯಾಗದಿರುವುದು ಮಾತ್ರವಲ್ಲ, ಶ್ಲಾಘನೆಗೂ ಪಾತ್ರನಾಗಬಹುದು" (ತೀನಂಶ್ರೀ, ೧೯೯೦:೧೪೪)ಎಂದು ಹೇಳಿ ಕೆಲವು ನಿದರ್ಶನಗಳನ್ನು ನೀಡಿದ್ದಾರೆ. ಮುಂದುವರಿದು, 'ಒಂದೊಂದು ಸಾಹಿತ್ಯದಲ್ಲೂ ಜಗದ್ವಂದ್ಯವಾಗಬಲ್ಲ ಮಹಾಕೃತಿಗಳು ಒಂದೆರಡಿದ್ದರೆ ಹೆಚ್ಚು; ರಾಮಾಯಣ, ಮಹಾಭಾರತ, ಬೃಹತ್ಕಥೆ ಮೊದಲಾದವು ಇಂಥವು; ಇವುಗಳಲ್ಲಿ ಒಂದೊಂದೂ ಭವ್ಯ ಜಗತ್ತು. ಬಾಹ್ಯ ಜಗತ್ತಿನಂತೆಯೇ ಈ ಕೃತಿಗಳೂ ಈಚೀನ ಕವಿಗಳಿಗೆ ಅವರು ಎಷ್ಟೆ ದೊಡ್ಡವರಾಗಿರಲಿ ಆಕರಗಳಾಗುತ್ತವೆ' (ತೀನಂಶ್ರೀ, ೧೯೯೦:೧೫೬). ಇದುವರೆಗಿನ ಉದ್ಧೃತಿಗಳ ಪರಿಶೀಲನೆಯಿಂದ 'ಸ್ವೀಕರಣ'ವು ಒಂದು ಇತ್ಯಾತ್ಮಕ ಪರಿಕಲ್ಪನೆಯಾಗಿ ಕಂಡುಬಂದರೂ ಕೆಲವು ರೀತಿಯ ಸ್ವೀಕರಣವು ವರ್ಜ್ಯವೆಂದೂ, ಮತ್ತೆ ಕೆಲವು ರೀತಿಯ ಸ್ವೀಕರಣವು ಸಹನೀಯವೆಂದೂ ಹೇಳಲಾಗಿದೆ.

'ಸ್ವೀಕರಣ'ವು ಋಣ ಎಂಬ ಪರಿಕಲ್ಪನೆಯನ್ನು ಹೋಲುತ್ತದೆ. ಆದರೆ ಅದು ವೃದ್ಧಿಯನ್ನು ಸ್ಪಷ್ಟವಾಗಿ ಸೂಚಿಸುವುದಿಲ್ಲ. ಆದ್ದರಿಂದ 'ಸ್ವೀಕರಣ' ಎಂಬುದಕ್ಕಿಂತ 'ಋಣ ಮತ್ತು ವೃದ್ಧಿ' ಎಂಬ ಪದಪುಂಜವು ಹೆಚ್ಚು ಖಚಿತವಾಗಿದೆ, ಸ್ಪಷ್ಟವಾಗಿದೆ ಮತ್ತು ಹೆಚ್ಚಿನ ವ್ಯಾಪ್ತಿಯನ್ನು ಹೊಂದಿದೆ ಎಂದು ನಿರ್ಧರಿಸಬಹುದಾಗಿದೆ.

**ಅನ್ಯೋಪಜೀವಿ :** ಡಾ.ಕೆ.ಕೃಷ್ಣಮೂರ್ತಿಯವರ 'ಆನಂದವರ್ಧನದ ಕಾವ್ಯಮೀಮಾಂಸೆ' ಎಂಬ ಗ್ರಂಥದಲ್ಲಿ "ಕವಿಗಳನ್ನು ಆದಿಕಾಲದ ಋಷಿಕವಿಗಳು, ಪ್ರತಿಭಾ ಮೂಲಕವಿಗಳು, ವಿದ್ವತ್ಕವಿಗಳು, ಶಾಸ್ತ್ರಕವಿಗಳು, ಅನ್ಯೋಪಜೀವಿ ಕವಿಗಳು ಎಂಬ ಐದು ಪಂಗಡಗಳಲ್ಲಿ ವಿಭಾಗಿಸಲಾಗಿದೆ.

ಉಪಜೀವಿಗಳೆಂದು ನಾವು ಮೇಲೆ ಕರೆದವರಲ್ಲಿ ಪ್ರತಿಭೆಯೂ ಇಲ್ಲ, ಪಾಂಡಿತ್ಯವೂ ಇಲ್ಲ. ಪೂರ್ವಕವಿಗಳ ಶಬ್ದಗಳನ್ನೋ, ಭಾವಗಳನ್ನೋ, ಪಾದಗಳನ್ನೋ ಕಳ್ಳತನದಿಂದ ಉಪಯೋಗಿಸಿಕೊಳ್ಳುವ

ಚಾತುರ್ಯ ಮಾತ್ರ ಧಾರಾಳವಾಗಿರುತ್ತದೆ. ಈ ವಿಭಾಗವು ಸಂಸ್ಕೃತ ಸಾಹಿತ್ಯಕ್ಕೆ ಮಾತ್ರವಲ್ಲ; ಕನ್ನಡ ಸಾಹಿತ್ಯಕ್ಕೂ ಒಪ್ಪುತ್ತದೆ. ಋಷಿ ಕವಿಗಳ ಪಂಗಡವೊಂದನ್ನು ಬಿಟ್ಟರಾಯಿತು; ಅಷ್ಟೆ" (ಕೃಷ್ಣಮೂರ್ತಿ.ಕೆ ೧೯೬೬ : ೩-೪) ಎಂಬ ಮಾತುಗಳು ಕಂಡುಬರುತ್ತವೆ. ಇಲ್ಲಿ ಋಷಿ ಕವಿಗಳ ಪಂಗಡವೊಂದನ್ನು ಹೊರತು ಪಡಿಸಿ ಉಳಿದೆಲ್ಲ ಕವಿಗಳನ್ನು ಅನ್ಯೋಪಜೀವಿ ಕವಿಗಳೆಂದು ಹೇಳಿದಂತಾಗಿದೆ. 'ಸ್ವೀಕರಣ'ವನ್ನೂ ಅನುಮಾನದಿಂದ ಕಂಡಂತಾಗಿದೆ.

**ಪರಂಪರೆ ಮತ್ತು ವ್ಯಕ್ತಿ ಪ್ರತಿಭೆ :** ಪರಂಪರೆಯೊಂದು ವ್ಯಕ್ತಿಯ ಮೇಲೆ ಪ್ರಭಾವ ಬೀರುವ; ಆ ವ್ಯಕ್ತಿಯು ಪರಂಪರೆಯ ಸತ್ವವನ್ನು ತನ್ನ ವಿಶಿಷ್ಟತೆಯ ಛಾಪಿನೊಂದಿಗೆ ಕಾಪಿಡುವ; ಈ ಚಕ್ರೀಯ ಪ್ರಕ್ರಿಯೆಯನ್ನು ಸಾಹಿತ್ಯ ವಿಮರ್ಶೆಯ ಕ್ಷೇತ್ರದಲ್ಲಿ ಗುರುತಿಸಿದವನು ಟಿ.ಎಸ್.ಎಲಿಯೆಟ್.

"ಅವನ 'Tradition and Individual Talent' ('ಪರಂಪರೆ ಮತ್ತು ವ್ಯಕ್ತಿಪ್ರತಿಭೆ') ಎಂಬ ಲೇಖನದಲ್ಲಿ 'The past should be altered by the present as much as the present is directed by the past.' ('ಒಂದು ಹೊಸ ಕಲಾಕೃತಿಯು ಹಿಂದಿನವುಗಳಿಂದ ಪ್ರಭಾವಿತವಾಗಿರುವುದು ಮಾತ್ರವಲ್ಲ; ಹಿಂದಿನ ಕೃತಿಗಳ ಮೇಲೂ ತನ್ನ ಪ್ರಭಾವ ಬೀರುತ್ತದೆ') ಎಂಬ ಮಾತುಗಳು ಕಂಡುಬರುತ್ತವೆ". (ತಿಪ್ಪೇರುದ್ರಸ್ವಾಮಿ, ೧೯೯೮:೫೩೪)

ಎಲಿಯೆಟ್‌ನ ವಿಚಾರಗಳನ್ನು ಪರಿಚಯಿಸುತ್ತಾ ತಿಪ್ಪೇರುದ್ರಸ್ವಾಮಿಯವರು ವ್ಯಕ್ತಪಡಿಸಿರುವ ಈ ಕೆಳಗಿನ ಅಭಿಪ್ರಾಯವು ಭಾರತೀಯ ಕಾವ್ಯಮೀಮಾಂಸಕರಿಗಿಂತ ಭಿನ್ನವಾದ ನಿಲುವನ್ನು ಪ್ರತಿಪಾದಿಸುತ್ತದೆ. "ಕವಿಯ ಶ್ರೇಷ್ಠತೆಯಿರುವುದು ಪರಂಪರೆಯನ್ನು ಆತ ಎಷ್ಟರಮಟ್ಟಿಗೆ ಮೀರಿ ತನ್ನತನವನ್ನು ಮೆರೆಯುತ್ತಾನೆನ್ನುವುದರ ಮೇಲೆ ಎಂಬುದಾಗಿ ಸಾಮಾನ್ಯವಾಗಿ ಕವಿಗಳೂ ವಿಮರ್ಶಕರೂ ಭಾವಿಸುತ್ತಾರೆ. ಇತರರಿಗಿಂತ ಭಿನ್ನವಾಗಿರುವ ಅಂಶಗಳನ್ನೇ ಗಮನಿಸಿ ವೈಯಕ್ತಿಕ ವೈಶಿಷ್ಟ್ಯದ ಮೇಲೆ ಕವಿಯ ಯೋಗ್ಯತೆಯನ್ನು ಅಳೆಯುತ್ತಾರೆ. ಆದರೆ ಈ ಹಠವನ್ನು ಬಿಟ್ಟು ವ್ಯಾಪಕವಾದ ದೃಷ್ಟಿಯಿಂದ ಇದನ್ನು ನೋಡಬೇಕೆನ್ನುತ್ತಾನೆ ಎಲಿಯೆಟ್."(ತಿಪ್ಪೇರುದ್ರಸ್ವಾಮಿ, ೧೯೯೮:೫೩೩)

ಟಿ.ಎಸ್.ಎಲಿಯೆಟ್‌ನ ಈ ಪರಿಕಲ್ಪನೆಯು 'ಋಣ ಮತ್ತು ವೃದ್ಧಿ'ಯ ಅಗತ್ಯ ಮತ್ತು ಅನಿವಾರ್ಯತೆಗಳನ್ನು ತಾತ್ವಿಕವಾಗಿ ವ್ಯಾಖ್ಯಾನಿಸಲು ಸಹಾಯಕವಾಗಿದೆ. ಮಾತ್ರವಲ್ಲದೆ ಇದೊಂದು ನಿರಂತರ ಜಾಗತಿಕ ಪ್ರಕ್ರಿಯೆ ಎಂಬುದನ್ನು ಮನವರಿಕೆ ಮಾಡಿಕೊಡುತ್ತದೆ.

### ೨.೧.೨. ಋಣ ಮತ್ತು ವೃದ್ಧಿಯ ಔಚಿತ್ಯ

"ಹಿಂದಿನವರಿಗೆ ಋಣಿಯಲ್ಲದ ಕವಿ ಜಗತ್ತಿನಲ್ಲಿ ಎಲ್ಲುಂಟು? ಹಿಂದಿನವರ ಹಂಗಿಗೇ ಸಿಕ್ಕದೆ ತನ್ನ ಗ್ರಂಥವನ್ನೆಲ್ಲಾ ಮೊದಲಿನಿಂದ ಕೊನೆಯ ತನಕವೂ ಸ್ವತಂತ್ರವಾಗಿಯೇ ಬರೆದ ಕವಿಯು ಇದುವರೆಗೆ

ಹುಟ್ಟಲಿಲ್ಲ. ಕಾರ್ಯಪ್ರಪಂಚದಲ್ಲಿ ಹೇಗೋ ಹಾಗೆಯೇ ಕಾವ್ಯ ಪ್ರಪಂಚದಲ್ಲಿಯೂ ಅಸಹಾಯಕ ಶೂರರು ಅತಿ ವಿರಳ. ವರಕವಿಯಾದವನು ಕೂಡ ನಿರೂಪಣೆಯ ರೀತಿಯಲ್ಲೋ, ಶಬ್ದಗಳ ಜೋಡಣೆಯಲ್ಲೋ-ಒಂದರಲ್ಲಾದರೂ ಅವರು ತುಳಿದ ದಾರಿಯಲ್ಲೇ ನಡೆಯಬೇಕು''(ತೀನಂಶ್ರೀ ೧೯೯೫: ೯೦) ವಿದ್ವಾಂಸರ ಈ ಮಾತುಗಳು ಋಣವನ್ನು ಸಾರ್ವತ್ರೀಕರಣಗೊಳಿಸುವಂತಿವೆ

ಕುವೆಂಪು ಅವರು ಸಹ "ಜನಗತ್ತಿನ ಮಹಾಕವಿಗಳನ್ನು ಸಾಲಾಗಿ ನಿಲ್ಲಿಸಿ ನೋಡಿದರೆ ಗುಟ್ಟು ರಟ್ಟಾಗುತ್ತದೆ. ಒಬ್ಬನ ಕೈ ಮತ್ತೊಬ್ಬನ ಜೇಬಿನಲ್ಲಿ! ಎಂಬ ಜಾಣ್ಣುಡಿಯಲ್ಲಿ ಅರೆಪಾಲಿಗೆ ಮಿಗಿಲೆ ಸತ್ಯಾಂಶವಿದೆ" ಎಂದು ಋಣದ ಅನಿವಾರ್ಯತೆಯನ್ನು ಸಾರ್ವತ್ರೀಕರಿಸಿದ್ದಾರೆ. ಜೊತೆಗೆ "ಹನಿಯನ್ನು ಹೊತ್ತು ಮುತ್ತನ್ನು ಹೆರುವ ಶುಕ್ತಿಕೆಯ ಋಣ ಅದರ ದೋಷವಲ್ಲ. ಸರ್ವರೂ ಹೃತ್ಪೂರ್ವಕವಾಗಿ ಹಾರೈಸಿ ಹರಸಬೇಕಾದ ದಿವ್ಯಗುಣ, ಮತ್ತು ಅದರ ಸ್ವಧರ್ಮ ಲಕ್ಷಣ" (ಕುವೆಂಪು, ೨೦೦೩ : ೨೭೫) ಎಂದು ವೃದ್ಧಿಯ ಮಹತ್ವವನ್ನೂ ಪ್ರಸ್ತಾಪಿಸಿದ್ದಾರೆ.

ಭಾರತೀಯ ಕಾವ್ಯಮೀಮಾಂಸೆಯನ್ನು ಕನ್ನಡಿಗರಿಗೆ ಸಮರ್ಥವಾಗಿ ಪರಿಚಯಿಸಿದ ಈ ಇಬ್ಬರು ವಿದ್ವಾಂಸರ ಪೂರ್ವೋಕ್ತ ಅಭಿಪ್ರಾಯಗಳು 'ಋಣ ಮತ್ತು ವೃದ್ಧಿ' ಪ್ರಕ್ರಿಯೆಯನ್ನು ಅರ್ಥೈಸಿಕೊಳ್ಳಲು ಸಹಕಾರಿಯಾಗಿವೆ. ಇಷ್ಟರಿಂದಲೇ ಭಾರತೀಯ ಕಾವ್ಯಮೀಮಾಂಸಾ ಶಾಸ್ತ್ರದಲ್ಲಿ 'ಋಣ ಮತ್ತು ವೃದ್ಧಿ' ಒಂದು ವಿಮರ್ಶಾ ಪರಿಕಲ್ಪನೆಯಾಗಿ ಪ್ರಚಲಿತವಾಗಿತ್ತೆಂದು ಹೇಳಲು ಬರುವಂತಿಲ್ಲ.

ಭಾಮಹನನ್ನು ಹೊರತುಪಡಿಸಿದರೆ ಪ್ರಾಚೀನ ಸಂಸ್ಕೃತ ಕಾವ್ಯಮೀಮಾಂಸಕರು ಪ್ರತಿಭೆಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿದ್ದು; ಕಾವ್ಯದಲ್ಲಿ ಕವಿಯು ಸಾಧಿಸಿದ 'ಅನನ್ಯತೆ' 'ಅಪೂರ್ವತೆ' 'ವಿನೂತನತೆ'ಗಳನ್ನು ಕೀರ್ತಿಸುವುದರಲ್ಲಿ ತೋರುವಷ್ಟು ಪ್ರೀತಿಯನ್ನು, ಪರಂಪರೆಯಿಂದ ಸ್ವೀಕರಿಸಿದ ಅಂಶಗಳ ತಾತ್ವಿಕ ವಿಶ್ಲೇಷಣೆಯಲ್ಲಿ ತೋರಿಲ್ಲವೆಂಬುದನ್ನು ಗಮನಿಸಬಹುದಾಗಿದೆ.

ಕಾವ್ಯಕ್ಕಾಗಿ ಕಾವ್ಯವೆನ್ನುವುದಾದರೆ ಮೇಲಿನ ಎಲ್ಲ ವಿಚಾರಗಳನ್ನು ಇರುವಂತೆಯೇ ಒಪ್ಪಿಕೊಳ್ಳಬಹುದು. ಆದರೆ ಪ್ರತಿಯೊಂದು ಕೃತಿಯೂ ಸಾಂಸ್ಕೃತಿಕ ಉತ್ಪನ್ನವಾಗಿದ್ದು; ಒಂದು ಜನ ಸಮುದಾಯದ ಸಮಕಾಲೀನ ಸಾಮಾಜಿಕ, ರಾಜಕೀಯ, ಧಾರ್ಮಿಕ ಸಂದರ್ಭಗಳು ಅದರ ರಚನೆಯ ಮೇಲೆ ಪರಿಣಾಮ ಬೀರಿರುವುದನ್ನು ಪರಿಗಣಿಸಬೇಕಾಗುತ್ತದೆ. ಈ ಎಲ್ಲ ಆಯಾಮಗಳ ಹಿನ್ನೆಲೆಯಲ್ಲಿ ಒಬ್ಬ ಕವಿಯು ತನ್ನ ಕಾವ್ಯದ ವಸ್ತು-ಆಶಯ-ಆಕೃತಿಗಳಿಗಾಗಿ ಏಕೆ ಪ್ರಾಚೀನ ಆಕರವನ್ನು ಅವಲಂಬಿಸುತ್ತಾನೆ? ಎಂಬ ಪ್ರಶ್ನೆಗೆ ತಾತ್ವಿಕ ಉತ್ತರವನ್ನು ಕಂಡುಕೊಳ್ಳಬೇಕಾದ ಅನಿವಾರ್ಯತೆಯಿದೆ.

ಆನಂದವರ್ಧನನು ಧ್ವನ್ಯಾಲೋಕದಲ್ಲಿ ಹೇಳುವಂತೆ ಸಹಸ್ರ ಸಹಸ್ರಮಂದಿ ಬೃಹಸ್ಪತಿಗಳು ಬಳಸಿದರೂ ಖಾಲಿಯಾಗದಷ್ಟು ಸಮೃದ್ಧವಾದ ವಿನೂತನ ಕಾವ್ಯವಸ್ತು ಸ್ವಭಾವಗಳಿವೆ, ಹೊಸತನದ ತುಡಿತದಿಂದ

ನೂರಾರು ಕವಿಗಳು ಹೊಸ ವಸ್ತುವನ್ನು ಆರಿಸಿಕೊಂಡು ಕಾವ್ಯರಚಿಸಿದ್ದಾರೆ. ಆದರೂ ಕೆಲವರು ಕವಿಗಳು ವಿನೂತನ ವಸ್ತುಗಳಿಗೆ ಒಲಿಯದೆ ಪ್ರಾಚೀನ ಆಕರಗಳನ್ನೇ ಏಕೆ, ಹೆಚ್ಚಾಗಿ ಅವಲಂಬಿಸಿದ್ದಾರೆ? ಎಂಬ ಜಿಜ್ಞಾಸೆ ಅಗತ್ಯವೆನಿಸುತ್ತದೆ. ಅವರ ಪ್ರತಿಭಾಸಂಪನ್ನತೆಯನ್ನು ಅಲ್ಲಗಳೆಯುವಂತಿಲ್ಲ. ಅವರಿಗೆ ಪ್ರತಿಭೆಯ ದಾರಿದ್ರ್ಯವನ್ನು ಆರೋಪಿಸುವಂತಿಲ್ಲ. ಆದರೂ ಹಳೆಯ ಆಕರಗ್ರಂಥಗಳಿಂದಲೇ ಉತ್ತಮಾಂಶಗಳನ್ನು ಆರಿಸಿ ತರುವಲ್ಲಿ ಆಸಕ್ತರಾಗಿರುವುದರ ರಹಸ್ಯವನ್ನು ಶೋಧಿಸಬೇಕಾಗುತ್ತದೆ. ಈ 'ಋಣ'ಕ್ಕೆ ಗುಣಾತ್ಮಕ ಕಾರಣವನ್ನು ಹುಡುಕುವಲ್ಲಿ ಸಾಮಾಜಿಕ ಮನೋವಿಜ್ಞಾನವು ನಮ್ಮ ನೆರವಿಗೆ ಬರುತ್ತದೆ.

ರಾಬರ್ಟ್ ಬಿಯರ್‌ಸ್ಟೆಡ್ ಎಂಬ ಸಮಾಜಶಾಸ್ತ್ರಜ್ಞನು ತನ್ನ 'ಸೋಷಿಯಲ್ ಆರ್ಡರ್ ' ಎಂಬ ಗ್ರಂಥದಲ್ಲಿ ಒಬ್ಬ ವ್ಯಕ್ತಿಯು ಸಾಮಾಜಿಕ ನಿಯಮ, ಕಟ್ಟಳೆಗಳನ್ನು ಅನುಸರಿಸಲು ಐದು ಕಾರಣಗಳನ್ನು ಗುರುತಿಸಿದ್ದಾನೆ. ತತ್ವಾವಬೋಧನೆ.(indoctrination), ಹವ್ಯಾಸ(habituation), ಉಪಯುಕ್ತತೆ(utility), ಗುರುತಿಸುವಿಕೆ(group identification) ಮತ್ತು ಆದರ್ಶ (reference group) ಎಂಬ ಈ ಐದು ಕಾರಣಗಳನ್ನೇ ನಾವು, ಕವಿಯ ಸಾಂಪ್ರದಾಯಿಕ ಕಾವ್ಯವಸ್ತು ಸ್ವೀಕರಣಕ್ಕೂ ಅನ್ವಯಿಸಬಹುದು.

ನಿದರ್ಶನಕ್ಕೆ ಹರಿದಾಸರು ಶ್ರೀಮದ್ಭಾಗವತ ವಸ್ತುವನ್ನೇ ಹೆಚ್ಚಾಗಿ ಅವಲಂಬಿಸಲು ಕಾರಣಗಳನ್ನು ಹೀಗೆ ವಿವರಿಸಬಹುದು.

ಅನೇಕ ತಲೆಮಾರುಗಳ ಮೇಲೆ ಪ್ರಭಾವಬೀರಿದ 'ಶ್ರೀಮದ್ಭಾಗವತ'ದಿಂದ ಪ್ರಭಾವಿತವಾದ ಪರಿಸರದಲ್ಲೇ ಹುಟ್ಟಿ, ಬೆಳೆದು ಬದುಕುತ್ತಿರುವ ಹರಿದಾಸರು ತಮ್ಮನ್ನು ಆ ಗ್ರಂಥದ ವೈಚಾರಿಕ ಪರಂಪರೆಯ ವಾರಸುದಾರರೆಂದು ಗುರುತಿಸಿಕೊಳ್ಳುವ ಮೂಲಕ ಆ ಗ್ರಂಥದ ಬಗ್ಗೆ ಆತ್ಮೀಯ ಭಾವವನ್ನು ಬೆಳೆಸಿಕೊಂಡಿರುತ್ತಾರೆ. ಆಪ್ತವಾದ ಋಣಾನುಬಂಧವನ್ನು ಸ್ಥಾಪಿಸಿಕೊಂಡಿರುತ್ತಾರೆ.

ಶ್ರೀಮದ್ಭಾಗವತವನ್ನು ಹಿರಿಯರು ಬಾಲ್ಯದಿಂದಲೇ ಉದ್ದೇಶಪೂರ್ವಕವಾಗಿ ಬೋಧಿಸಿ ಕಲಿಸುವುದು (indoctrination); ಸ್ವತಃ ದಾಸರು ನಿತ್ಯವೂ ಭಾಗವತವನ್ನು ಕೇಳುವ, ಹೇಳುವ, ಓದುವ, ಮನನ ಮಾಡುವ ಅಭ್ಯಾಸಗಳನ್ನು ಇಟ್ಟುಕೊಂಡಿದ್ದು, ಅವೇ ಮುಂದೆ ಹವ್ಯಾಸಗಳಾಗಿ ಬೆಳೆಯುವುದು (habituation); ಶ್ರೀಮದ್ಭಾಗವತದ ಮಹತ್ವವನ್ನು, ಉಪಯುಕ್ತತೆಯನ್ನು ಅರಿಯುವುದು (utitity); ಆ ಗ್ರಂಥವನ್ನು ನಿರಂತರವಾಗಿ ಬಳಸುವ ಭಾಗವತರ ಮಧ್ಯೆ ತಮ್ಮನ್ನು ಗುರುತಿಸಿಕೊಳ್ಳುವ ಅಗತ್ಯ ಏರ್ಪಡುವುದು (group identification) ಹಾಗೂ ಹರಿದಾಸರು ಭಾಗವತೋತ್ತಮರನ್ನು ಆದರ್ಶ ವ್ಯಕ್ತಿಗಳೆಂದು ಭಾವಿಸಿದ ಅನುಸರಿಸುವುದು(reference group) ಮುಂತಾದ ಕಾರಣಗಳಿಂದ ಆ ಗ್ರಂಥದ ವಸ್ತುವಿನ್ಯಾಸ ಹಾಗೂ ಮೌಲ್ಯಗಳು ಹರಿದಾಸರ ಪ್ರಜ್ಞೆ ಮತ್ತು ಸುಪ್ತಪ್ರಜ್ಞೆಯ ಸ್ತರಗಳಲ್ಲಿ ನೆಲೆಸಿ ನಿಲ್ಲುತ್ತವೆ; ಅಂತಸ್ಥ (internalise)ಗೊಳ್ಳುತ್ತವೆ. ದಾಸರು ಕೀರ್ತನೆಗಳನ್ನು ರಚಿಸತೊಡಗಿದಂತೆ ಪ್ರಜ್ಞಾ

ಪೂರ್ವಕವಾಗಿಯೂ, ಕೆಲವೊಮ್ಮೆ ಅಪ್ರಜ್ಞಾಪೂರ್ವಕ ವಾಗಿಯೂ ಶ್ರೀಮದ್ಭಾಗವತದ ಅಂತಸ್ಥ (internalised) ಅಂಶಗಳು ಅವರ ಆಲೋಚನೆ ಮತ್ತು ಅಭಿವ್ಯಕ್ತಿಗಳಲ್ಲಿ ಮತ್ತೆ ಮತ್ತೆ ಬಳಕೆಯಾಗುತ್ತವೆ. ಈ ಮೂಲಕ ಭಾಗವತ ಪರಂಪರೆಯು ದಾಸರಿಂದ ಸಮಕಾಲೀನಗೊಳ್ಳುತ್ತದೆ. ನೂರಾರು ವರ್ಷ ಜನರ ಸ್ಮೃತಿಕೋಶದಲ್ಲಿ ಸ್ಥಾನ ಪಡೆದುಕೊಳ್ಳುತ್ತದೆ.

ಹೀಗೆ ಪ್ರಾಚೀನ ಆಕರಗ್ರಂಥವೊಂದು ತನ್ನ ಸತ್ವ ಮತ್ತು ಸಮಕಾಲೀನ ಉಪಯುಕ್ತತೆಯ ಮೂಲಕ ಪುನರವತರಿಸುತ್ತದೆ. ಈ ಜಾಗತಿಕ ಪ್ರಕ್ರಿಯೆಯತ್ತ ಗಮನಹರಿಸದವರು ಕೇವಲ ಹೊಸತನದ ಹಂಬಲಕ್ಕೆ ಒಳಗಾಗಬೇಕಾಗುತ್ತದೆ. ಸ್ವಂತಿಕೆ ಸ್ವೋಪಜ್ಞತೆಗಳ ಹಪಾಹಪಿಯೇ ಕಾವ್ಯ ವಿಮರ್ಶೆಯ ಪರಮಗಂತವ್ಯವೆಂದು ನಿರ್ಧರಿಸಬೇಕಾದ ಅಪಾಯ ಒದಗುತ್ತದೆ. "ಅನೇಕ ವೇಳೆ ಸ್ವಂತಿಕೆ ಅಥವಾ ಸ್ವೋಪಜ್ಞತೆ(originality) ಎಂಬುದು 'ಅಹಂ' ಮೂಲವಾಗಿ ಉದಾತ್ತವಾದ ಕಲಾನುಭವಕ್ಕೂ ಅಭಿವ್ಯಕ್ತಿಗೂ ತಡೆಯಾಗುತ್ತದೆ. ಪರಿಮಿತ ಚಮತ್ಕಾರಗಳಲ್ಲಿ ಪರ್ಯವಸಾನವಾಗುತ್ತದೆ. ಇತರರಿಗಿಂತ ಭಿನ್ನವಾಗಿರುವಿಕೆಯೇ ಸ್ವಂತಿಕೆಯಾದಾಗ ಅದು ವಿಕೃತಿಯಲ್ಲಿ ಪರ್ಯವಸಾನವಾಗುವುದೂ ಉಂಟು. ಎಲ್ಲರೂ ಇದ್ದ ಹಾಗೆ ನಾನಿರಬಾರದೆಂದು ಥಟ್ಟನೆ ಲಾಗ ಹಾಕಿ ತಲೆಕೆಳಗಾಗಿ ನಿಂತು ಕೈಯಲ್ಲಿ ನಡೆಯುವುದು ಸ್ವಂತಿಕೆಯಲ್ಲ ವಿಕೃತಿ."(ತಿಪ್ಪೇರುದ್ರಸ್ವಾಮಿ, ೧೯೭೮:೫೪೨) ಈ ಮಾತುಗಳು ವಿಚಾರಣೀಯವಾಗಿವೆ.

ನಾವು ಸಾಮಾನ್ಯವಾಗಿ 'ಒಂದು ಸಾಹಿತ್ಯ ಕೃತಿಯ ವಿಶಿಷ್ಟತೆಯ ಶೋಧವೇ ಸಾಹಿತ್ಯ ವಿಮರ್ಶೆಯ ಕಾರ್ಯ' ಎಂಬ ಗೃಹೀತ ನಿಲುವಿನಲ್ಲಿ ವ್ಯವಹರಿಸುತ್ತೇವೆ. 'ವಿಶಿಷ್ಟತೆ' ಎಂಬುದಕ್ಕೆ ಸಂವಾದಿಯಾಗಿ 'ಅನನ್ಯ' 'ಅಪೂರ್ವ' 'ಸ್ವೋಪಜ್ಞ' 'ನವ್ಯ' ಇತ್ಯಾದಿ ಪದಗಳನ್ನು ಬಳಸುತ್ತೇವೆ. 'ಅಪೂರ್ವ'ವೆಂದರೆ 'ಪೂರ್ವಕಾಲಕ್ಕಿಂತ ಭಿನ್ನವಾದ', 'ಹೊಸದಾದ', 'ಹಿಂದಿನದಲ್ಲದ', 'ಆಶ್ಚರ್ಯಕರವಾದ', 'ವಿಚಿತ್ರವಾದ', 'ವಿಲಕ್ಷಣವಾದ' ಇತ್ಯಾದಿ ಅರ್ಥಗಳಿವೆ. ಆದರೆ ನಾವು ಇದುವರೆಗೆ ಹೊಸದೆಂದು ತಿಳಿದದ್ದು; ಗ್ರಂಥಾಂತರದಲ್ಲಿ ಈ ಮೊದಲೇ ಇತ್ತೆಂದು ತಿಳಿದೊಡನೆ, ಅದು ತನ್ನ ಹೊಸತನದ ಪಟ್ಟವನ್ನು ಕಳೆದುಕೊಳ್ಳುತ್ತದೆ. ಆಗ ಅದು ಅನನ್ಯವಾಗಿ, ನವ್ಯವಾಗಿ, ಮೇಲೆ ಹೇಳಿದ ಅರ್ಥಗಳಲ್ಲಿ ಅಪೂರ್ವವಾಗಿ ಉಳಿಯುವುದಿಲ್ಲ.

ಆದ್ದರಿಂದಲೇ 'ಅಪೂರ್ವತೆ' ಎಂಬುದಕ್ಕೆ 'ತಿಳಿಯಲ್ಪಡದ' 'ಹಿಂದೆ ಅನುಭವಿಸದ'(ಚಕ್ರವರ್ತಿ, ೧೯೬೧:೧೩೪) ಎಂಬ ಅರ್ಥಗಳು ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದಂತೆ ಹೆಚ್ಚು ಸೂಕ್ತವಾಗಿ ಕಂಡುಬರುತ್ತವೆ. ಅಂದರೆ ಒಂದು ಕಾವ್ಯದ ವಸ್ತು, ಆಶಯ ಅಥವಾ ಅಭಿವ್ಯಕ್ತಿ ತಂತ್ರದ ಅಪೂರ್ವತೆಯು ನಮ್ಮ ತಿಳುವಳಿಕೆ ಹಾಗೂ ಅನುಭವದ ಆಧಾರದ ಮೇಲೆ ನಿರ್ಧರಿತವಾಗುತ್ತದೆ ಎನ್ನಬೇಕಾಗುತ್ತದೆ. ಫ್ರೆಂಚ್ ವಿಮರ್ಶಕ ರೋಲಾಬಾರ್ತ್‌ನ ಪ್ರಕಾರ "ನಾವು ಯಾವುದೇ ಕೃತಿಯನ್ನು ಸ್ವೋಪಜ್ಞವೆಂದು

ಹಾಗೂ ಇದು ವಾಸ್ತವಿಕತೆಯ ಚಿತ್ರಣವೆಂದು ಗ್ರಹಿಸುವುದು ಕೇವಲ ಭ್ರಮೆ. ಪ್ರತಿಯೊಂದು ಕೃತಿಯೂ ವಾಸ್ತವಿಕತೆಯನ್ನಲ್ಲದೆ ತನ್ನ ಹಿಂದಿನ ಕೃತಿಗಳನ್ನು ಅವುಗಳು ನಿರ್ಮಿಸಿದ ಒಂದು ಲಿಖಿತ ಪರಂಪರೆಯನ್ನು ಅವಲಂಬಿಸಿರುತ್ತದೆ. ಇಂತಹ ಪ್ರತಿಯೊಂದು ಕೃತಿಯಲ್ಲೂ ಕಂಡುಬರುವ 'ಕೃತಿ ಮಾರ್ದನಿ'(Inter textuality)ಗಳನ್ನು ವಾಕ್ಯಾನುವಾಕ್ಯ ವಿಶ್ಲೇಷಣೆಯಿಂದ ಅರಿತುಕೊಳ್ಳಬಹುದು. ಎಂದರೆ, ಯಾವ ಕೃತಿಯೂ ನಿಜಜೀವನವನ್ನು, ವಾಸ್ತವಿಕ ಸತ್ಯವನ್ನು ಪ್ರತಿಬಿಂಬಿಸುವುದಿಲ್ಲ. ಅದು ಪ್ರತಿಬಿಂಬಿಸುವುದು ಇತರ ಕೃತಿಗಳನ್ನೇ"(ರಾಮಚಂದ್ರನ್ ಸಿ.ಎನ್., ೨೦೦೨:೨೧೧). ಆದ್ದರಿಂದ ಅನನ್ಯತೆಯು ಸಾಪೇಕ್ಷವಾಗಿದೆ ಮತ್ತು ಅದರ ಹುಡುಕಾಟವು ತಾತ್ವಿಕ ಇಕ್ಕಟ್ಟಿನ ಮಧ್ಯೆಯೇ ನಡೆಯಬೇಕಾಗುತ್ತದೆ.

ಈ ಹಿನ್ನೆಲೆಯಲ್ಲಿ 'ಸ್ವೋಪಜ್ಞತೆ'ಯೆಂಬ ಮೃಗಜಲದ ಬೆನ್ನುಹತ್ತುವ; ಸ್ವೀಕೃತ ಅಂಶಗಳನ್ನು 'ಪ್ರತಿಭೆಯಿಂದ' ಬದಲಾಯಿಸದಿದ್ದರೆ ಅದು 'ಹರಣ'ವೆಂದು, ದೋಷವೆಂದು ಘೋಷಿಸುವ ವಿಮರ್ಶಾ ಮಾನದಂಡಗಳಿಗಿಂತ ಭಿನ್ನವಾಗಿ; ಪರಂಪರೆಯ ಉತ್ತಮಾಂಶಗಳನ್ನು ಕಾವ್ಯಕ್ಕೆ ಬಳಸಿಕೊಳ್ಳುವ ಪ್ರವೃತ್ತಿಯನ್ನು ಗೌರವದಿಂದ ಕಾಣುವ, ಗುಣಾತ್ಮಕವಾಗಿ ವ್ಯಾಖ್ಯಾನಿಸುವ 'ಋಣ ಮತ್ತು ವೃದ್ಧಿ' ಎಂಬ ಪರಿಭಾಷೆಯು ಹೆಚ್ಚು ಉಚಿತವಾಗಿ ಕಾಣುತ್ತದೆ.

'Borrowing'(ಎರವಲು), 'Reception' 'ಸ್ವೀಕರಣ' ಮುಂತಾದ ಪದಗಳು ಕೇವಲ ಮತ್ತೊಂದು ಆಕರದ ಬಳಕೆಯನ್ನು ಮಾತ್ರ ಸೂಚಿಸುತ್ತವೆ; ಕವಿಯ ವ್ಯಕ್ತಿಗತ ಸಂಸ್ಕಾರ ಹಾಗೂ ಕಾಲದ ಅಗತ್ಯಗಳು ಸ್ವೀಕೃತಾಂಶಗಳನ್ನು ಪ್ರಭಾವಿಸುವ ಪ್ರಕ್ರಿಯೆಯನ್ನು ಒಳಗೊಳ್ಳುವುದಿಲ್ಲ. ಆದ್ದರಿಂದ 'Borrowing' 'reception' ಹಾಗೂ 'ಸ್ವೀಕರಣ' ಮುಂತಾದ ಪದಗಳಿಗಿಂತ 'ಋಣ ಮತ್ತು ವೃದ್ಧಿ' ಎಂಬ ನುಡಿಗಟ್ಟು ಹೆಚ್ಚು ಖಚಿತವಾಗಿದೆ, ವ್ಯಾಪಕವಾಗಿದೆ ಮತ್ತು ಅರ್ಥಪೂರ್ಣವಾಗಿದೆ ಎಂದು ಹೇಳಬಹುದು.

## ೨.೨. ಸಾಹಿತ್ಯ ವಿಮರ್ಶೆಯ ಪರಿಕರ

ಎರಡು ಸಿದ್ಧ ಕೃತಿಗಳನ್ನು ತೌಲನಿಕವಾಗಿ ವಿವೇಚಿಸುವುದನ್ನು ತೌಲನಿಕ ವಿಮರ್ಶೆ (Commparitive criticism) ಎನ್ನಬಹುದು. ಅದರ ಒಂದು ಪ್ರಭೇದವೇ ಸ್ವೀಕರಣದ ಅಧ್ಯಯನ (Reception studies). 'ಸ್ವೀಕರಣದ ಅಧ್ಯಯನ'ದ ಪರಿಕರವಾಗಿ (tool ಆಗಿ) 'ಋಣ ಮತ್ತು ವೃದ್ಧಿ' ಎಂಬ ಪರಿಭಾಷೆಯು ಬಳಕೆಗೊಳ್ಳುತ್ತದೆ.

ಈ ಹೊಸ ಪರಿಕರಗಳನ್ನು ಹರಿದಾಸ ಸಾಹಿತ್ಯಾಧ್ಯಯನಕ್ಕೆ ಯಾವ ರೀತಿಯಲ್ಲಿ ಅನ್ವಯಿಸಿಕೊಳ್ಳಬಹುದೆಂಬ ವಿಧಾನವನ್ನು ಖಚಿತಪಡಿಸಿಕೊಳ್ಳಲು ಋಣ ಮತ್ತು ವೃದ್ಧಿಯ ಪ್ರಭೇದಗಳನ್ನು ಚರ್ಚಿಸಬಹುದಾಗಿದೆ.



ಋಣವನ್ನು ಮೂರು ರೀತಿಯಿಂದ ಗುರುತಿಸಬಹುದು :

೧. ಕವಿಯೇ ಆಕರವನ್ನು ಸೂಚಿಸಿರುವುದು

ಹರಿದಾಸರು ಕೆಲವೆಡೆ ತಮ್ಮ ಕೃತಿ ಸಮುಚ್ಚಯಕ್ಕೆ ಆಕರಗಳಾಗಿದ್ದ ಗ್ರಂಥಗಳನ್ನು ತಾವೇ ಸೂಚಿಸಿದ್ದಾರೆ. ಉದಾ: ಪುರಂದರದಾಸರು ತಮ್ಮಿಂದ ರಚಿತವಾದ ಕೃತಿಗಳೆಲ್ಲವನ್ನೂ 'ಶ್ರುತಿ ಸ್ಮೃತಿ ಪುರಾಣ ಸಮ್ಮತದಿ ಪುರಂದರ ವಿಠಲ ಪೇಳಿಸಿದ' ಎಂದು ಸ್ಪಷ್ಟವಾಗಿ ಹೇಳಿದ್ದಾರೆ.

ಕದವ ಮುಚ್ಚಿದಳಿದೆಕೋ | ಗಯ್ಯಾಳಿ ಮೂಳಿ ||
ಭಾರತ ರಾಮಾಯಣ ಪಂಚರಾತ್ರಾಗಮ
ಸಾರಸ್ವತದಬಿಂದು ಸೇರಿತು ಒಳಗೆಂದು ||

ಎಂಬ ಈ ಪದದ ಮೂಲಕ; ದಾಸರಿಂದ ರಚಿತವಾದ ಸಾಹಿತ್ಯವೆಲ್ಲ ಮಹಾಭಾರತ, ರಾಮಾಯಣ, ಪಂಚರಾತ್ರಗಮಗಳ ಸಾರತತ್ತ್ವವೇ ಹೊರತು ಮತ್ತೊಂದಲ್ಲವೆಂದು ತಿಳಿದುಬರುತ್ತದೆ.

೨. ಕಾವ್ಯವನ್ನು ವ್ಯಾಖ್ಯಾನಿಸಿದ ವಿಮರ್ಶಕರು ಆಕರವನ್ನು ಗುರುತಿಸಿರುವುದು

ದಾಸರ ಕೆಲವು ಕೀರ್ತನೆಗಳ ಆಕರಗಳನ್ನು ವಿದ್ವಾಂಸರು ತೌಲನಿಕ ಅಧ್ಯಯನದಿಂದ ಗುರುತಿಸಿದ್ದಾರೆ. ಉದಾ:

(ಅ) 'ಶ್ರೀಹರಿದಾಸ ಸಾಹಿತ್ಯವು ಋಗ್ವೇದಾದಿ ವೇದಗಳು, ಭಾರತ, ಪಂಚರಾತ್ರ, ಮೂಲ ರಾಮಾಯಣ, ಭಾಗವತಾದಿ ಪುರಾಣಗಳಿಗನುಸಾರವಾಗಿರುವುದರಿಂದ ಶಾಸ್ತ್ರವೆಂದು ಕರೆಯಲ್ಪಡು ವುದು ಎಂದು ತಿಳಿದುಬರುತ್ತದೆ.'(ವೇಣುಗೋಪಾಲದಾಸರು.ಟಿ.ಕೆ. ೧೯೮೫:೭)

(ಬ) ಹರಿಕಥಾಮೃತಸಾರವಂತೂ ವೇದಾಂತ ಶಾಸ್ತ್ರದ ಸಾರಸಂಗ್ರಹವಾಗಿದೆ. "ಈ ಗ್ರಂಥದ ಪದರು ಪದರುಗಳಲ್ಲಿ ವೇದ, ಗಾಯತ್ರಿ, ಬ್ರಹ್ಮಸೂತ್ರ, ಭಾಗವತ, ಶ್ರೀಮನ್ನ್ಯಾಯಸುಧಾ, ಪರಿಮಳ, ಪ್ರಕಾಶಸಂಹಿತೆ, ಪಂಚರಾತ್ರಾಗಮ, ವಿಷ್ಣುರಹಸ್ಯ, ಶಾಂಡಿಲ್ಯತತ್ತ್ವ, ಮುಂತಾದ ಶಾಸ್ತ್ರೀಯ ಉದ್ಗ್ರಂಥಗಳನ್ನು ಮಥಿಸಿ ಇಟ್ಟಂತಿದೆ."(ಪಂಢರೀನಾಥಾಚಾರ್ಯ ಗಲಗಲಿ ೧೯೯೩:iv)

(ಕ) ಕೆ.ಎಂ.ಕೃಷ್ಣರಾಯರು ಹರಿಕಥಾಮೃತಸಾರದ ರಚನೆಯಲ್ಲಿ ಬಳಕೆಯಾದ ೧೨೪ ಆಕರ ಗ್ರಂಥಗಳನ್ನು ಪಟ್ಟಿಮಾಡಿದ್ದಾರೆ.(ಕೃಷ್ಣರಾಯ.ಕೆ.ಎಂ. ೧೯೬೧:೪೬೭)

೩. ಸಹೃದಯ ತಮ್ಮ ಅಧ್ಯಯನಾನುಭವದಿಂದ ಆಕರಗಳನ್ನು ಹೊಸದಾಗಿ ಶೋಧಿಸುವುದು

ಶ್ರೀಮದ್ಭಾಗವತ ಪ್ರವಚನ ಮಾಡುವ ಸಂಸ್ಕೃತ ವಿದ್ವಾಂಸರು ಅಲ್ಲಲ್ಲಿ ಹರಿದಾಸರ ಕೀರ್ತನೆಗಳನ್ನು ಉಲ್ಲೇಖಿಸುತ್ತಾ ಅವು ಭಾಗವತದ ಯಾವ ಶ್ಲೋಕಗಳ ವಿಷಯವನ್ನು ಪ್ರತಿಪಾದಿಸುತ್ತವೆ ಎಂಬುದನ್ನು ವಿವರಿಸುತ್ತಾರೆ.[೪]

ವೃದ್ಧಿಯಲ್ಲಿ ಅನೇಕ ವಿಧಗಳಿವೆ.

'ಶ್ರೀಮನ್ಯಾಯಸುಧಾ' ಎಂಬ ಸಂಸ್ಕೃತ ಗ್ರಂಥದಲ್ಲಿ ಹೇಳಿದ 'ಸ್ಪಷ್ಟೀಕರಣ'ದ ಆರು ರೀತಿಗಳನ್ನು 'ವೃದ್ಧಿ'ಯ ಬಗೆಗಳೆಂದು ಗುರುತಿಸಬಹುದಾಗಿದೆ.

೧. ಹೇಳದೆ ಬಿಟ್ಟ ಅಂಶವನ್ನು ಹೇಳುವುದು.

೨. ಅತಿಸಂಕ್ಷೇಪಗೊಳಿಸಿರುವ ವಿಷಯವನ್ನು ವಿವರಿಸುವುದು.

೩. ಅತಿ ವಿಸ್ತಾರವಾಗಿ ಹೇಳಿದ್ದರಿಂದ ಬುಧ್ಯಾರೂಢವಾಗದಂತಿರುವ ವಿಷಯಗಳನ್ನು ಸಂಕ್ಷಿಪ್ತವಾಗಿ ತಿಳಿಸುವುದು.

೪. ಬಿಡಿಬಿಡಿಯಾಗಿ ಹೇಳಿರುವ ಅಂಶಗಳನ್ನು ಒಂದೇ ಕಡೆ ಕ್ರೋಢೀಕರಿಸಿ ಹೇಳುವುದು.

೫. ಮೊದಲು ಹೇಳಿದ ವಿಷಯದ ಮೇಲೆ ಹೆಚ್ಚಿನ ಪ್ರಶ್ನೆಗಳನ್ನು ಹಾಕಿಕೊಂಡು ಉತ್ತರಿಸಿ ಮೂಲದ ಅಭಿಪ್ರಾಯವನ್ನು ಸಮರ್ಥಿಸುವುದು.

೬. ಅಪವ್ಯಾಖ್ಯಾನಗಳನ್ನು ನಿರಾಕರಿಸಿ ಮೂಲವನ್ನು ದೃಢೀಕರಿಸುವುದು.

ಮೇಲ್ಕಂಡ ಆರು ಪ್ರಕಾರಗಳಿಗೆ ಮತ್ತೆರಡನ್ನು ಸೇರಸಬಹುದು.

೭. ಮೂಲವನ್ನು, ಇರುವಷ್ಟೇ ವಿಸ್ತಾರದಲ್ಲಿ ರೂಪಾಂತರಿಸಿ ಹೇಳುವ ಮೂಲಕ ವೃದ್ಧಿಸುವುದು.

೮. ಮೂಲದ ಛಂದಸ್ಸನ್ನು ಮಾರ್ಪಡಿಸುವ ಮೂಲಕ ವೃದ್ಧಿಸುವುದು.

ಋಣ ಮತ್ತು ವೃದ್ಧಿಯ ಮೇಲ್ಕಂಡ ಪ್ರಕಾರಗಳು ಇತರ ಎಲ್ಲ ಸಂಭವನೀಯ ಪ್ರಭೇದಗಳನ್ನು ಒಳಗೊಳ್ಳುತ್ತವೆ.

ಆಧುನಿಕ ಕನ್ನಡ ವಿಮರ್ಶೆಯಲ್ಲಿ ತೌಲನಿಕ ಅಧ್ಯಯನಗಳು ಸಮೃದ್ಧವಾಗಿ ಕಂಡುಬರುತ್ತವೆ. ಈ ಮಾತು ಹರಿದಾಸರ ಕೃತಿಗಳ ಅಧ್ಯಯನಕ್ಕೂ ಅನ್ವಯವಾಗುತ್ತದೆ. ಹರಿದಾಸ ಸಾಹಿತ್ಯವನ್ನು ಶ್ರೀಮದ್ಭಾಗವತ ದೊಂದಿಗೆ ಹೋಲಿಸಿ ಕೈಗೊಂಡ ಅಧ್ಯಯನಗಳಲ್ಲಿ ಮೊದಲಸೆಯದಾದ ಡಾ.ಎ.ಟಿ.ಪಾಟೀಲರ 'ಪ್ರಸನ್ನ ವೆಂಕಟದಾಸರು ಮತ್ತು ಅವರ ಕೃತಿಗಳು' ಎಂಬ ಮಹಾಪ್ರಬಂಧದಲ್ಲಿ ತೌಲನಿಕ ಪರಿಶೀಲನೆ ಅತಿ ವಿಸ್ತಾರದಲ್ಲಿ ಬಂದಿದೆ. ಅವರು 'ಸ್ವೀಕೃತ ಮತ್ತು ಸ್ವತಂತ್ರ ವಿಷಯಗಳು' ಎಂಬ ಶೀರ್ಷಿಕೆಯಡಿಯಲ್ಲಿ ದೊಡ್ಡ ಪಟ್ಟಿಯನ್ನೇ ನೀಡಿದ್ದಾರೆ.

'ಹರಿದಾಸ ಸಂಪ್ರದಾಯದಿಂದ ದಾಸರು ಸ್ವೀಕರಿಸಿದ್ದೆಷ್ಟು? ಅವರ ಸ್ವತಂತ್ರ ವಿಷಯವೆಷ್ಟು ಎಂಬುದನ್ನು ನೋಡುವಾ' ಎಂಬ ಪ್ರಸ್ತಾವನೆಯಿಂದ ಪ್ರಾರಂಭಿಸಿ ಕೊನೆಗೆ 'ಸಾಮಾನ್ಯವಾಗಿ ಹೇಳುವುದಾದರೆ ವಿಷಯದ



ಸಂದರ್ಭದಲ್ಲಿ ಈ ದಾಸರು ಸ್ವೀಕಾರ ಮಾಡಿದ್ದೇ ಹೆಚ್ಚೆನ್ನಲು ಅಡ್ಡಿಯಿಲ್ಲ. ಸಂಪ್ರದಾಯದ ನಿಷ್ಠೆಯಿಂದಲೂ ಹೆಮ್ಮೆಯಿಂದಲೂ ಅವರು ದಾಸಕೂಟದ ಹಿರಿಯರು ಹಾಕಿಕೊಟ್ಟ ದಾರಿಯಲ್ಲೇ ಹೆಜ್ಜೆ ಇಟ್ಟಿದ್ದಾರೆ. ಆದರೆ ಅದು ಅಂಧಾನುಕರಣದ ರೀತಿಯಲ್ಲಲ್ಲ. ನೈಜತೆಯಿಂದ ಕೂಡಿದ ಅನುಕರಣದ ಬಗೆಯಲ್ಲಿ ಎಂಬುದನ್ನು ನೆನೆಯಬೇಕು.''(ಎ.ಟಿ.ಪಾಟೀಲ ೧೯೪೯:೫೯) ಎಂಬ ತೀರ್ಮಾನವನ್ನು ತಳೆದಿದ್ದಾರೆ.

'ಪುರಂದರದಾಸರು ಮತ್ತು ಶ್ರೀಮದ್ಭಾಗವತ' (ಒಂದು ತೌಲನಿಕ ಅಧ್ಯಯನ) ಎಂಬ ಮಹಾಪ್ರಬಂಧದಲ್ಲಿ ಡಾ.ವಾಸುದೇವ ಅಗ್ನಿಹೋತ್ರಿಯವರು 'ಭಾಗವತದ ಕೆಲವು ಆದರ್ಶಭಕ್ತರ ಕಥೆಗಳು ಹಾಗೂ ದಶಮಸ್ಕಂಧ ಅಥವಾ ಕೃಷ್ಣಲೀಲೆಗೆ ಸಂಬಂಧಿಸಿದ ಕಥಾಪ್ರಧಾನ ಕೀರ್ತನೆಗಳನ್ನು ಭಾಗವತದ ಮೂಲಕ್ಕೆ ಹೋಲಿಸಿ ಅವುಗಳ ವೈಶಿಷ್ಟ್ಯ ಮತ್ತು ಸ್ವಾರಸ್ಯವನ್ನು ಸಹೃದಯರಿಗೆ ತೋರಿಸುವ ಪ್ರಯತ್ನ'(ವಾಸುದೇವ ಅಗ್ನಿಹೋತ್ರಿ ೨೦೦೪:೩೪೭) ಮಾಡಿರುವುದಾಗಿ ಹೇಳಿಕೊಂಡಿದ್ದಾರೆ.

ಇಂತಹ ಅಧ್ಯಯನಗಳ ಸಂದರ್ಭದಲ್ಲಿ ಒಂದು ಕಾವ್ಯವನ್ನು ಅದರ ಆಕರದೊಂದಿಗೆ ಹೋಲಿಸುತ್ತಾ ಘಟನಾ ವಿವರಗಳಲ್ಲಿ ಉಂಟಾದ ಪರಿವರ್ತನೆಯನ್ನು ಲಕ್ಷಿಸುವುದು ಸಾಮಾನ್ಯ ರೂಢಿಯಾಗಿದೆ. ಈ ವಿಧಾನದಲ್ಲಿ 'ಕವಿಯು ಮೂಲಕ್ಕೆ ಎಷ್ಟರ ಮಟ್ಟಿಗೆ ವಿಧೇಯನಾಗಿದ್ದಾನೆ?' 'ಯಾವ ಅಂಶಗಳಲ್ಲಿ ಭಿನ್ನನಾಗಿದ್ದಾನೆ?' 'ಅವನ ಕಾವ್ಯಕೌಶಲವು ಎದ್ದು ಕಾಣುವ ನೆಲೆಗಳಾವುವು? ಇತ್ಯಾದಿ ಪರಿಶೀಲನೆಯಿಂದ ಕೃತಿಪರೀಕ್ಷೆ ನಡೆದಿವೆ.

## ೨.೩. ಸಂಸ್ಕೃತಿ ಶೋಧದ ಆಯಾಮ

ಇತ್ತೀಚಿಗೆ ವಿಮರ್ಶಾ ವಿಧಾನಗಳಲ್ಲಿ ಸಾಕಷ್ಟು ಹೊಸ ಹೊಸ ಶೋಧಗಳು ನಡೆದಿವೆ. ಬಗೆಬಗೆಯ ವಿಮರ್ಶಾ ಪರಿಕರಗಳು(tools) ದೊರಕಿವೆ. ಹೀಗಾಗಿ ಇಂದು 'ಋಣ ಮತ್ತು ವೃದ್ಧಿ'ಯನ್ನು ಕುರಿತ ನಮ್ಮ ಅಧ್ಯಯನವು ಹಳೆಯ ತಲೆಮಾರಿನ ವಿದ್ವಾಂಸರ ಹುಡುಕಾಟದ ವಿಧಾನಕ್ಕಿಂತ ಭಿನ್ನವಾಗಬೇಕಾಗಿದೆ.[೬] ಕೇವಲ ಲೋಪ-ಆಗಮ-ಆದೇಶಗಳ ಚೌಕಾಶಿ ಲೆಕ್ಕಾಚಾರವನ್ನು ಮೀರಿ ಗಂಭೀರವಾದ ಮತ್ತು ವಿಸ್ತಾರವಾದ ಸೈದ್ಧಾಂತಿಕ ಪ್ರಶ್ನೆಗಳನ್ನು ಎದುರಿಸುವ ಮೂಲಕ ತಾತ್ವಿಕ ಚರ್ಚೆಗೆ ಎಡೆಮಾಡಿಕೊಡಬೇಕಾಗಿದೆ. ಯಾಕೆಂದರೆ ಕಾವ್ಯವಾಗಲಿ, ಅದರ ಭಾಷೆಯಾಗಲಿ, ಅದರ ಜನಪ್ರಿಯತೆಯಾಗಲಿ ಕೇವಲ ಕಾವ್ಯಗುಣವನ್ನು ಮಾತ್ರ ಅವಲಂಬಿಸಿರುವುದಿಲ್ಲ. ಮೂಲದ ಆಯ್ಕೆಯಾಗಲಿ, ಅಲ್ಲಿಂದ ಕೆಲವನ್ನು ಆಯ್ದುತಂದು ವೃದ್ಧಿಪಡಿಸುವ ಕಾರ್ಯವಾಗಲಿ ಕೇವಲ ಕವಿಯ ಕುಶಲತೆಯ, ಜಾಣ್ಮೆಯ ದ್ಯೋತಕವೆಂದು ಭಾವಿಸಿ ಸಂಭ್ರಮಿಸಬೇಕಾಗಿಲ್ಲ. ಬದಲಾಗಿ ಋಣ ಮತ್ತು ವೃದ್ಧಿ ಪ್ರಕ್ರಿಯೆಯು ಕವಿಯ ಆಲೋಚನಾ ವಿನ್ಯಾಸವನ್ನೂ, ಅವನನ್ನು ಒಳಗೊಂಡಿರುವ ಸಾಮಾಜಿಕ ಗುಂಪಿನ ಸಾಹಿತ್ಯಕ ಅಗತ್ಯವನ್ನೂ ಈ ಕಾವ್ಯವು ಸೂಚಿಸುತ್ತಿರುತ್ತದೆ.

ಕವಿಯೂ ಒಬ್ಬ ಮನುಷ್ಯನಾದ್ದರಿಂದ, ಅವನೂ ಉಳಿದ ಮನುಷ್ಯರಂತೆ ಕಾಲ ದೇಶಗಳಿಂದ ಬದ್ಧನಾದಂಥವನು; ಒಂದು ನಿರ್ದಿಷ್ಟವಾದ ಕಾಲದ ಒಂದು ನಿರ್ದಿಷ್ಟ ಸಮಾಜವಲ್ಲಿ ಬದುಕುವಂಥವನು. ಆ ಸಮಾಜದ ಜೊತೆ ಅವನು ಒಂದು ವಿಶಿಷ್ಟ ಸಂಬಂಧವನ್ನು ಪಡೆದುಕೊಂಡಿರುತ್ತಾನೆ. ಕವಿಯ ಜೀವನದೃಷ್ಟಿ, ಅನುಭವಗಳ ಬಗ್ಗೆ ತಾಳುವ ಧೋರಣೆ ಇವುಗಳನ್ನು; ಕವಿಯ ಮೇಲಾಗಿರುವ ತಾತ್ವಿಕ ಪ್ರಭಾವಗಳು, ಅವನ ಕಾಲದ, ಅವನು ಬದುಕುತ್ತಿರುವ ಸಮಾಜದ ಪರಿಸ್ಥಿತಿ ಇವುಗಳು ನಿಯಂತ್ರಿಸುತ್ತವೆ. ಅಂದರೆ ಕವಿಯ ಕೃತಿಯ ವಸ್ತುವಿನ ಸತ್ವವನ್ನು ನಿರ್ಧರಿಸುತ್ತವೆ. ಆದ್ದರಿಂದಲೇ ಒಂದೇ ವಸ್ತುವನ್ನು ಬೇರೆ ಬೇರೆ ಕವಿಗಳು ಬಳಸಿದರೂ ಅವರ ಕಾವ್ಯಗಳ ಸತ್ವ ಬೇರೆ ಬೇರೆ ಆಗುತ್ತದೆ.

ನಾವಿಲ್ಲಿ ಒಂದು ಸಾಹಿತ್ಯಕೃತಿಯ ಸತ್ವವನ್ನು ಕುರಿತು ಮಾತನಾಡುತ್ತಿರುವುದರಿಂದ, ಕೃತಿಯಲ್ಲಿ ನಿರೂಪಿತವಾಗಿರುವಂಥದು ಹೇಗೆ ನಿರೂಪಿತವಾಗಿದೆ, ಯಾವ ಒಂದು ವೈಯಕ್ತಿಕ ಅವಶ್ಯಕತೆಯಲ್ಲಿ, ಯಾವ ಒಂದು ಸಾಮಾಜಿಕ ಪ್ರಜ್ಞೆಯಿಂದ ಅದು ನಿರೂಪಿತವಾಗಿದೆ ಎನ್ನುವ ಅಂಶಗಳೂ ಮುಖ್ಯವಾಗುತ್ತವೆ.

ಕೃತಿಯ ಸತ್ವವನ್ನು ನಿಯಂತ್ರಿಸುವ ಅಂಶಗಳಲ್ಲಿ ಸಾಮಾಜಿಕತೆಯ ಅರಿವು ಒಂದು ಮುಖ್ಯವಾದ ಅಂಶವಾದ್ದರಿಂದ, ಕೇವಲ ತಾನು ಬದುಕುತ್ತಿರುವ ಸಮಾಜದ ಜನರ ನಡವಳಿಕೆಗಳನ್ನು, ಆಚಾರಗಳನ್ನು, ನಂಬಿಕೆಗಳನ್ನು, ಜೀವನದ ರೀತಿಗಳನ್ನು ಎಷ್ಟರಮಟ್ಟಿಗೆ ಕವಿ ತನ್ನ ಕೃತಿಯಲ್ಲಿ ಸೇರಿಸಿದ್ದಾನೆ ಎನ್ನುವುದಷ್ಟೇ ಕೃತಿಗೇ ಮಹತ್ವವನ್ನು ತಂದುಕೊಡಲಾರದು. ಹೇಗೆ ಕವಿ ಅವುಗಳನ್ನು ತನ್ನ ಕೃತಿಯಲ್ಲಿ ಉಪಯೋಗಿಸಿ ಕೊಂಡಿದ್ದಾನೆ? ಯಾವ ಒಂದು ಧೋರಣೆಯನ್ನು ಸಮಾಜದ ಬಗ್ಗೆ ತಾಳಿದ್ದಾನೆ? ಅವನ ದೃಷ್ಟಿಕೋನ ಯಾವುದು? ಯಾರಿಗಾಗಿ ಕವಿ ಕೃತಿ ರಚಿಸಿದ್ದಾನೆ? ಅವನ ದೃಷ್ಟಿಯಲ್ಲಿ ಓದುಗರಾರು? ಎನ್ನುವ ಅಂಶಗಳು ಮುಖ್ಯವಾಗುತ್ತವೆ.

"ಒಬ್ಬ ಕವಿ, ಯಾರಿಗಾಗಿಯೂ ಕಾವ್ಯ ಬಗೆಯುತ್ತಿಲ್ಲ, ತನ್ನ ಸ್ವಸಂತೋಷಕ್ಕಾಗಿ ಬರೆಯುತ್ತಿದ್ದೇನೆ, ಎಂದು ಹೇಳಬಹುದು. ಆದರೆ ಕವಿ ಒಂದು ರೀತಿಯಲ್ಲಿ ಕಾವ್ಯರಚಿಸುವುದರಿಂದಲೇ ಒಂದು ರೀತಿಯ ಓದುಗರನ್ನು, ಅವನಿಗೆ ಬೇಕಾಗಿರಲಿ ಬೇಡವಾಗಿರಲಿ ಗಳಿಸಿಕೊಳ್ಳುತ್ತಾನೆ. ಆದ್ದರಿಂದ ಕವಿಯ ಪೋಷಕ ಮತ್ತು ಓದುಗರು ಕವಿಗೆ ಗೊತ್ತಿಲ್ಲದಂತೆಯೇ ಅವನ ಧೋರಣೆಗಳ ಮೇಲೆ ಪ್ರಭಾವ ಬೀರಿಬಿಡುತ್ತಾರೆ."
(ಚನ್ನಯ್ಯ ಎಚ್.ಎಮ್. ೧೯೯೧:೨೨೯-೨೩೦)

ಇಷ್ಟಕ್ಕೂ ಹೊಸ ಕೃತಿಯ ರಚನೆಯ ಅನಿವಾರ್ಯತೆ ಉಂಟಾಗುವುದು, ಬರಹಗಾರನೊಬ್ಬನು ಒಂದು ನಿರ್ದಿಷ್ಟ ಆಕರವನ್ನು ನೆಮ್ಮಿಕೊಳ್ಳುವುದು ಮತ್ತು ಅದನ್ನು ನಿರ್ದಿಷ್ಟ ರೀತಿಯಲ್ಲಿ ವೃದ್ಧಿಗೊಳಿಸುವುದು: ಹೊಸರೀತಿಯ ಆಲೋಚನಾವಿನ್ಯಾಸದ ಮತ್ತು ಸಾಹಿತ್ಯಕ ಅಗತ್ಯದ ಕಾರಣದಿಂದ. ತನ್ನ ಪರಿಸರದಲ್ಲಿ

ತನ್ನ ಭಾಷೆಯಲ್ಲಿ ಮತ್ತು ಸಾಹಿತ್ಯದಲ್ಲಿ ತಾನು ನಿರೀಕ್ಷಿಸಿದಷ್ಟು ಹೆಚ್ಚು ಪ್ರಚಲಿತವಿಲ್ಲದ, ಆದರೆ ತಾನು ಅಗತ್ಯವೆಂದು ಪರಿಭಾವಿಸುವ ಅರ್ಥ, ಮೌಲ್ಯ, ಶೈಲಿ ಮತ್ತು ಪ್ರಕಾರಗಳನ್ನು ತರುವುದಕ್ಕಾಗಿಯೇ 'ಋಣ'ದ ಅಗತ್ಯ ಬೀಳುತ್ತದೆ. ಆದ್ದರಿಂದ ಯಾವುದೇ ಕಾಲಘಟ್ಟದಲ್ಲಿ ರಚಿತವಾದ ಕೃತಿಯಿದ್ದರೂ ಅದು ಕವಿಯ ಮೌಲ್ಯ ಪ್ರಜ್ಞೆಯನ್ನು ಪ್ರತಿನಿಧಿಸುತ್ತಿರುತ್ತದೆ. ಆದ್ದರಿಂದ ಕಾವ್ಯಗಳನ್ನು ಮತ್ತು ಅವುಗಳ ಮೂಲ ಕೃತಿಗಳನ್ನು ಪರಸ್ಪರ ಹೋಲಿಸಿ ನೋಡುವ ಜೊತೆಗೆ ನಾವು ಈ ಕವಿಯ ಮನಸ್ಸಿನ ಆಲೋಚನೆಗಳನ್ನು ರೂಪಿಸಿದ ತಾತ್ವಿಕತೆಯನ್ನು ಗಮನಿಸಬೇಕಾಗುತ್ತದೆ.

ಇಂಥ ಕೆಲಸಗಳಲ್ಲಿ ಕಾಲ-ದೇಶ ಬದ್ಧವಾದ ಒಂದು ನಿರ್ದಿಷ್ಟ ಸಾಂಸ್ಕೃತಿಕ ವಿನ್ಯಾಸವು ನಮಗೆ ಗೋಚರವಾಗುತ್ತದೆ. ಈ ವಿನ್ಯಾಸ ಕ್ರಮವು ಅಂತಿಮವಾಗಿ ಕೃತಿಕಾರನ ಮೌಲ್ಯ ಪ್ರಜ್ಞೆಯನ್ನು ಸಂಕೇತಿಸುತ್ತದೆ ಮತ್ತು ಮೌಲ್ಯ ಪ್ರಜ್ಞೆ ರೂಪುಗೊಂಡ ಸಾಂಸ್ಕೃತಿಕ ಸಂದರ್ಭದ ಬಗ್ಗೆ ಕೆಲವು ಸೂಚನೆಗಳನ್ನು ನೀಡುತ್ತದೆ. ಆದ್ದರಿಂದಲೇ ಮೂಲ ಮತ್ತು ವೃದ್ಧಿಗೆ ಸಂಬಂಧಿಸಿದಂತೆ ಮಾತನಾಡುವಾಗ ನಾವು ಅವುಗಳ ಹಿಂದಿರುವ ಸಾಂಸ್ಕೃತಿಕ ಒತ್ತಾಯಗಳನ್ನು ಗಮನಿಸಿದರೆ ಹೊಸ ಬಗೆಯ ಚರ್ಚೆ ಸಾಧ್ಯವಾಗುತ್ತದೆ.

ಇಂಥ ಚರ್ಚೆ ಸಾಧ್ಯವಾಗಲು ಈ ಕೆಳಗಿನ ಅಂಶಗಳನ್ನು ಗಮನಿಸಬೇಕು.

೧. ಹರಿದಾಸರು ಆಯ್ದುಕೊಂಡ ಮೂಲದ ವಿನ್ಯಾಸ ಯಾವುದು?

೨. ಮೂಲವನ್ನು ವೃದ್ಧಿಗೊಳಿಸಿದಾಗ ಕೃತಿಯೊಂದು ಪಡೆಯುವ ಹೊಸ ವಿನ್ಯಾಸ ಯಾವುದು?

೩. ವೃದ್ಧಿಗೊಳಿಸಿದಾಗ ಸಿದ್ಧವಾಗುವ ಆಕೃತಿ ಮತ್ತು ಹರಿದಾಸರ ಆಲೋಚನಾ ವಿನ್ಯಾಸ, ಇವುಗಳ ನಡುವಿನ ಸಂಬಂಧಸೂಕ್ಷ್ಮ ಯಾವ ರೀತಿಯದು?

೪. ಕನ್ನಡ ಸಂಸ್ಕೃತಿ ಮತ್ತು ಹರಿದಾಸರ ಚಾರಿತ್ರಿಕ ಅಗತ್ಯಗಳ ನಡುವೆ ಈ ಋಣ ವೃದ್ಧಿಗಳು ಸಾಧಿಸಿದ ಸಮತೋಲನ ಎಂತಹದು?

ಋಣ ವೃದ್ಧಿಯ ಬಗೆಗಣ ಪರಿಕಲ್ಪನೆಯ ತಾತ್ವಿಕ ಚಿಂತನೆಯಲ್ಲಿ ಮೇಲೆ ಸೂಚಿಸಲಾದ ಮೂಲದ ಆಯ್ಕೆಯ ವಿನ್ಯಾಸ, ವೃದ್ಧಿಯ ಚಾರಿತ್ರಿಕ ಸನ್ನಿವೇಶ, ದಾಸರ ಜೀವನ ದರ್ಶನ ಮತ್ತು ವೃದ್ಧಿಯ ಆಕೃತಿಗಳು ಪರಸ್ಪರ ಹೊಂದಾಣಿಕೆಯನ್ನು ಸಾಧಿಸಬೇಕು. ಈ ತಿಳಿವಿನ ಪರಿಧಿಯಲ್ಲಿ ಹರಿದಾಸರ ಭಾಗವತಾಧಾರಿತ ಕನ್ನಡ ಕೀರ್ತನೆಗಳಲ್ಲಿ ಕಂಡುಬರುವ 'ಋಣ ಮತ್ತು ವೃದ್ಧಿ'ಯ ಮಾದರಿಗಳ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ಕೊನೆಟಿಪ್ಪಣಿಗಳು

೧. ಈ ಅಧ್ಯಾಯದ ಬೇರೆ ಬೇರೆ ಭಾಗಗಳಲ್ಲಿ ಶಬ್ದಾರ್ಥಗಳನ್ನು ವಿವರಿಸುವಾಗ ಚಕ್ರವರ್ತಿ ಶ್ರೀನಿವಾಸಗೋಪಾಚಾರ್ಯರ 'ಶಬ್ದಾರ್ಥ ಕೌಸ್ತುಭ' ಎಂಬ ಸಂಸ್ಕೃತ-ಕನ್ನಡ ನಿಘಂಟು ಹಾಗೂ ಕಿಟೆಲ್ಲರ ಕನ್ನಡ-ಕನ್ನಡ-ಇಂಗ್ಲಿಷ್ ನಿಘಂಟನ್ನು ಬಳಸಲಾಗಿದೆ.

೨. "The poet who borrows his'idea' borrows only a subject, the whole work of expressing the impressions it has stirred in him remains to be done. A bad poet may confine himself to a description of the material detail of a ficture, a good one may do that Keats did with the Greecian Urn"-A.E.powell.(ಉದ್ಧೃತ. ಕುವೆಂಪು, ೨೦೦೩:೪೫೮, ಅಡಿಟಿಪ್ಪಣಿಯಿಂದ)

೩. ರಸಭಾವಾದಿ ಸಂಬದ್ಧಾ ಯದ್ಯೌಚಿತ್ಯಾನುಸಾರಿಣೀ |
ಅನ್ವೀಯತೇ ವಸ್ತುಗತಿರ್ದೇಶ ಕಾಲಾದಿಭೇದಿನೀ ||
ವಾಚಸ್ಪತಿ ಸಹಸ್ರಾಣಾಂ ಸಹಸ್ರೈರಪಿ ಯತ್ನತಃ |
ನಿಬದ್ಧಾಪಿ ಕ್ಷಯಂ ನೈತಿ ಪ್ರಕೃತಿರ್ಜಗತಾಮಿವ ||
('ಧ್ವನ್ಯಾಲೋಕ' ೪:೯-೧೦)

೪. ಶ್ರೀವ್ಯಾಸರಾಜ ಮಠಾಧೀಶರಾದ ಶ್ರೀ ಶ್ರೀ ವಿದ್ಯಾವಾಚಸ್ಪತಿ ತೀರ್ಥರು, ವಿದ್ವಾಂಸರುಗಳಾದ ಕೆ.ಎಲ್. ಪುಷ್ಕರಾಚಾರ್ಯರು ಖೇಡ ವೇದವ್ಯಾಸಾಚಾಯರು, ಸಂಜೀವಮೂರ್ತಿದಾಸರು, ಖಗವರಧ್ವಜ ವಿಠಲದಾಸರು, ಪಂಚಮುಖಿ ಪವಮಾನಾಚಾರ್ಯರು, ವ್ಯಾಸನಕೆರೆ ಪ್ರಭಂಜನಾಚಾರ್ಯರು, ಬನ್ನಂಜೆ ಗೋವಿಂದಾಚಾರ್ಯರು ಮುಂತಾದವರ ಪ್ರವಚನಗಳನ್ನು ಕೇಳಿ, ಚರ್ಚಿಸಿ ಸಂಗ್ರಹಿಸಿದ ಮೌಖಿಕ ಮಾಹಿತಿಗಳನ್ನೂ ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

೫. ಸ್ಪಷ್ಟೀಕರಣಂಚಾನೇಕವಿಧಮ್ | ಕ್ವಚಿದನುಕ್ತಾಂಶಸ್ಯೋಕ್ತಿಃ | ಕ್ವಾಪ್ಯತಿ ಸಂಕ್ಷಿಪ್ತಸ್ಯ ವಿವರಣಮ್ | ಕ್ವಚಿದತಿವಿಸ್ತೃತತಯಾ ಬುಧ್ಯನಾರೂಢಸ್ಯ ಸಂಕ್ಷೇಪಃ || ಕ್ವಾಪಿ ವಿಕ್ಷಿಪ್ತಸ್ಯ ಏಕೀಕರಣಮ್ | ಕುತ್ರಾಪ್ಯುಕ್ತಸ್ಯೋಪಪಾದನಮ್ | ಕ್ವಚಿದಪವ್ಯಾಖ್ಯಾನ ನಿರಾಸೇನ ದೃಢೀಕರಣಮಿತ್ಯಾದಿ ತತ್ರ ತತ್ರ ದ್ರಷ್ಟವ್ಯಮ್ || (ಶ್ರೀ ಜಯತೀರ್ಥರ, ಶ್ರೀಮನ್ನ್ಯಾಯಸುಧಾ ಗ್ರಂಥದಿಂದ) ಈ ಬಗ್ಗೆ ಹೆಚ್ಚಿನ ವಿವರಗಳನ್ನು ಮಂತ್ರಾಲಯದ ವಿದ್ವಾನ್ ರಾಜಾ.ವಿ.ಸುಜ್ಞಾನೇಂದ್ರಾಚಾರ್ಯ(ಗಿರಿಯಾಚಾರ್ಯ)ರಿಂದ ಪಡೆಯಲಾಗಿದೆ.

೬. ಈ ಉಪ ಅಧ್ಯಾಯದ ತಾತ್ವಿಕ ಚೌಕಟ್ಟನ್ನು ಡಾ.ಶಿವರಾಮ ಪಡಿಕ್ಕಲರ ಸಂಶೋಧನ ಮಹಾಪ್ರಬಂಧದಿಂದ ಸ್ವೀಕರಿಸಲಾಗಿದೆ.

## ಅಧ್ಯಾಯ ೩

# ಶ್ರೀಮದ್ಭಾಗವತ : ಸ್ವರೂಪ ಮತ್ತು ಜೀವನದೃಷ್ಟಿ

೩

# ಶ್ರೀಮದ್ಭಾಗವತ : ಸ್ವರೂಪ ಮತ್ತು ಜೀವನದೃಷ್ಟಿ

## ೩.೧. ಭಾಗವತ : ಪದದ ಅರ್ಥ

'ಭಾಗವತ' ಎಂದೊಡನೆ ಕೃಷ್ಣ ಮಹಿಮೆಗಳನ್ನು ವರ್ಣಿಸುವ 'ಶ್ರೀಮದ್ಭಾಗವತ ಪುರಾಣ'ವು ನಮ್ಮ ನೆನಪಿಗೆ ಬರುತ್ತದೆ. ವಾಸ್ತವವಾಗಿ 'ಭಾಗವತ' ಎಂಬ ಪದವು ಭಕ್ತವಾಚಕವಾಗಿ, ಗ್ರಂಥವಾಚಕವಾಗಿ, ಆಚರಣವಾಚಕವಾಗಿ, ಪ್ರವೃತ್ತಿವಾಚಕವಾಗಿ ಹಾಗೂ ಧಾರ್ಮಿಕ ಸಮುದಾಯ ಸೂಚಕವಾಗಿ ಹೀಗೆ ಐದು ನೆಲೆಗಳಲ್ಲಿ ಬಳಕೆಯಾಗುತ್ತದೆ.

ನಿಘಂಟಿನಲ್ಲಿ 'ಭಾಗವತ' ಎಂಬ ಪದಕ್ಕೆ 'ಭಗವಂತನ ಸಂಬಂಧವಾದ' ಎಂಬ ಅರ್ಥವಿದೆ.(ಚಕ್ರವರ್ತಿ ೧೯೬೭:೨೦೫೮)

"ಭಗವತ್ ಎಂಬುದು ಪರದೈವದ ಹೆಸರು ಭಗವತ್ಸಂಬಂಧವಾದುದು ಭಾಗವತ."(ವೆಂಕಟರಾಮಪ್ಪ ಕೆ., ೧೯೮೬: ೩-೬)



## ೧. ಭಕ್ತವಾಚಕ

ಶ್ರೀಮನ್ನಾರಾಯಣನ ಅಥವಾ ದುರ್ಗೆಯ ಭಕ್ತನನ್ನು 'ಭಾಗವತ' ಎನ್ನುತ್ತಾರೆ.(ಚಕ್ರರ್ತಿ, ೧೯೬೭: ೨೦೫೨)

ಪಾಣಿನಿಯ ಸೂತ್ರಗಳಲ್ಲಿ 'ಶೈವ ಭಾಗವತ'ರ ಪ್ರಸ್ತಾಪವೂ ಇದೆ. ಹಿಂದೆ 'ಭಾಗವತ' ಎಂಬ ಪದವು 'ಭಗವದ್ಭಕ್ತ' ಎಂಬ ಸಾರ್ವತ್ರಿಕ ಭಕ್ತ ಸೂಚಕವಾಗಿದ್ದು ಕ್ರಮೇಣ 'ವಿಷ್ಣುಭಕ್ತ' ವಾಚಕವಾಗಿ ಮಾತ್ರ ಬಳಕೆಯಲ್ಲಿರುವುದು ಕಂಡುಬರುತ್ತದೆ.

## ೨. ಗ್ರಂಥವಾಚಕ

೧. ಭಾಗವತವು ವ್ಯಾಸ ಮಹರ್ಷಿಪ್ರಣೀತವಾದ ಅಷ್ಟಾದಶ ಪುರಾಣಗಳಲ್ಲೊಂದು. ಶ್ರೀ ಕೃಷ್ಣಮಹಿಮೆಯನ್ನು ವರ್ಣಿಸುವ ಒಂದು ಪುರಾಣ ಗ್ರಂಥ (ಚಕ್ರವರ್ತಿ : ೨೦೫೮)

೨. ಕೆ.ವೆಂಕಟರಾಮಪ್ಪನವರ[೧] ಪ್ರಕಾರ :

ಅ. ಈ ಗ್ರಂಥ ಭಗವಂತನಿಂದಲೇ ಮೊದಲು ರಚಿತವಾಯತು ಆದ್ದರಿಂದ ಇದಕ್ಕೆ ಭಾಗವತವೆಂದು ಹೆಸರು.

ಆ. ಭಗವತ್ ಚರಿತ್ರೆಯನ್ನು ಒಳಗೊಂಡಿರುವುದರಿಂದ ಇದು ಭಾಗವತ.

ಇ. ಪ್ರಹ್ಲಾದ ನಾರದಾದಿ ಪರಮಭಾಗವತರ ಚರಿತ್ರೆಗಳೂ ಭಾಗವತ ಧರ್ಮದ ವಿವರಣೆಯೂ ಈ ಪುರಾಣದಲ್ಲಿ ಬಂದಿದೆ. ಆದ್ದರಿಂದಲೂ ಭಾಗವತ. ಇದು ಭಾಗವತರಿಗೆ ಪರಮಾದರಣೀವಾದ ಪೂಜ್ಯಗ್ರಂಥ. 'ಶ್ರವಣದ ದೃಷ್ಟಿಯಿಂದಲೂ, ಚನ್ನಾಗಿ ಅರ್ಥಚಿಂತನ ಮಾಡುವ ದೃಷ್ಟಿಯಿಂದಲೂ, ಇತರ ಪುರಾಣ ಗ್ರಂಥಗಳಿಗಿಂತ ಹೆಚ್ಚು ರಮಣೀಯವಾದ್ದರಿಂದಲೇ ಈ ಕೃತಿಗೆ ಶ್ರೀಮತ್ ಎಂಬ ವಿಶೇಷಣ ಉಂಟೆಂದು ವ್ಯಾಖ್ಯಾನಿಸಲಾಗಿದೆ.'[೨]

ಯಾವುದೇ ಜನಪ್ರಿಯ ಹೆಸರಿನ ಸ್ವಲ್ಪ ಭಾಗವನ್ನು ಕೇಳಿದರೂ ಸಂಪೂರ್ಣ ಹೆಸರು ನೆನಪಾಗುತ್ತದೆ. ಉದಾ : ಸಂಸ್ಕೃತದಲ್ಲಿ ಅನೇಕ ಗೀತೆಗಳಿದ್ದರೂ ಗೀತೆ ಎಂದೊಡನೆ ಶ್ರೀಮದ್ಭಗವದ್ಗೀತೆಯೇ ನೆನಪಿಗೆ ಬರುತ್ತದೆ. ಅದರಂತೆ 'ದೇವೀ ಭಾಗವತ' ಎಂಬ ಮತ್ತೊಂದು ಪುರಾಣವಿದ್ದರೂ ಭಾಗವತ ಎಂದೊಡನೆ ಜನರು ಶ್ರೀಮದ್ಭಾಗವತವೆಂದೇ ಗ್ರಹಿಸುತ್ತಾರೆ. ಇದು ಶ್ರೀಮದ್ಭಾಗವತದ ಜನಪ್ರಿಯತೆಯೆ ದ್ಯೋತಕವಾಗಿದೆ.

## ೩. ಆಚರಣ ವಾಚಕ

ತಾಳ ಹಿಡಿದು ಹಾಡುವವರನ್ನು 'ಭಾಗವತ'ರೆನ್ನುತ್ತಾರೆ.

ಅ. ಯಕ್ಷಗಾನವನ್ನು 'ಭಾಗವತರಾಟ'ವೆಂದೂ ಅಲ್ಲಿ ತಾಳ ಹಿಡಿದು ಹಾಡುವ ಹಾಡುಗಾರರನ್ನು 'ಭಾಗವತ' ಎಂದೂ, ಅವರ ಕಾರ್ಯವನ್ನು 'ಭಾಗವತಿಕೆ' ಎಂದೂ ವ್ಯವಹರಿಸಲಾಗುತ್ತದೆ. ಹಿಂದೆ ಭಾಗವತದ ಕಥಾವಸ್ತುಗಳನ್ನೇ ಹೆಚ್ಚಾಗಿ ಸ್ವೀಕರಿಸಿ ಕಥಾ ಪ್ರಸಂಗಗಳನ್ನು ನಡೆಸುತ್ತಿದ್ದರಿಂದ ಈ 'ಭಾಗವತ' ಎಂಬ ಪದ ರೂಢಿಯಲ್ಲಿರುವಂತೆ ಕಾಣುತ್ತದೆ.

ಆ. ವ್ಯಾಸರಾಜ ಮಠದಲ್ಲಿ ಶ್ರೀಶ್ರೀಗಳವರ ಆಹ್ನೀಕ, ಜಪ ಹಾಗೂ ದೇವಪೂಜಾ ಕಾಲದಲ್ಲಿ ಕಂಚಿನ ತಾಳ ಬಾರಿಸುತ್ತಾ ಸಂಸ್ಕೃತ ಭಾಗವತದ ಗಜೇಂದ್ರಮೋಕ್ಷ, ಗೋಪಿಗೀತಾ; ದ್ವಾದಶಸ್ತೋತ್ರ ಹಾಗೂ ಹರಿದಾಸರ ಕನ್ನಡ ಕೀರ್ತನೆಗಳನ್ನು ಸುಶ್ರಾವ್ಯವಾಗಿ ಹಾಡುವ ಹರಿದಾಸರನ್ನು 'ಭಾಗವತರು' ಎಂದು ಕರೆಯುತ್ತಾರೆ. ವ್ಯಾಸರಾಯರ ಕಾಲದಲ್ಲಿ ಪುರಂದರದಾಸರು ಹಾಗೂ ಕನಕದಾಸರು ಇದೇ ರೀತಿ ಭಾಗವತಿಕೆ ಮಾಡುತ್ತಿದ್ದರೆಂದು ಹೇಳಿಕೊಂಡು ಬರಲಾಗುತ್ತಿದೆ.

ಇ. ಹಾಸನ-ಮಂಡ್ಯ ಜಿಲ್ಲೆಗಳಲ್ಲಿ 'ಭಾಗವತಿಕೆಮೇಳ' ಅಥವಾ 'ಭಾಗವಂತಿಕೆ ಮೇಳ' ಎಂಬ ವಿಷ್ಣುಕಥಾಗಾಯನ-ನರ್ತನ ಪ್ರಧಾನವಾದ ಜಾನಪದಕಲಾ ತಂಡಗಳು ಇರುವುದು ತಿಳಿದುಬರುತ್ತದೆ.

ಈ ಮೂರು ಆಚರಣೆಗಳು ಶ್ರೀಮದ್ಭಾಗವತ ಪುರಾಣ ವಸ್ತುವನ್ನು ಅನೇಕ ವರ್ಷಗಳಿಂದ ಕನ್ನಡಿಗರು ತಮ್ಮ ತಮ್ಮ ಆಸಕ್ತಿ ಹಾಗೂ ಅಗತ್ಯಗಳಿಗೆ ತಕ್ಕಂತೆ ಬಳಸಿಕೊಂಡು ಬಂದುದರ ಕುರುಹಾಗಿವೆ. ಇಲ್ಲೆಲ್ಲ 'ಭಾಗವತ ಗ್ರಂಥ ಪ್ರಸಾರಕರು' ಎಂಬ ಅರ್ಥದಲ್ಲಿ 'ಭಾಗವತ' ಎಂಬ ಪದ ಪ್ರಯೋಗವಾಗುತ್ತಿದೆ. ಇಂದಿಗೂ ತಮಿಳುನಾಡಿನಲ್ಲಿ ಭಾಗವತ ಪುರಾಣ ಹೇಳುವವರನ್ನು 'ಭಾಗವತರ್' ಎಂದೇ ಕರೆಯುವುದನ್ನು ಕಾಣಬಹುದಾಗಿದೆ.

### ೪. ಪ್ರವೃತ್ತಿವಾಚಕ

ಶ್ರೀಮದ್ಭಾಗವತ ಪುರಾಣವೂ, ಇತರ ಅನೇಕ ಗ್ರಂಥಗಳೂ 'ಭಾಗವತ' ಎಂಬ ಪದವನ್ನು ವಿಷ್ಣುಭಕ್ತಿಸಹಿತ ಮಾನವೀಯ ಮೌಲ್ಯಗಳನ್ನು ಅಳವಡಿಸಿಕೊಂಡ ವಿಶಿಷ್ಟ ಪ್ರವೃತ್ತಿಯ ವ್ಯಕ್ತಿ ಸೂಚಕವಾಗಿ ನಿರ್ವಚಿಸಿವೆ.

ಸರ್ವಭೂತೇಷು ಯಃ ಪಶ್ಯೇತ್ ಭಗವದ್ಭಾವಮಾತ್ಮನಃ |
ಭೂತಾನಿ ಭಗವತ್ಯಾತ್ಮನ್ಯೇಷ ಭಾಗವತೋತ್ತಮಃ ||

(ಶ್ರೀಮದ್ಭಾಗವತ : ೧೧-೩-೪೫)

(ಯಾರು ಎಲ್ಲ ಜೀವಿಗಳಲ್ಲಿ, ಪಂಚಭೂತಗಳಲ್ಲಿ ಭಗವಂತನ ಇರುವಿಕೆಯನ್ನು ಕಾಣುವರೋ ಭಗವಂತನಲ್ಲಿ ಈ ಎಲ್ಲ ಜೀವಿಗಳ, ಪಂಚಭೂತಗಳ ಇರುವಿಕೆಯನ್ನು ಕಾಣಬಲ್ಲರೋ ಅವರೇ ಭಾಗವತೋತ್ತಮರು)

ಸದಾಚಾರರತಾಃ ಶಿಷ್ಟಾಃ ಸರ್ವಭೂತಾನುಕಂಪಕಾಃ |
ಶುಚಯಸ್ತ್ಯಕ್ತರಾಗಾಯೇ ಸದಾ ಭಾಗವತಾ ಹಿ ತೇ ||

(ಸ್ಕಾಂಧಪುರಾಣ)

(ಯಾರು ಸದಾ ಸದಾಚಾರದಲ್ಲಿ ನಿರತರಾಗಿರುತ್ತಾರೋ ಸಾಧುಸ್ವಭಾವದವರೋ ಸರ್ವಜೀವಿಗಳಲ್ಲಿ ದಯೆವುಳ್ಳವರೋ, ಶುಚಿರ್ಭೂತರೋ, ದುರಾಸೆಯನ್ನು ಬಿಟ್ಟವರೋ ಅವರೇ ಭಾಗವತರು.)



### ೫. ಧಾರ್ಮಿಕ ಸಮುದಾಯ ವಾಚಕ

ದಕ್ಷಿಣ ಭಾರತದಲ್ಲಿ 'ಭಾಗವತ ಸಂಪ್ರದಾಯ'ವನ್ನು[೬] ಆಚರಿಸುವ ರೂಢಿಯನ್ನಿಟ್ಟುಕೊಂಡವರು ಅನೇಕರಿದ್ದಾರೆ. ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು ಭಾಗವತ ಸಂಪ್ರದಾಯವೆಂಬ ಮಾತಿಗೆ ಎರಡು ಅರ್ಥಗಳಿರುವುದನ್ನು ಉಲ್ಲೇಖಿಸಿದ್ದಾರೆ.

ಅ. "ವಿಷ್ಣುಭಗವಂತನನ್ನು ನಿಯಮದಿಂದ ಆರಾಧಿಸುವವರೂ ವೈಷ್ಣವ ದೀಕ್ಷೆಯನ್ನು ಕೈಗೊಂಡಿರುವವರೂ, ಯಾವ ಸಿದ್ಧಾಂತವನ್ನೇ ಅನುಸರಿಸಿರಲಿ, ಅವರೆಲ್ಲರೂ ವೈಷ್ಣವರೇ. ಅವರೆಲ್ಲ ಈ ವಿಶಾಲಾರ್ಥದಲ್ಲಿ ಭಾಗವತರೇ ಆಗಿರುತ್ತಾರೆ. ಆದರೂ ನಮ್ಮ ದೇಶದಲ್ಲಿ ವೈಷ್ಣವರೆಂದರೆ ಮಧ್ವ ಸಂಪ್ರದಾಯದ ದ್ವೈತಿಗಳು; ಶ್ರೀ ವೈಷ್ಣವರೆಂದರೆ ಶ್ರೀರಾಮಾನುಜಾಚಾರ್ಯರ ಅನುಯಾಯಿಗಳಾದ ವಿಶಿಷ್ಟಾದ್ವೈತಿಗಳು.

ಆ. ಭಾಗವತರು ಎಂದರೆ ಶ್ರೀಶಂಕರಭಗವತ್ಪಾದರವರು ಅನುಸರಿಸಿರುವ ಅದ್ವೈತ ಸಿದ್ಧಾಂತವನ್ನೇ ಅವಲಂಬಿಸಿ ವೈಷ್ಣವ ಸಂಪ್ರದಾಯವನ್ನು ವಿಶೇಷ ರೀತಿಯಿಂದ ಆಚರಿಸುವವರು ಎಂಬ ಸಂಕೇತವು ಬಂದಿರುತ್ತದೆ."(ಸಚ್ಚಿದಾನಂದೇಂದ್ರ ಸರಸ್ವತೀ ೧೯೭೦:೧೪೫)

ಆದರೂ ಅವರೇ ಸೂಚಿಸಿರುವಂತೆ "ಭಾಗವತ ಮತವೆಂದರೆ ವಿಷ್ಣುಭಗವಂತನಲ್ಲಿ ಏಕಾಂತ ಭಕ್ತಿಯುಳ್ಳವರು ಎಂಬ ವಿಶಾಲಾರ್ಥವನ್ನಿಟ್ಟುಕೊಂಡರೆ ನಮ್ಮ ದೇಶದಲ್ಲಿರುವ ಮಾಧ್ವರು, ಶ್ರೀವೈಷ್ಣವರು, ವೈಖಾನಸರು ಇವರೇ ಅಲ್ಲದೆ ಉತ್ತರ ದೇಶದಲ್ಲಿರುವ ರಾಮಾನಂದ, ನಿಂಬಾರ್ಕ, ವಲ್ಲಭ, ಗಾಧಾವಲ್ಲಭೀಯ, ಚೈತನ್ಯ, ಮಹಾರಾಷ್ಟ್ರದ ರಾಮದಾಸೀ ಪಂಥವೇ ಮುಂತಾದ ಅನೇಕ ವೈಷ್ಣವ ಪಂಥಗಳನ್ನು ಈ ಹೆಸರಿನಲ್ಲಿಯೇ ಸೇರಿಸಬೇಕಾಗುವುದು."(ಸಚ್ಚಿದಾನಂದೇಂದ್ರ ಸರಸ್ವತೀ ೧೯೭೦:೧೪೨) ಎಂಬ ಅಭಿಪ್ರಾಯವು ಸೂಕ್ತವೆನಿಸುತ್ತದೆ.

'ಭಾಗವತ ಧರ್ಮ' ಎಂಬ ಪದವೂ ಪ್ರಸಾರದಲ್ಲಿದ್ದು ಅನೇಕ ಪಂಗಡಗಳು ತಮ್ಮನ್ನು 'ಭಾಗವತ'ರೆಂದು ಕರೆದುಕೊಳ್ಳುತ್ತಾರೆ. ಈ ಎಲ್ಲ ಹೆಸರಿನಿಂದ ಪ್ರಖ್ಯಾತವಾದ ಅತಿಪ್ರಾಚೀನವಾದ ಈ ಧರ್ಮವನ್ನು 'ವೈಷ್ಣವ ಸಂಸ್ಕೃತಿ' ಎಂಬ ವಿಶಾಲಾರ್ಥದಲ್ಲಿ ಸ್ವೀಕರಿಸುವುದು ಹೆಚ್ಚು ಉಚಿತವಾಗಿ ತೋರುತ್ತದೆ.

ಪ್ರಸ್ತುತ ಅಧ್ಯಯನದಲ್ಲಿ 'ಭಾಗವತ' ಗ್ರಂಥ ಹಾಗೂ ಪ್ರವೃತ್ತಿಗಳು ಮಾತ್ರ ಪ್ರಸ್ತುತವಾಗಿರುವುದರಿಂದ ಮೊದಲು ಭಾಗವತ ಗ್ರಂಥದ ಸ್ವರೂಪ-ವಿನ್ಯಾಸ-ಜೀವನದೃಷ್ಟಿಗಳನ್ನು ಪರಿಶೀಲಿಸಬಹುದು.

## ೩.೨. ಭಾಗವತ : ಕಾಲ-ಕರ್ತೃವಿಚಾರ

ಕಾಲವಿಚಾರ

ಶ್ರೀಮದ್ಭಾಗವತದ ಕಾಲ-ಕರ್ತೃಗಳನ್ನು ಕುರಿತು ಸಂಶೋಧಕರಲ್ಲಿ ಏಕಾಭಿಪ್ರಾಯವಿಲ್ಲ. ಈ ಬಗ್ಗೆ ಬಹು ಚರ್ಚೆಗಳಾಗಿವೆ. ಸಾಕಷ್ಟು ಗ್ರಂಥಗಳಲ್ಲಿ ಈಗಾಗಲೇ ಪ್ರಕಟಿತವಾದ ಮತ್ತು ಪ್ರಸ್ತುತ ಅಧ್ಯಯನದ

ದೃಷ್ಟಿಯಿಂದ ಅಷ್ಟೇನೂ ಮುಖ್ಯವಲ್ಲದ ವಾದಗಳ ಪೂರ್ಣ ವಿವರಗಳನ್ನು ಪುನರಾವರ್ತಿಸದೆ, ಅಲ್ಲಿಯ ನಿರ್ಣಯಗಳನ್ನು ಮಾತ್ರ ಅವಲೋಕಿಸೋಣ. ಭಾಗವತವು ಇಂದು ಕಂಡುಬರುತ್ತಿರುವ ರೂಪದಲ್ಲಿ ರಚನೆಯಾದುದು ರಾಮಾಯಣ, ಮಹಾಭಾರತ ಹಾಗೂ ಇತರ ಪುರಾಣಗಳ ನಂತರವಾದರೂ, ಮೂಲಸ್ವರೂಪದ "ಭಾಗವತದ ವಸ್ತು ಬಹಳ ಪ್ರಾಚೀನವಾದದ್ದು. ಕ್ರಿಸ್ತಪೂರ್ವ ಹದಿನೈದು ಶತಮಾನ ಗಳ ಹಿಂದೆ ನಡೆದ ಕೃಷ್ಣಕಥೆ ಹತ್ತನೆಯ ಸ್ಕಂಧದಲ್ಲಿ ಬಂದಿದೆ."(ವೆಂಕಟರಾಮಪ್ಪ ಕೆ., ೧೯೮೬:೭) "ಸಾಂಪ್ರದಾಯಿಕ ಹಿಂದೂ ಕಾಲಗಣನ ಪದ್ಧತಿಯ ಪ್ರಕಾರ 'ರಾಮಾವತಾರ' ನಡೆದು ಅನೇಕ ಯುಗಗಳಾದವು. ಇತರ ಅವತಾರಗಳು ಅದಕ್ಕಿಂತಲೂ ಮುಂಚಿನವು. ಈ ದೃಷ್ಟಿಯಿಂದ ಭಾಗವತದ ವಸ್ತುವಿನ ಕೆಲವು ಘಟನೆಗಳು ಕೋಟ್ಯಂತರ ವರ್ಷಗಳಷ್ಟು ಪ್ರಾಚೀನವೆನ್ನಬೇಕಾಗುತ್ತದೆ.

ಭಾಗವತದ ಕಾಲವನ್ನು[೪] ಕ್ರಿ.ಶ.೧೩ನೆಯ ಶತಮಾನಕ್ಕೆ ತಳ್ಳಿದವರಲ್ಲಿ ಪಾಶ್ಚಾತ್ಯರಾದ ವಿಲ್ಸನ್, ಮ್ಯಾಕ್‌ಡೊನೆಲ್, ಕೋಲ್‌ಬ್ರೋಕ್ ಮತ್ತು ಬರ್ನೋಫ್ ಮುಖ್ಯರು. ವಿಂಟರ್‌ನಿಟ್ಜ್ ಇದನ್ನು ೧೦ನೆಯ ಶತಮಾನದ ರಚನೆಯೆಂದು ಭಾವಿಸಿದ್ದಾರೆ. ಫರ್ಕುಹರ್ ಅವರು ಕ್ರಿ.ಶ.೮೦೦ನ್ನು ಒಪ್ಪಿದ್ದು ಪಾರ್ಗಿಟರ್, ಡಾ.ರಾಧಾಕೃಷ್ಣನ್ ಮತ್ತು ಇತರರು ಈ ಕಾಲವನ್ನೇ ಅನುಮೋದಿಸಿದ್ದಾರೆ.

ಡಾ.ಎಸ್.ಶ್ರೀಕಂಠಶಾಸ್ತ್ರೀಗಳು ಕ್ರಿ.ಶ. ಆರನೆಯ ಶತಮಾನದ ಹೊತ್ತಿಗೆ ಶ್ರೀಭಾಗವತದ ರಚನೆಯಾಗದ್ದಿರ ಬೇಕೆಂದು ತಿಳಿಸಿದ್ದಾರೆ. ಇದಕ್ಕೆ ವಿದ್ವಾಂಸರಾದ ಎಂ.ರಾಮಶೇಷಶಾಸ್ತ್ರಿಗಳು ಸಮ್ಮತಿಸಿದ್ದಾರೆ.

ಭಾಗವತದ ಕಾಲವಿಚಾರವನ್ನು ವಿವರವಾಗಿ ಪರಿಶೀಲಿಸಿರುವ ಡಾ.ಬಿ.ಎನ್ .ಕೆ.ಶರ್ಮರು ಅಭಿನವಗುಪ್ತನ ಗೀತಾಭಾಷ್ಯ, ಗೌಡಪಾದನ ಉತ್ತರಗೀತ ವೃತ್ತಿ, ಈಶ್ವರಕೃಷ್ಣನ ಮಾಠರವೃತ್ತಿಗಳಲ್ಲಿ ಭಾಗವತದ ಪ್ರಸ್ತಾಪ ಹಾಗೂ ಶ್ಲೋಕಗಳ ಉಲ್ಲೇಖವನ್ನು ಪರಿಗಣಿಸಿ ಕ್ರಿ.ಶ.೫ನೆಯ ಶತಮಾನದ ಹೊತ್ತಿಗೆ ಇದರ ರಚನೆಯಾಗಿರಬೇಕೆಂದಿದ್ದಾರೆ. ಇದನ್ನು ಆಕ್ಷೇಪಿಸಿದ ಅಮರನಾಥರಾಯ್ ಅವರು ಕ್ರಿ.ಶ.೫೫೮ ರಿಂದ ೬೫೦ರ ಕಾಲವನ್ನು ತೀರ್ಮಾನಿಸಿದ್ದಾರೆ. ಈ ಎಲ್ಲ ಸಂಗತಿಗಳನ್ನು ಶಾಸ್ತ್ರೀಯವಾಗಿ ಚರ್ಚಿಸಿರುವ ಡಾ.ಪ್ರಧಾನ್ ಗುರುದತ್ತ ಅವರು ಭಾಗವತ ಆರು ಅಥವಾ ಏಳನೆಯ ಶತಮಾನದ ರಚನೆ ಎಂದಿಟ್ಟುಕೊಳ್ಳಬಹುದು ಎಂದು ನಿರ್ಧರಿಸಿರುವುದೇ ಸದ್ಯಕ್ಕೆ ಆಧುನಿಕ ವಿದ್ವಾಂಸರ ಅಂತಿಮ ನಿರ್ಣಯವಾಗಿದೆ.

**ಕರ್ತೃವಿಚಾರ**

ಭಾಗವತ ಕಾಲವಿಚಾರದಂತೆಯೇ ಕೃರ್ತವಿಚಾರದಲ್ಲೂ[೫] ಭಿನ್ನಮತ ತಲೆದೋರಿದೆ. 'ಭಾಗವತಕಾರ ತಾಮ್ರಪರ್ಣೀ ನದಿಯ ತೀರದಲ್ಲಿ ವಾಸವಾಗಿದ್ದ ದಕ್ಷಿಣ ದೇಶನಿವಾಸಿ ಎಂಬುದನ್ನು ವಿದ್ವಾಂಸರು ಸಾಮಾನ್ಯವಾಗಿ ಒಪ್ಪುತ್ತಾರೆ.'(ಪ್ರಧಾನ್ ಗುರುತದತ್ತ, ೧೯೯೦ : ೧೨೫)



೧. ಭಾಗವತ ಪುರಾಣದಲ್ಲಿ ಅನೇಕ ವಿಧವಾಗಿ ದ್ರಾವಿಡದೇಶವು ಉಲ್ಲೇಖಿಸಲ್ಪಟ್ಟಿರುವುದರಿಂದ ಭಾಗವತ ಗ್ರಂಥಕರ್ತನು ದ್ರಾವಿಡನೆಂದು ಆಧುನಿಕ ವಿದ್ವಾಂಸರು ಊಹಿಸುತ್ತಾರೆ.

ಆದರೆ ಭಾಗವತದಲ್ಲಿ ಉತ್ತರ ದೇಶದ ಉಲ್ಲೇಖಗಳೂ ಸಾಕಷ್ಟಿವೆ. ಹೀಗಾಗಿ ದ್ರವಿಡ ದೇಶದ ವಿಶೇಷ ಉಲ್ಲೇಖವನ್ನಷ್ಟೇ ಪರಿಗಣಿಸಿ ಮಂಡಿಸಿದ ಊಹೆಗಳನ್ನು ಒಪ್ಪಲು ಕಷ್ಟವಿದೆ.

೨. 'ದೇವೀ ಭಾಗವತ ಪ್ರಿಯರಾದ ಪ್ರಾಚೀನರು ಮತ್ತೆ ಕೆಲವು ಕಾರಣಗಳಿಂದ ಈ ಪುರಾಣವು ಬೋಪದೇವ ಕೃತವೆಂದು ವಾದಿಸುವರು.

ಇದನ್ನೂ ಒಪ್ಪಲು ತೊಡಕುಗಳಿವೆ. ವಾಸ್ತವವಾಗಿ ಬೋಪದೇವನು ರಚಿಸಿರುವುದು 'ಭಾಗವತಾಧ್ಯಾಯ ಸಾರ' ಎಂಬುದನ್ನೇ ಹೊರತು ಶ್ರೀಮದ್ಭಾಗವತವನ್ನಲ್ಲ. ಅಷ್ಟೇ ಅಲ್ಲದೆ ಅವನು ವ್ಯಾಸಕೃತ ಭಾಗವತವವನ್ನು ಇಪ್ಪತ್ತೆರಡಾವೃತ್ತಿ ಓದಿದಂತೆ ಹೇಳಿಕೊಂಡಿದ್ದಾನೆ.

ಆದ್ದರಿಂದ ಬೋಪದೇವ ಭಾಗವತದ ಕರ್ತೃವಾಗಲಾರ ಎಂದು ವಿದ್ವಾನ್ ಮೋಟಗಾನಹಳ್ಳಿ ರಾಮಶೇಷಶಾಸ್ತ್ರಿಗಳು ಅಭಿಪ್ರಾಯ ಪಡುತ್ತಾರೆ.

ಹರಿದಾಸ ಪರಂಪರೆಯನ್ನೊಳಗೊಂಡ ಉತ್ತರ-ದಕ್ಷಿಣ ಭಾರತದ ಸಾಂಪ್ರದಾಯಿಕ ವಿದ್ವಾಂಸರೆಲ್ಲರೂ ಭಾಗವತದ ಕಥಾವಿವರಗಳ ಆಧಾರದಿಂದ ಭಾಗವತ ಪುರಾಣದ ಕರ್ತೃವು ವ್ಯಾಸಮಹರ್ಷಿಯೆಂದೂ; ಅದರ ಕಾಲವೂ ಕಲಿಯುಗದ ಆರಂಭಕ್ಕಿಂತ ಸ್ವಲ್ಪ ಮುಂಚೆ ಎಂದೂ ಹೇಳುತ್ತ ಬಂದಿದ್ದಾರೆ. ಈ ಪ್ರಾಚೀನ ಅಭಿಪ್ರಾಯದ ಪ್ರಕಾರ ಈ ಗ್ರಂಥವು ಈಗ್ಗೆ ಅಂದಾಜು ೫೧೦೫ ವರ್ಷಗಳ ಮೊದಲು ಅಂದರೆ ಕ್ರಿ.ಪೂ.೩೧೦೦ಕ್ಕಿಂತ ಮೊದಲೇ ರಚಿತವಾಗಿದೆ ಎಂದು ಹೇಳಬೇಕಾಗುತ್ತದೆ.

## ೩.೩. ವಸ್ತು-ವಿನ್ಯಾಸ

"ಸಂಸ್ಕೃತ ಭಾಗವತ ಬಹುಕಾಲದಿಂದಲೂ ತಪ್ತ ಜೀವರಿಗೆ ಭಕ್ತಿರಸದಾನ ಮಾಡುತ್ತ ಬಂದಿರುವ ಒಂದು ದಿವ್ಯ ಕಾವ್ಯ"(ಕುವೆಂಪು, ೧೯೮೬: i) ವೇದವ್ಯಾಸ ಪ್ರಣೀತವಾದ ಅಷ್ಟಾದಶ ಮಹಾಪುರಾಣಗಳಲ್ಲಿ ಶ್ರೀಮದ್ಭಾಗವತವೂ ಒಂದು. 'ಶ್ರೀಭಾಗವತ' 'ವಿಷ್ಣುಭಾಗವತ' ಎಂಬ ಹೆಸರುಗಳಿಂದಲೂ ಪರಿಚಿತವಾದ ಈ ಗ್ರಂಥಕ್ಕೆ 'ಪುರಾಣರಾಜ' ಎಂಬ ಹೆಗ್ಗಳಿಕೆ ದೊರೆತಿದೆ.

ಹನ್ನೆರಡು ಸ್ಕಂಧಗಳಿಂದ ಕೂಡಿದ ದೊಡ್ಡವೃತ್ತಗಳನ್ನೊಳಗೊಂಡ ೧೪, ೬೩೯ ಶ್ಲೋಕಗಳ ಈ ಕೃತಿಯನ್ನು ಮುನ್ನೂರ ನಲವತ್ನಾಲ್ಕು ಅಧ್ಯಾಯಗಳನ್ನಾಗಿ ವಿಂಗಡಿಸಲಾಗಿದೆ. ಇದು ಪುರಾಣ ರೂಪದಲ್ಲಿರುವ ತಾತ್ವಿಕ ಭಕ್ತಿಕಾವ್ಯ.

"ಶ್ರೀ ಮದ್ಭಾಗವತವು ಪುರಾಣ ತಿಲಕ, ಅದರ ಹೆಸರೇ ಸೂಚಿಸುವಂತೆ ಅದರಲ್ಲಿ ಭಗವಂತನ ದಿವ್ಯ ಚರಿತ್ರೆಯ ವರ್ಣನೆಯಿದೆ. ಉಳಿದೆಲ್ಲ ಪುರಾಣಗಳಲ್ಲಿದ್ದಂತೆ ಇಲ್ಲಿ ಕಥೆಗೆ ಪ್ರಧಾನ ಸ್ಥಾನವಿಲ್ಲ. ಶ್ರೀಹರಿಯ ಗುಣೋಪಾಸನೆ ಮತ್ತು ಸರ್ವೋತ್ತಮತ್ವವನ್ನು ಹೇಳುವುದೇ ಇದರ ಮಹಿಮೆ. ಇದರಲ್ಲಿ ಬರುವಷ್ಟು ಸ್ತೋತ್ರಗಳು, ಪ್ರಮೇಯಗಳು, ಶ್ರೀಹರಿಯ ಪ್ರೀತಿಗೆ ಕಾರಣವಾದ ಧರ್ಮಗಳು, ಮನುಷ್ಯನ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡಿ ಉಪದೇಶಿಸುವ ಭಗವಂತನ ಅಪರೋಕ್ಷ ಜ್ಞಾನಕ್ಕೆ ಕಾರಣವಾದ ಭಕ್ತಿಭಾವಗಳು ಮತ್ತೆಲ್ಲಿಯೂ ಇಷ್ಟು ಸ್ಪಷ್ಟವಾಗಿ ವರ್ಣಿತವಾಗಿಲ್ಲ. ಭಾಗವತಕಾರನಿಗೆ ಭಕ್ತಿ ಪ್ರತಿಪಾದನೆ, ಪ್ರಚಾರ ಮೊದಲಾದವುಗಳೇ ಮುಖ್ಯ ಗುರಿ. ಇದು ವೇದವೆಂಬ ಕಲ್ಪವೃಕ್ಷದ ಹಣ್ಣು. ದೇವಲೋಕದಿಂದ ಹರಿದು ಬಂದ ಅಮೃತಧಾರೆ. ಭಾಗ್ಯಶಾಲಿಗಳಾದ ಭಕ್ತರು-ರಸಿಕರಾದ ಭಾವುಕರು ಇಹಲೋಕದಲ್ಲಿರುವಾಗಲೇ ಈ ಅಮೃತ ಸವಿದು ಕೃತಾರ್ಥರಾಗಬೇಕು"(ವಾಸುದೇವ ಅಗ್ನಿಹೋತ್ರಿ, ೨೦೦೪: ४)

ಕೃಷ್ಣ ಕಥೆಯೇ ಭಾಗವತದ ಪ್ರಧಾನವಸ್ತುವಾದರೂ, ಈ ಮಹಾಪುರಾಣದಲ್ಲಿ ಈ ಜಗತ್ತಿನ ಮೂಲತತ್ವಗಳ ಸೃಷ್ಟಿ, ಅವುಗಳಿಂದ ಜೀವ ಜಡಗಳ ಸೃಷ್ಟಿ, ಸ್ಥಿತಿ ಮತ್ತು ಪ್ರಳಯಗಳನ್ನು ನಡೆಸುವ ವಿಷ್ಣುವಿನ ಅಗಮ್ಯ ಮಹಿಮೆಯನ್ನು ಹೇಳಲಾಗಿದೆ. ಸ್ವಾಯಂಭುವ ಮನುವಂಶದ ಚರಿತ್ರೆ, ಇತರ ಮನ್ವಂತರಗಳಲ್ಲಿ ಬಂದ ಸೂರ್ಯ-ಚಂದ್ರವಂಶದ ರಾಜಾಧಿರಾಜರುಗಳ ಚರಿತ್ರೆ, ಆಯಾಕಾಲದಲ್ಲಿ ದುಷ್ಟ ಶಿಕ್ಷಣ-ಶಿಷ್ಟ ರಕ್ಷಣೆಗಾಗಿ ಭಗವಂತನು ಎತ್ತಿದ ಅವತಾರ ಕಥೆಗಳು, ಭಗವದ್ಭಕ್ತರ ಚರಿತ್ರೆಗಳು ಹಾಗೂ ಸಾರ್ಥಕ ಮಾನವ ಜೀವನದ ಆದರ್ಶಗಳನ್ನು ರೂಪಿಸಬಲ್ಲ ಜೀವನ ಮೌಲ್ಯಗಳನ್ನು ಇಲ್ಲಿ ವಿಸ್ತಾರವಾಗಿ, ಅಲ್ಲಲ್ಲಿ ಕಾವ್ಯಾತ್ಮಕವಾಗಿ ಪ್ರತಿಪಾದಿಸಿದ್ದಾರೆ. ಅಂತೆಯೇ ಇದು ಧಾರ್ಮಿಕ ಕೃತಿಯಾದರೂ, ಜಟಿಲ ನೀರಸ ತಾತ್ವಿಕ ಗ್ರಂಥವಾಗಿ ಉಳಿಯದೆ ಹಲವು ಸಹಸ್ರಮಾನಗಳ ನಂತರವೂ ತನ್ನ ಮಹತ್ವವನ್ನು ಉಳಿಸಿಕೊಂಡಿದೆ.

ಭಾಗವತದ ಉತ್ಪತ್ತಿಯನ್ನು ಕುರಿತು ಅದರ ಪ್ರಥಮ ಸ್ಕಂಧದ ನಾಲ್ಕು ಮತ್ತು ಐದನೆಯ ಅಧ್ಯಾಯಗಳಲ್ಲಿ ಹೇಳಿದೆ. ಭಾಗವತವನ್ನು ಮೊದಲು ಶ್ರೀಮನ್ನಾರಾಯಣನೆ ಬ್ರಹ್ಮನಿಗೆ ಪ್ರೀತಿಯಿಂದ ಹೇಳಿದನು. ಬ್ರಹ್ಮನು ತನ್ನ ಮಾನಸಪುತ್ರನಾದ ನಾರದ ಮಹರ್ಷಿಗಳಿಗೆ ಹೇಳಿದನು. ನಾರದರು ವ್ಯಾಸಮಹರ್ಷಿಗಳಿಗೆ ಹೇಳಿದರು. ವ್ಯಾಸರು ಈ ಪುಣ್ಯ ಕತೆಯನ್ನು ರಚಿಸಿ ಭಾಗವತೋತ್ತಮನೂ ತಮ್ಮ ಮಗನೂ ಆದ ಶುಕನಿಗೆ ಹೇಳಿದರು. ಆ ಮಹಾಮುನಿಯು ಮರಣಭೀತಿಯಿಂದ ತೊಳಲಾಡುತ್ತಿದ್ದ ಪರೀಕ್ಷಿತ ಮಹಾರಾಜನಿಗೆ ಏಳು ದಿನ ಪರ್ಯಂತ ಉಪದೇಶಿಸಿದನು. ಆ ಸಮಯದಲ್ಲಿ ಅದನ್ನು ಕೇಳಿದ ಸೂತ ಮಹರ್ಷಿಗಳು ನೈಮಿಶಾರಣ್ಯದಲ್ಲಿ ಸೇರಿದ ಋಷಿಗಳ ಸಭೆಯಲ್ಲಿ ವಿಸ್ತಾರವಾಗಿ ಹೇಳಿದರು - ಎಂಬ ರೀತಿಯಲ್ಲಿ ವಿನ್ಯಾಸಗೊಳಿಸಲಾಗಿದೆ.



ಭಾಗವತಕಾರನು ತಾನು ರಚಿಸಲಿರುವ ಗ್ರಂಥದಲ್ಲಿ ಯಾವ ವಸ್ತುವನ್ನು - ಹೇಗೆ ಬಳಸಿಕೊಳ್ಳಬೇಕು ಎಂಬ ಖಚಿತವಾದ ಪೂರ್ವಯೋಜನೆಯನ್ನಿಟ್ಟುಕೊಂಡು ಮುಂದುವರಿದಂತೆ ಕಾಣುತ್ತದೆ. ಮೊದಲ ಸ್ಕಂಧದಲ್ಲಿ( ಕಥೆಯ ಆವರಣ ರೂಪದಲ್ಲಿ ಬರುವ ಕೆಲವು ಪಾತ್ರಗಳ ಸಂವಾದದಲ್ಲಿ) ಈ ಯೋಜನೆಯ ಸ್ವರೂಪವನ್ನು ಓದುಗರಿಗೂ ತಿಳಿಯುವಂತೆ ವಿವರಿಸಿದ್ದಾನೆ. ಆರಂಭದಲ್ಲಿ ಶೌನಕಾದಿ ಋಷಿಗಳು - ಸೂತಪುರಾಣಿಕರನ್ನು ಕೇಳಿದ ಈ ಕೆಳಗಿನ ಆರು ಪ್ರಶ್ನೆಗಳು ಭಾಗವತದ ಪ್ರಣಾಳಿಕೆಯನ್ನು ಪರಿಚಯಿಸುತ್ತವೆ.

೧. ಜೀವಿಗಳ ಆತ್ಮೋದ್ಧಾರ ಹೇಗೆ ಮತ್ತು ಅವರ ಶ್ರೇಯಸ್ಸಾಧಾನ ಯಾವುದು?

೨. ಅಂತರ್ಯಾಮಿಯ ತೃಪ್ತಿ ಹೇಗೆ?

ಈ ಎರಡು ಪ್ರಶ್ನೆಗಳು ಭಾಗವತದ ಕೇಂದ್ರ ಕಾಳಜಿಯಾವುದೆಂಬುದನ್ನು ತಿಳಿಸುತ್ತವೆ.

೩. ಕೃಷ್ಣಾವತಾರದ ಉದ್ದೇಶವೇನು?

೪. ಕೃಷ್ಣನು ತೋರಿದ ಲೀಲೆಗಳು - ಮಹಿಮೆಗಳು ಯಾವುವು?

೫. ಶ್ರೀಹರಿಯ ಇತರ ಅವತಾರಗಳಾವುವು?

೬. ಕೃಷ್ಣಾವತಾರ ಮುಗಿದ ನಂತರ ಧರ್ಮ ರಕ್ಷಣೆಯ ಬಗೆ ಹೇಗೆ?

-ಎಂಬ ಉಳಿದ ನಾಲ್ಕು ಪ್ರಶ್ನೆಗಳು ಭಾಗವತದಲ್ಲಿ ಯಾವ ಕಥೆಗಳು ಇರಬೇಕೆಂಬುದನ್ನು ನಿರ್ಧರಿಸಿವೆ.

'ಕಲಿಯುಗದ ಜನರು ಸಾಮಾನ್ಯವಾಗಿ (ಇತರ ಯುಗಗಳಿಗೆ ಹೋಲಿಸಿದರೆ) ಅಲ್ಪಾಯುಷಿಗಳು, ಮಂದಬುದ್ಧಿಯವರು, ಅವರಲ್ಲಿ ಸಂಪತ್ತು ಕಡಿಮೆ - ಕಷ್ಟಗಳು ಹೆಚ್ಚು'(ಭಾಗವತ : ೧-೧-೧೦). ಈ ಎಲ್ಲ ಕೋಟಲೆಗಳ ಮಧ್ಯೆ ಅವರಿಗೆ ಅನೇಕ ಗ್ರಂಥಗಳನ್ನು ನೇರವಾಗಿ ಓದಿ ತಿಳಿಯಲು ಅವಕಾಶವಿರುವುದಿಲ್ಲ. ಈ ಸಮಸ್ಯೆಯನ್ನು ಗಮನದಲ್ಲಿಟ್ಟುಕೊಂಡು ಭಾಗವತಕಾರನು 'ಸರ್ವವೇದೇತಿಹಾಸಗಳ ಸಾರಭಾಗಗಳನ್ನು ಆರಿಸಿತಂದು'(ಭಾಗವತ ೧-೧-೪೧, ೪೨) ತನ್ನ ಈ ಒಂದೇ ಗ್ರಂಥದಲ್ಲಿ ಸಂಯೋಜಿಸಿದ್ದಾನೆ. ಪ್ರಭು ಸಮ್ಮಿತೆಯಾದ ವೇದೋಪನಿಷತ್ತುಗಳ ತಾತ್ವಿಕ ವಿಚಾರಗಳನ್ನೂ, ಮಿತ್ರಸಮ್ಮಿತೆಯಾದ ಪುರಾಣ ಕಥೆಗಳನ್ನೂ, ಕಾಂತಾಸಮ್ಮಿತೆಯಾದ ಕಾವ್ಯರೂಪದಲ್ಲಿ ಹೇಳುವ ಪ್ರಯತ್ನ ಮಾಡಿದ್ದಾನೆ.

"ಮಹಾಭಾರತವು ಭಗವಂತನ ಗುಣ ಪ್ರಕಾಶಕ್ಕಾಗಿ ರಚಿತವಾದರೂ ವಿಷಯಾಸಕ್ತರಾದ ಜನರಿಗೆ ಮಹಾಭಾರತದಲ್ಲಿ ಇರುವ ಭಗವದ್ಗುಣಗಳು ನೇರವಾಗಿ ಅರ್ಥವಾಗುವಂತಿಲ್ಲ." - (ಭಾಗವತ: ೩-೫-೧೨)

"ಆದ್ದರಿಂದ ಮಧುಕರವು ಪುಷ್ಪಗಳಿಂದ ಸಾರವನ್ನು ಮಾತ್ರ ಎತ್ತಿ ತರುವಂತೆ, ನೀವೂ ಕೇವಲ ಹರಿಕಥಾ ಸಾರವನ್ನು ಎತ್ತಿ ತಂದು ನಿರೂಪಿಸಬೇಕು" (ಭಾ : ೩.೫.೧೫) ಎಂಬ ವಿದುರನ ಕೋರಿಕೆಯಲ್ಲಿ; "ಧರ್ಮರಕ್ಷಣೆಗಾಗಿ ಭಗವಂತನ ಲೀಲೆಗಳನ್ನು ಸರಳ ನೇರ(ಸಮಾಧಿ ಭಾಷೆ) ಭಾಷೆಯಲ್ಲಿ ನಿರೂಪಿಸ

ಬೇಕು''(ಭಾ: ೧.೫.೧೩) ಎಂಬ ನಾರದರ ಕೋರಿಕೆಯಲ್ಲೂ ಭಾಗವತದ ನಿರೂಪಣಾ ಕ್ರಮವನ್ನು ಪರಿಚಯಿಸಿಕೊಟ್ಟಂತೆ ಕಾಣುತ್ತದೆ.

ಶ್ರೀಮದ್ಭಾಗವತವು ವೈಷ್ಣವ ತಾತ್ವಿಕ ವಿಶ್ವಕೋಶದಂತಿದೆ. ವೇದೋಪನಿಷತ್ತುಗಳು, ಬ್ರಹ್ಮಸೂತ್ರಗಳು, ಮಹಾಭಾರತ, ಪಂಚರಾತ್ರಾದಿ ಆಗಮಗಳು ಹಾಗೂ ಇತರ ಪುರಾಣ ಗ್ರಂಥಗಳ ಸಾರವೆಲ್ಲ ಇದರಲ್ಲಿ ಘನೀಭವಿಸಿದೆ.[2] ಹಲವು ಮನ್ವಂತರಗಳ ಕಾಲಘಟ್ಟದ ಸುವಿಸ್ತೃತವಾದ ಕಥಾಶರೀರ ಹೊಂದಿದ ಈ ಮಹಾಕಾವ್ಯದಲ್ಲಿ ಅನೇಕ ದೇವರ್ಷಿ, ಬ್ರಹ್ಮರ್ಷಿ, ರಾಜರ್ಷಿಗಳಲ್ಲದೆ ನರ ಅಸುರ, ಖಗ ಮೃಗ ಹಾಗೂ ಸರೀಸೃಪಗಳ ರೂಪದ ವಿವಿಧ ಪಾತ್ರಗಳು ಚಿತ್ರಿತವಾಗಿವೆ. ಲೋಕ ಲೋಕಾಂತರಗಳ ವರ್ಣನೆ ಹಾಗೂ ಮೋಕ್ಷಸಾಧನೋಪಾಯಗಳ ಪರಿಣಾಮಕಾರೀ ಉಪದೇಶಗಳೂ ಅಳವಟ್ಟಿವೆ.

"The Bhagavata Purana enjoys its privileged position in the Indian mind as a gospel of Bhakti is the feeling of developing adoration in the devotee's heart for his god. The Bhagavata preaches the highest form of Bhakti which does not seek for the fulfilment of any desire and is unconditional. Being the Bhasya of the Bhagavadgita the Bhagavata purana elaborates the doctrine of self surrender, expressed in the Gita as 'Giving up dharmas surrendered to mealone, I shall release you from all sin...'. The Bhagavata illustrates the doctrine of saranagati or self-Surrender through the lives of bhaktas like Ambarisha, pralhada, uddhava and Parikshit"(Rukmani T.S., 1970:133).

ಮೇಲಿನ ಮಾತುಗಳನ್ನು ಒಟ್ಟಿಗೆ ನೋಡಿದರೆ ಭಾಗವತವು ವೈದಿಕ ಪರಂಪರೆಯ ಸರ್ವಗ್ರಂಥಗಳನ್ನು ಆಕರವನ್ನಾಗಿಟ್ಟುಕೊಂಡು ಅಲ್ಲಿಯ ವಸ್ತು-ಆಶಯಗಳನ್ನು ಋಣ ಮತ್ತು ವೃದ್ಧಿಯ ಕ್ರಮದಲ್ಲಿ ವಿಕಾಸಗೊಳಿಸಿ; ಸಂಯೋಜಿತ ರೂಪದಲ್ಲಿ ರಚಿಸಿದ ಪುರಾಣ ಕೃತಿಯಾಗಿದೆ ಎಂದು ಹೇಳಬಹುದು.

## ೩.೪. ರೂಪ ವಿನ್ಯಾಸ

ಇಲ್ಲಿ ಸಂಸ್ಕೃತ ಭಾಗವತ ಶಿಲ್ಪದ ರೂಪವಿನ್ಯಾಸವನ್ನು ಸಂಕ್ಷಿಪ್ತವಾಗಿ ಪರಿಚಯಿಸಿಕೊಳ್ಳಬಹುದು. ಮೂಲದ ಆಕೃತಿಯನ್ನು ಚರ್ಚಿಸಲು ಅನುಕೂಲವಾಗುವಂತೆ ಕೆಲವು ಸರಳ ಭಾಗಗಳನ್ನೂ ಪರಿಶೀಲಿಸ ಬಹುದು. ಛಂದೋ ಪ್ರಕಾರದ ದೃಷ್ಟಿಯಿಂದ ಹೇಳುವುದಾದರೆ ಭಾಗವತವು ಇತರ ಸಂಸ್ಕೃತ ಪುರಾಣ ಗಳಂತೆಯೇ ಅನುಷ್ಟುಪ್ ಶ್ಲೋಕಪ್ರಧಾನವಾಗಿದೆ. ಅಲ್ಲಲ್ಲಿ ವಿವಿಧ ಸಂಸ್ಕೃತ ವೃತ್ತಗಳನ್ನು ಬಳಸಿ ಕೊಳ್ಳಲಾಗಿದೆ. ಪಂಚಮಸ್ಕಂಧವು ಗಂಭೀರ ನಡೆಯ ಗದ್ಯ ರೂಪದಲ್ಲಿರುವುದು ವಿಶೇಷ ಸಂಗತಿ. ಉದಾ: ನಾಭಿರಾಜನ ಯಜ್ಞದಲ್ಲಿ ಆವಿರ್ಭವಿಸಿದ ಭಗವಂತಹ ಸ್ತೋತ್ರ ರೂಪವಾದ ಗದ್ಯ ಹೀಗಿದೆ[3]:



ಅಥ ಕಥಂಚಿತ್ ಸ್ಖಲನ ಕ್ಷುತ್ ಪತನ ಜೃಂಭಣ ದುರವಸ್ಥಾನಾದಿಷು ವಿವಶಾನಾಂ ನಃ ಶ್ರೀಮಚ್ಚರಣಾರವಿಂದಸ್ಮರಣಾಯ ಜ್ವರ ಮರಣದಶಾಯಾಮಪಿ ಸಕಲ ಕಶ್ಮಲ ನಿರಸನಾನಿ ತವ ಗುಣ ಕೃತನಾಮಧೇಯಾನಿ ವಚನ ಗೋಚರಾಣಿ ಭವಂತು (ಭಾಗವತ : ೫-೩-೧೩)

(ಬೀಳುವುದು, ಜಾರುವುದು, ಹಸಿವು, ನೀರಡಿಕೆ, ಆಕಳಿಕೆ ಮೊದಲಾದ ಕಾಯಕ್ಲೇಶಗಳ ಕಾರಣ ದಿಂದಲಾಗಲೀ; ಜ್ವರ, ಮರಣ ಕಷ್ಟಗಳ ಸಂದರ್ಭಗಳಲ್ಲಾಗಲೀ; ನಿನ್ನ ಶ್ರೀ ಚರಣಗಳ ಸ್ಮರಣೆಯು ಒದಗಲಿ; ದುರಿತ ನಿವಾರಕನಾದ ನಿನ್ನ ಪುಣ್ಯನಾಮಗಳು ನಮ್ಮ ನಾಲಿಗೆಗೆ ಒದಗಿ ಬರುವಂತಾಗಲಿ) ಈ ಗದ್ಯಭಾಗದಲ್ಲಿ ಸರಳ ನಡಿಗೆಯನ್ನು ಗಮನಿಸಬಹುದು.

ಭಾಗವತದ ಶಮಸ್ಕಂಧದ ವೇಣುಗೀತೆ ಮತ್ತು ಗೋಪಿಗೀತೆಗಳು ವಸ್ತುವಿನ ಭಾವಕ್ಕೆ ಅನುಗುಣವಾದ ವಿಭಿನ್ನ ಲಯವನ್ನು ಹೊಂದಿರುವುದರಿಂದ ಭಾಗವತ ಪ್ರಿಯರನ್ನು ಆಕರ್ಷಿಸಿವೆ. ಈ ಪುರಾಣದ ಗದ್ಯ-ಪದ್ಯಗಳನ್ನು ಆಯಾ ಛಂದಸ್ಸಿನಲ್ಲೇ ಸ್ಪಷ್ಟವಾಗಿ, ರಾಗವಾಗಿ ಪಾರಾಯಣ ಮಾಡುವುದನ್ನು ಕೇಳುವುದೇ ಒಂದು ಸೊಗಸು.[೯]

ಈ ಪುರಾಣದಲ್ಲಿ ಅನೇಕ ಸುಂದರ ಉಪಾಖ್ಯಾನಗಳಿವೆ. ಕೆಲವು ಕಥಾನಕಗಳಲ್ಲಿ ಮಾನವನ ವರ್ತನೆಯ ಸೂಕ್ಷ್ಮಗಳನ್ನು ಧ್ವನಿಸಬಲ್ಲ ಉತ್ತಮ ಕಾವ್ಯಗುಣವನ್ನು ಕಾಣುತ್ತೇವೆ. ಇದಕ್ಕೆ ಧ್ರುವಚರಿತ್ರೆ ಹಾಗೂ ಚಿತ್ರಕೇತು ರಾಜನ ಪುತ್ರವಿಯೋಗ ಪ್ರಸಂಗಗಳನ್ನು ಉದಾಹರಿಸಬಹುದು. ಪ್ರೌಢವಾದ, ಅಧಿಭೂತ, ಅಧಿದೈವ, ಆಧ್ಯಾತ್ಮಿಕ ವಿಷಯಗಳನ್ನೂ; ಭಕ್ತಿ, ಧ್ಯಾನ ಯೋಗಗಳಂತಹ ತಾತ್ವಿಕ ವಿಚಾರ ಗಳನ್ನೂ ಬೋಧಿಸುವ ಉಪದೇಶಗಳಿವೆ. ಕಪಿಲಗೀತೆ, ಋಷಭಗೀತೆ, ರುದ್ರಗೀತೆ, ಶ್ರುತಿಗೀತೆ, ಅವಧೂತಗೀತೆ, ಬ್ರಹ್ಮ-ನಾರದರ ಸಂವಾದ, ಜಾಯಂತೇಯ ನಿಮಿರಾಜ ಸಂವಾದ, ದೈತ್ಯ ಬಾಲಕರಿಗೆ ಪ್ರಹ್ಲಾದೋಪದೇಶ, ರಹೂಗಣಮಹಾರಾಜನಿಗೆ ಜಡಭರತನ ಉಪದೇಶ -ಈ ಭಾಗಗಳು ತತ್ವಜ್ಞಾನ ಪ್ರಿಯರಿಗೆ ರಸಘಟ್ಟಗಳೆನಿಸಿವೆ. ಉದಾ : ದೈತ್ಯಬಾಲಕರಿಗೆ ಪ್ರಹ್ಲಾದ ಮಾಡಿದ ಉಪದೇಶ ಹೀಗಿದೆ :

ಕಥಂ ಪ್ರಿಯಾಯಾ ಅನುಕಂಪಿತಾಯಾಃ ಸಂಗಂ ರಹಸ್ಯಂ ರುಚಿರಾಂಶ್ಚ ಮಂತ್ರಾನ್ |
ಸುಹೃತ್ಸುತ ಸ್ನೇಹವಶಃ ಶಿಶೂನಾಂ ಕಲಾಕ್ಷರಾಣಾಮನುರಕ್ತಚಿತ್ತಃ ||

(ಭಾಗವತ : ೭-೬-೧೧)

(ಮಿತ್ರ ಪುತ್ರರ ಸ್ನೇಹಕ್ಕೆ ವಶನಾಗಿ, ಶಿಶುಗಳ ತೊದಲ್ನುಡಿಗಳಿಂದ ಸೆಳೆಯಲ್ಪಟ್ಟ ಚಿತ್ತ ಉಳ್ಳವನು, ಅಂತಃಕರಣಪಾತ್ರಳೂ ಪ್ರಿಯಳೂ ಆದ ತನ್ನ ಪತ್ನಿಯ ಏಕಾಂತ ಸುಖ-ಸಲ್ಲಾಪಗಳನ್ನೂ, ಸಮಾನ ಐಶ್ವರ್ಯವಂತರ ಮನೆಗೆ ಲಗ್ನಮಾಡಿಕೊಟ್ಟ ಪ್ರೀತಿ ಪಾತ್ರರಾದ ಹೆಣ್ಣುಮಕ್ಕಳನ್ನೂ, ಸಹೋದರ ಸಹೋದರಿಯರನ್ನೂ ಮುಪ್ಪಿನಿಂದ ಬಾಗಿದ ತಂದೆ-ತಾಯಿಗಳನ್ನೂ, ಸುಖಸಾಮಗ್ರಿಗಳಿಂದ ಕೂಡಿ ಮನೋಹರವಾದ ತನ್ನ ಮನೆಗಳನ್ನೂ, ಕುಲವೃತ್ತಿಗೆ ಅನುಕೂಲವಾದ ಭೂಮಿ ಮೊದಲಾದವುಗಳನ್ನೂ,

ಪಶು-ಭೃತ್ಯ ವರ್ಗವನ್ನೂ ಮರೆಯಲು ಸಾಧ್ಯವಿಲ್ಲದೇ ಜನನೇಂದ್ರಿಯ ರಸನೇಂದ್ರಿಯ ವ್ಯಾಪಾರಗಳೇ ಪರಮ ಪುರುಷಾರ್ಥವೆಂಬ ಅನರ್ಥಕರ ಮೋಹಕ್ಕೆ ವಶನಾಗಿ ಲೋಭದಿಂದ ಅತೃಪ್ತವಾದ ಮನೋರಥ ಉಳ್ಳವನಾಗಿ ಅವುಗಳ ಪ್ರಾಪ್ತಿಗೆ ಕೀಟದಂತೆ ಕಾಮ್ಯ ಕರ್ಮಾಸಕ್ತನಾಗುವನಲ್ಲದೆ ವಿರಕ್ತನಾಗುವನೇ? ಎಂದಿಗೂ ಸಾಧ್ಯವಿಲ್ಲ.)

ಇಂತಹ ವೈರಾಗ್ಯೋಪದೇಶವನ್ನು ನಾವು ಇಷ್ಟಪಡಬಹುದು ಅಥವ ಇಷ್ಟಪಡದಿರಬಹುದು. ಆದರೆ ವಿಷಯದ ವಸ್ತುಸ್ಥಿತಿಯನ್ನು ಅಲ್ಲಗಳೆಯಲು ಸಾಧ್ಯವಾಗುವುದಿಲ್ಲ.

ಭಾಗವತ ಪುರಾಣದ ಮಹತ್ವವಿರುವುದು ಇಲ್ಲಿಯ ಹೃದಯಂಗಮವಾದ ಸ್ತೋತ್ರಗಳಲ್ಲಿ. ಭಗವಂತನನ್ನು ಕುರಿತ ಕುಂತೀಸ್ತುತಿ, ಭೀಷ್ಮಸ್ತುತಿ, ಧ್ರುವಕೃತ ಸ್ತುತಿ, ಗಜೇಂದ್ರಸ್ತುತಿ, ಪ್ರಹ್ಲಾದ ಕೃತ ನಾರಸಿಂಹ ಸ್ತುತಿ, ಬ್ರಹ್ಮಾದಿದೇವಕೃತ ಗರ್ಭಸ್ತುತಿ, ಹಂಸಗುಹ್ಯಸ್ತುತಿ, ನಾರಾಯಣವರ್ಮ ಮುಂತಾದ ಸುಂದರ ಸ್ತೋತ್ರಗಳು ಭಕ್ತಿ-ಭಾವ ಭರಿತವಾಗಿವೆ. ಉದಾ : ಕುಂತಿಯು ಮಾಡಿದ ಕೃಷ್ಣಸ್ತುತಿ :

ಕೃಷ್ಣಾಯ ವಾಸುದೇವಾಯ ದೇವಕೀ ನಂದನಾಯಚ |
ನಂದಗೋಪಕುಮಾರಾಯ ಗೋವಿಂದಾಯ ನಮೋ ನಮಃ ||

ನಮಃ ಪಂಕಜನಾಭಾಯ ನಮಃ ಪಂಕಜಮಾಲಿನೇ |
ನಮಃ ಪಂಕಜನೇತ್ರಾಯ ನಮಸ್ತೇ ಪಂಕಜಾಂಘ್ರಯೇ ||

ಯಥಾ ಹೃಷೀಕೇಶ ಖಲೇನ ದೇವಕೀ ಕಂಸೇನ ರುದ್ಧಾ ಸುಚಿರಂ ಶುಚಾರ್ಪಿತಾ |
ವಿಮೋಚಿತಾಹಂ ಚ ಸಹಾತ್ಮಜಾ ವಿಭೋ ತ್ವಯೈವ ನಾಥೇನ ಮುಹುರ್ವಿಪದ್ಗಣಾತ್ ||

ವಿಷಾತ್ಮಹಾಗ್ನೇಃ ಪುರುಷಾದದರ್ಶನಾದಸತ್ಸಭಾಯಾ ವನವಾಸ ಕೃಚ್ಛ್ರತಃ |
ಮೃಧೇ ಮೃಧೇನೇಕ ಮಹಾರಥಾಸ್ತ್ರತೋ ದ್ರೌಣ್ಯಸ್ತ್ರತಶ್ಚಾಸ್ಮ ಹರೇಭಿರಕ್ಷಿತಾಃ ||

(ಭಾಗವತ:೧-೮-೨೪-೨೭)

(ಸುಂದರ ಮುಖಾರವಿಂದ ದರ್ಶನದಿಂದ ಭಕ್ತರನ್ನು ಆಕರ್ಷಿಸಿ ಅವರ ಅಜ್ಞಾನವನ್ನು ನಾಶಗೊಳಿಸುವವನೇ! ವಸುದೇವಪುತ್ರನೇ! ದೇವಕೀ ನಂದನನೇ! ನಂದಗೋಪನ ಕಷ್ಟವನ್ನು ಹೋಗಲಾಡಿಸಿದವನೇ! ವೇದವೇದ್ಯನಾದ ಶ್ರೀಕೃಷ್ಣನೇ! ಎಲೈ ಪದ್ಮನಾಭನೇ! ಕಮಲಮಾಲೆಯನ್ನು ಧರಿಸಿದವನೇ! ಕಮಲದಂತೆ ಕಣ್ಣುಳ್ಳವನೇ! ಕಮಲಚರಣನೇ! ನಿನಗೆ ಅನೇಕ ನಮಸ್ಕಾರಗಳು. ಇಂದ್ರಿಯ ಪ್ರೇರಕನಾದ ಭಗವಂತನೇ! ದುರಾತ್ಮನಾದ ಕಂಸನಿಂದ ಬಹುಕಾಲದವರೆಗೂ ಸೆರೆಗೊಳಿಸಲ್ಪಟ್ಟು, ದುಃಖ ಸಮುದ್ರದಲ್ಲಿ ಮುಳುಗಿದ್ದ ತಾಯಿಯಾದ ದೇವಕಿಯನ್ನು ಕಾಪಾಡಿದಂತೆಯೇ, ಹಗೆಗಳಿಟ್ಟ ವಿಷಾನ್ನದಿಂದಲೂ, ಅರಗಿನ ಮನೆಯ ಬೆಂಕಿಯಿಂದಲೂ, ಹಿಡಿಂಬನೇ ಮೊದಲಾದ ರಾಕ್ಷಸರಿಂದಲೂ, ಜೂಜುಗಾರರಾದ ಕೌರವರ ಸಭೆಯಿಂದಲೂ, ಅರಣ್ಯವಾಸದಲ್ಲುಂಟಾದ ಕಷ್ಟಗಳಿಂದಲೂ; ಪ್ರತಿಯುದ್ಧ

ದಲ್ಲಿಯೂ ಮಹಾಶೂರರು ಬಿಟ್ಟ ಅಸ್ತ್ರಗಳಿಂದಲೂ, ಕಡೆಗೆ ಅಶ್ವತ್ಥಾಮನಿಟ್ಟ ಬ್ರಹ್ಮಾಸ್ತ್ರದಿಂದಲೂ ಸಹ ನೀನು ನನ್ನನ್ನೂ, ನನ್ನ ಮಕ್ಕಳನ್ನೂ ಬಾರಿ ಬಾರಿಗೂ ಸಲಹಿದೆ.) ಎಂಬಲ್ಲಿ ಕುಂತಿಯ ಕೃತಜ್ಞತೆ ಮತ್ತು ಕೃಷ್ಣನ ಭಕ್ತ ರಕ್ಷಣ ದೀಕ್ಷೆಗಳು ಸಮರ್ಥವಾಗಿ ಪ್ರಕಟವಾಗಿವೆ. ಇಂದಿಗೂ ಶ್ರದ್ಧಾಳುಗಳು ಈ ಸ್ತೋತ್ರ ಗಳನ್ನು ನಿತ್ಯಪಾರಾಯಣ ಮಾಡುತ್ತಾರೆ.

ಭಾಗವತದ ದಶಮಸ್ಕಂಧದಲ್ಲಿ ಬರುವ ಗೋಪಿಗೀತೆ, ಭ್ರಮರಗೀತೆ ಹಾಗೂ ವೇಣುಗೀತೆಗಳ ವಿಶಿಷ್ಟಲಯ ಮತ್ತು ಭಾವ ಸಂಪತ್ತುಗಳು ಶ್ರೋತೃ ವೃಂದದ ಮೇಲೆ ಗಾಢವಾದ ಪರಿಣಾಮವನ್ನು ಬೀರಿವೆ.

**ಉದಾ : ಭಾಗವತ ವೇಣುಗೀತೆಯ ಒಂದು ಪದ್ಯ:**

ವೃಂದಶೋ ವ್ರಜ ವೃಷಾಮೃಗಗಾವೋ ವೇಣುವಾದ್ಯಹೃತ ಚೇತಸ ಏತ್ಯ |
ದಂತದಷ್ಟ ಕವಳಾ ಧೃತಕರ್ಣಾ ನಿದ್ರಿತಾ ಲಿಖಿತ ಚಿತ್ರಮಿವಾಸನ್ ||

(ಕೃಷ್ಣನು ವೇಣುನಾದವನ್ನು ಮಾಡಿದಾಗ ಆ ಇಂಪಾದ ಧ್ವನಿಯಿಂದ ಪರವಶವಾದ ವ್ರಜಪ್ರದೇಶದ ಎತ್ತುಗಳೂ, ಹಸುಗಳೂ, ಜಿಂಕೆಗಳೂ ಸಹ ಗುಂಪು ಗುಂಪಾಗಿ ನೆರೆದು, ಬಾಯಿಯಲ್ಲಿ ಅಗಿಯಲೆಂದು ಹಿಡಿದ ಹುಲ್ಲನ್ನು ಮೇಯದೆ, ಚಲಿಸದೆ, ಕಿವಿಗಳನ್ನು ನೆಟ್ಟಗೆ ಮಾಡಿಕೊಂಡು ನಿದ್ರೆ ಮಾಡುತ್ತಿವೆಯೋ ಅಥವಾ ಅವು ಚಿತ್ರದಲ್ಲಿ ಬರೆದ ಪ್ರಾಣಿಗಳೋ ಎಂಬಂತೆ ನಿಶ್ಚಲವಾಗಿ ನಿಂತುಬಿಡುತ್ತವೆ.)

ಇಷ್ಟಾದರೂ ಈ ಪುರಾಣಭಾಷೆ ಕೆಲವು ಕಡೆ ಪ್ರೌಢವಾಗಿದೆ. ತಾತ್ತ್ವಿಕ ನಿರೂಪಣೆಯು ಜಟಿಲವಾಗಿದೆ ಎಂಬುದನ್ನು ಮರೆಯುವಂತಿಲ್ಲ. ಈ ಹಿನ್ನಲೆಯಲ್ಲಿ "ಭಾಗವತವು ಅನೇಕ ತಾತ್ವಿಕ ವಿಷಯಗಳನ್ನು ಕೆಲವೆಡೆ ಅತಿ ಗಹನ ರೀತಿಯಲ್ಲಿ ಪ್ರತಿಪಾದಿಸುವುದಾದರೂ ಭಗವಂತನ ಮತ್ತು ಭಗವದ್ಭಕ್ತರ ಅತಿರಮಣೀಯವಾದ ಕಥಾನಕಗಳನ್ನೊಳಗೊಂಡು ಪಾಮರ ಪಂಡಿತರೆಲ್ಲರನ್ನೂ ಭಗವಂತನೆಡೆಗೆ ಸೆಳೆಯುವ, ಭಕ್ತಿರಸವನ್ನುಣಿಸುವ ಮಹಾಕೃತಿಯಾಗಿದೆ" (ಪ್ರಹ್ಲಾದಾಚಾರ್ಯ ಡಿ., ೧೯೮೮:೨೩) ಎಂಬ ಅಭಿಪ್ರಾಯ ವನ್ನು ಒಪ್ಪಬೇಕಾಗುತ್ತದೆ.

## ೩.೫. ಜೀವನದೃಷ್ಟಿ

ಭಾಗವತವು ಜಟಿಲ ತಾತ್ವಿಕ ಚರ್ಚೆಗಳು ಮತ್ತು ಬಹುಮುಖಿನೆಲೆಯ ವಸ್ತುವಿನ್ಯಾಸವನ್ನು ಹೊಂದಿದ ಸಂಕೀರ್ಣ ಪುರಾಣಕೃತಿಯಾಗಿದ್ದರೂ, ಅದರ ಉದಾತ್ತ ಜೀವನದೃಷ್ಟಿಯ ಕಾರಣದಿಂದಾಗಿ ಅಗಾಧ ಜನಪ್ರಿಯತೆಯನ್ನು ಗಳಿಸಿದೆ. ವೈದಿಕ-ವೈಷ್ಣವ ಸಂಸ್ಕೃತಿಯ ಎಲ್ಲ ಉತ್ತಮಾಂಶಗಳನ್ನು ತನ್ನಲ್ಲಿ ಗರ್ಭೀಕರಿಸಿಕೊಂಡ ಈ ಕೃತಿಯು ಬದುಕನ್ನು 'ಲೌಕಿಕ'-'ವೈದಿಕ' ಎಂದು ಎರಡು ಭಾಗಗಳನ್ನಾಗಿ ಸೀಳಿ ನೋಡದೆ ಒಂದು 'ಇಡಿ'ಯನ್ನಾಗಿ ಪರಿಭಾವಿಸುವ ಮೂಲಕ 'ಕವಲಿಲ್ಲದ ಜೀವನದೃಷ್ಟಿ'ಯನ್ನು ಪ್ರತಿಪಾದಿಸಿದೆ.

ಮಧ್ಯಕಾಲೀನ ಐತಿಹಾಸಿಕ ಜನ ಜೀವನವನ್ನು ಗಾಢವಾಗಿ ಪ್ರಭಾವಿಸಿದ ಭಕ್ತಿಪಂಥದ ಎಲ್ಲ ಸುಧಾರಣಾವಾದಗಳಿಗೆ ಮೂಲಸ್ರೋತವೆನಿಸುವ ಭಾಗವತವು ರೂಪಿಸಿದ ಜೀವನದೃಷ್ಟಿಯ ಸ್ವರೂಪವನ್ನು ಇಲ್ಲಿ ಗಮನಿಸಬಹುದು.

ಜಗತ್ತಿನ ಸರ್ವಕ್ರಿಯೆಗಳಿಗೆ ಕಾರಣನಾದ ಭಗವಂತನನ್ನು ಜ್ಞಾನ-ಭಕ್ತಿ-ವೈರಾಗ್ಯ ಉಪಾಸನೆಗಳೆಂಬ ಸಾಧನಗಳ ಮೂಲಕ ಒಳಿಸಿಕೊಳ್ಳಬೇಕು. ಈ ಮಹತ್ಕಾರ್ಯಕ್ಕಾಗಿ ಭಗವಂತನ ಮಹಿಮೆಗಳ ಶ್ರವಣ (ಕೇಳುವಿಕೆ), ಕೀರ್ತನ(ಹೇಳುವಿಕೆ), ಸ್ಮರಣ(ಮನನಮಾಡುವಿಕೆ) ಅತ್ಯಗತ್ಯ. ಸಾಧನೆಯಲ್ಲಿ ಮುಂದುವರೆಯುವ ಚಿಂತಕರು ಧ್ಯಾನ, ಯೋಗ, ನಿವೃತ್ತಿಕರ್ಮ ಹಾಗೂ ಅವಧೂತ ಸ್ಥಿತಿಗಳಂತಹ ತ್ಯಾಗದ ಪರಮಾದರ್ಶವನ್ನು ಅನುಸರಿಸಬಹುದು. ಆದರೆ ಸನ್ಯಾಸ ಅಥವಾ ಏಕಾಂತ ಭಕ್ತಿಯ ಚರಮಹಂತವನ್ನು ತಲುಪಲು ಸಾಧ್ಯವಿಲ್ಲದವರು ನಿರಾಶರಾಗಬೇಕಿಲ್ಲ. ಜೀವನದ ಜವಾಬ್ದಾರಿಗಳು ಮುಗಿಯುವವರೆಗೆ ಗೃಹಸ್ಥಾಶ್ರಮದಲ್ಲಿ ಇದ್ದು ಭಗವಂತನನ್ನು ಒಲಿಸಬಹುದು. 'ಗೃಹಸ್ಥಧರ್ಮದಲ್ಲೇ ಮೋಕ್ಷ ಸಂಪಾದನೆ ಮಾಡಿಕೊಳ್ಳಲು ಸಾಧ್ಯವಿದೆ ಎಂಬ ಭಾಗವತ ಪುರಾಣದ ನಿಲುವು; ಸಂಸಾರಾವಸ್ಥೆಯಲ್ಲಿದ್ದು ತಮಗೆ ಉದ್ಧಾರವಿಲ್ಲವೆಂದು ದಿಗಿಲುಗೊಂಡ ಸಾತ್ವಿಕರಿಗೆ ಅಭಯವನ್ನು ನೀಡುವಂತಿದೆ.

ಬದುಕಿನಲ್ಲಿ ಒದಗಬಹುದಾದ ಬಡತನ, ಮುಪ್ಪು, ರೋಗ, ಸೋಲು, ಸಾವು ಮುಂತಾದ ಆಘಾತಗಳನ್ನು ಸಹಿಸಿಕೊಂಡು ಸ್ಥೈರ್ಯದಿಂದ ಜೀವನವನ್ನು ಮುಂದುವರಿಸಲು ಉಪಯುಕ್ತವಾಗುವಂತಹ ಮಹತ್ವದ ಜೀವನಮೌಲ್ಯಗಳನ್ನು 'ಭಾಗವದ ಧರ್ಮ'ನೆಬ ಹೆಸರಿನಲ್ಲಿ ಪ್ರತಿಪಾದಿಸಿದೆ. ಇತರ ಪುರಾಣಗಳಂತೆ ಸ್ವರ್ಗ ಮೋಕ್ಷಗಳ ಆಕರ್ಷಣೆಯನ್ನೇ ಪ್ರಧಾನವನ್ನಾಗಿ ಮಾಡದೆ ಮಾನವನು ಇಹದ ಬದುಕಿನಲ್ಲೇ ಎಲ್ಲ ರೀತಿಯ ಶಾಂತಿ-ತೃಪ್ತಿಗಳನ್ನು ಪಡೆಯಲು ಸಾಧ್ಯವಾಗುವಂತಹ ಮನಸ್ಥಿತಿಯನ್ನು ರೂಢಿಸಿಕೊಳ್ಳಲು ಈ ಭಾಗವತ ಧರ್ಮಗಳು ನೆರವಾಗುತ್ತವೆ. ಇವುಗಳ ಅನುಷ್ಠಾನದಿಂದ ಮಾನವನು 'ಜೀವನ್ಮುಕ್ತ'ನಾಗಲು, ಮೋಕ್ಷಕ್ಕೆ ಬಂಧಕವಾಗದಂತೆ ಸಂಸಾರ ನಡೆಸಲು ಸಾಧ್ಯವಾಗುತ್ತದೆ. ಇವುಗಳನ್ನು ಬಾಲ್ಯದಿಂದಲೇ ಆಚರಿಸಲು ಪ್ರಾರಂಭಿಸಬೇಕು ಎಂಬ ಸೂಚನೆಯೂ ಇದೆ.

ಜನ್ಮಾಂತರವನ್ನು ಒಪ್ಪುವ ಭಾಗವತವು; ಭಕ್ತನಾದ ಸಾತ್ವಿಕ ಚೇತನನು ಪ್ರಾಣಿ, ಪಕ್ಷಿ, ಸರೀಸೃಪ. ದೈತ್ಯ, ದಾನವ, ಮಾನವ, ಪತಿತ, ಶಪಿತ ಮುಂತಾದ ಯಾವುದೇ ಹೀನಾವಸ್ಥೆಯಲ್ಲಿದ್ದರೂ ಭಗವಂತನ ಕೃಪೆಯನ್ನು ಪಡೆಯಲು ಸಾಧ್ಯವಿದೆ ಎಂದು ತಿಳಿಸುತ್ತದೆ. ಗಜೇಂದ್ರನಾದ ಇಂದ್ರದ್ಯುಮ್ನ, ಮೊಸಳೆಯಾಗಿದ್ದ 'ಹೂಹೂ' ಎಂಬ ಗಂಧರ್ವ, ಓತಿಕೇತದ ರೂಪದಲ್ಲಿದ್ದ ನೃಗಚಕ್ರವರ್ತಿ- ಇವರು ಪ್ರಾಣಿ ಶರೀರದಲ್ಲಿದ್ದರು. ಗರುಡ, ಜಟಾಯುಗಳು ಪಕ್ಷಿಗಳಾಗಿದ್ದವು. ಕಾಳೀಯ, ನಂದಗೋಪನನ್ನು ಅಜಗರ ರೂಪದಿಂದ ಹಿಡಿದ ಗಂಧರ್ವ, ನಾಗಪತ್ನಿಯರು ಸರೀಸೃಪರಾಗಿದ್ದರು. ಪ್ರಹ್ಲಾದ, ಬಲಿ ಮತ್ತು ಮರುದ್ಗಣಗಳು ದೈತ್ಯ

ಕುಲದಲ್ಲಿದ್ದರೂ ಭಾಗವತೋತ್ತಮರೆನಿಸಿದರು. ವಿಭೀಷಣನು ರಾಕ್ಷಸ ಕುಲದಲ್ಲಿ ಜನಿಸಿದವನು. ಅಜಾಮಿಳ, ಪಿಂಗಳಾ ಎಂಬ ಹೆಸರಿನ ವೇಶ್ಯಾಸ್ತ್ರೀ ಮೊದಲಾದವರು ಪತಿತರು. ವೃತ್ರಾಸುರನಾದ ಚಿತ್ರಕೇತು ಮಹಾರಾಜ, ಮೃತಸರ್ಪವನ್ನು ಋಷಿಯ ಕೊರಳಿಗೆ ಹಾಕಿದ ಪರೀಕ್ಷಿತ ಮಹಾರಾಜ, ಜಯ-ವಿಜಯರು ಮುಂತಾದವರು ಶಪಿತರು. ನಾರದನು ಪೂರ್ವಜನ್ಮದಲ್ಲಿ ಬಾಲಕನಾಗಿದ್ದಾಗ ಅದು ಶೂದ್ರಜನ್ಮ. ದಾಸೀ ಪುತ್ರನಾದ ವಿದುರರು ಶೂದ್ರರೆನಿಸಿದವರು. ಈ ಎಲ್ಲರನ್ನು ಕರುಣಾಳುವಾದ ಶ್ರೀಹರಿಯು ಅವರ ಭಕ್ತಿಗೆ ಒಲಿದು ಉದ್ಧರಿಸಿದನು. ಊರ್ವಶಿಯು ಪೂತನಿಯ ದೇಹದಲ್ಲಿದ್ದವಳು, ಭೃಗು ಋಷಿಗಳು ಕಂಸನ ದೇಹದಲ್ಲಿದ್ದವರು. ಇಂತಹ ದುಷ್ಟ ಸಹವಾಸ ಮಾಡಿದವರಿಗೂ ಪ್ರಭುವು ಸದ್ಗತಿ ನೀಡಿದನು. ಇವರಲ್ಲದೆ 'ಕಿರಾತ, ಹೂಣ, ಆಂಧ್ರ, ಪುಲಿಂದ, ಪುಲ್ಕಸ, ಆಭೀರ, ಕಂಕ, ಯವನ, ಶಕ ಮೊದಲಾದ ಯಾವುದೇ ಇತರ ಜಾತಿಗಳಲ್ಲಿದ್ದರೂ ಭಗವದ್ಭಕ್ತಿಯಿಂದ ಭಗವಂತನನ್ನು ಒಲಿಸಲು ಅರ್ಹರು' ಎಂಬ ಸರ್ವೋದ್ಧಾರದ ವಿಶಾಲ ಮನೋಭಾವವು ಭಾಗವತ ಪುರಾಣದ ಹೆಗ್ಗಳಿಕೆಗೆ ಕಾರಣವಾಗಿದೆ.

"ಭಾಗವತ ಧರ್ಮದ ವಿಶ್ವಬಂಧುತ್ವವನ್ನು ಹಾಗೂ ವಿಶಾಲ ಹೃದಯತೆಯನ್ನು ಕುರಿತು ಭಾಗವತ ಮಹಾಪುರಾಣದಲ್ಲಿ ಹೀಗೆ ಹೇಳಿದ್ದಾರೆ. ವರ್ಣಾಶ್ರಮ ಬಾಹಿರರೆನಿಸಿಕೊಂಡ ಕಿರಾತರು, ಹೂಣರು, ಶಕರು, ಭಾರತೇತರ ಜನಾಂಗದವರಾದ ಯವನ ಮುಂತಾದವರೂ ಸಹ ಈ ಧರ್ಮವನ್ನು ಆಶ್ರಯಿಸಿದರು. ಯಾವ ವಿಷ್ಣುವಿನಿಂದಾಗಿ ಅವರು ಶುದ್ಧರಾದರೋ ಅಂತಹ ವಿಷ್ಣುವಿಗೆ ನಮಸ್ಕಾರಗಳು" (ನಾರಾಯಣ ಚಾರ್ಯ, ಧೂಳಖೇಡ, ೧೯೯೩:೫೧).

ಕಷ್ಟಕರವಾದ ಧ್ಯಾನ, ಯೋಗ, ದಾನ, ಯಜ್ಞ, ತಪಸ್ಸು, ತೀರ್ಥ ಯಾತ್ರೆಗಳನ್ನು ಮಾಡಲು ಅಶಕ್ತರಾದವರು 'ಕಥಾಶ್ರವಣ' ಮತ್ತು 'ನಾಮಸ್ಮರಣೆ'ಯಂತಹ ಸರಳ ಸಾಧನಗಳಿಂದಲೇ ಭಗವಂತನನ್ನು ಒಲಿಸಬಹುದು. ಕ್ರಮೇಣ ಅನುಕೂಲವಿದ್ದಷ್ಟು ನವವಿಧ ಭಕ್ತಿಗಳನ್ನು ರೂಢಿಸಿಕೊಳ್ಳಬಹುದು. ಭಕ್ತಿಯ ಮೂಲಕ ಮುಕ್ತಿಯನ್ನು ಪಡೆಯಲು ದೇವ-ಋಷಿ-ಪಿತೃಲೋಕಗಳಿಗಿಂತ ಭೂಲೋಕದ ಭರತಭೂಮಿಯೇ ಹೆಚ್ಚು ಪ್ರಶಸ್ತವಾದುದು. ದೇವತೆಗಳೂ ಇಲ್ಲಿ ಹುಟ್ಟಲು ಕಾತರಿಸುತ್ತಾರೆ. ಕೃತ, ತ್ರೇತ, ದ್ವಾಪರ ಯುಗಗಳಲ್ಲಿ ಮಾತ್ರ ಧರ್ಮಕಾರ್ಯ ಸಾಧ್ಯವೆಂದು ನಿರಾಶರಾಗಬೇಕಿಲ್ಲ. ಕಲಿಯುಗವು ಘೋರ ಅಧರ್ಮ ಪ್ರವೃತ್ತಿಯ ಪ್ರಚೋದನೆ ಮಾಡುವ ಮಧ್ಯೆಯೂ ಭಕ್ತರಿಗೆ ಶೀಘ್ರ ಹರಿಕರುಣೆ ದೊರಕಿಸುವ ಉತ್ತಮ ಗುಣವನ್ನು ಹೊಂದಿದೆ ಎಂಬುದು ಈ ಪುರಾಣದ ಅಭಿಪ್ರಾಯವಾಗಿದೆ. ಭಾಗವತವು ಬ್ರಾಹ್ಮಣ ಎಂಬ ಪದವನ್ನು ಬ್ರಹ್ಮಜ್ಞಾನಿ ಎಂಬ ಅರ್ಥದಲ್ಲಿ ಬಳಸುತ್ತದೆ. ಭಕ್ತಿಯಿಲ್ಲದ ಜಾತಿಬ್ರಾಹ್ಮಣನಿಗಿಂತ ಹರಿಭಕ್ತನಾದ ಚಂಡಾಲನೇ ಉತ್ತಮನೆಂದು ಉದ್ಗರಿಸಿದೆ.

ಒಟ್ಟಾರೆ ಭಾಗವತವು 'ದೇಶ-ಕಾಲ-ದೇಹ-ಪರಿಸ್ಥಿತಿಗಳು ಪ್ರತಿಕೂಲವಾಗಿದ್ದಾಗಲೂ ಜೀವಿಯು ಶ್ರೇಯಸ್ಸನ್ನು ಸಾಧಿಸಬಹುದು' ಎಂಬ ಪ್ರಗತಿಪರ ವಿಚಾರಧಾರೆಯನ್ನು ಮಂಡಿಸಿದೆ. ಇಲ್ಲಿಯ ವೈರಾಗ್ಯ-ಸನ್ಯಾಸಗಳು ಜೀವನ ವಿರೋಧಿಯಲ್ಲವೆಂಬುದನ್ನು ಗುರುತಿಸುವುದು ಅಗತ್ಯವೆನಿಸುತ್ತದೆ.

ಹೀಗೆ ಇತರ ಎಲ್ಲ ಪ್ರಾಚೀನ ಕೃತಿಗಳಿಗಿಂತ ಭಿನ್ನವಾಗಿ, ಮಾನವನ ಇಹದ ಬದುಕನ್ನು ಅವಮಾನಿಸದೆ, ಅಲ್ಲಿಯ ಮಿತಿಗಳನ್ನು ಮೀರುವ ಮಹತ್ವಾಕಾಂಕ್ಷೆಯ ಸಾಧ್ಯತೆಯನ್ನು ಆಪ್ತವಾಗಿ ಮಂಡಿಸುವ ಭಾಗವತದ ಉದಾತ್ತ ಜೀವನದೃಷ್ಟಿಯ ಮಹತ್ವವು ಮನನಯೋಗ್ಯವಾಗಿದೆ. ಈ ಗ್ರಂಥದಿಂದ ಆಗಬಹುದಾದ ಪ್ರಯೋಜನವನ್ನು ಎನ್.ಟಿ.ಶ್ರೀನಿವಾಸ ಅಯ್ಯಂಗಾರ್ ಅವರ ಮಾತುಗಳಲ್ಲಿ ಹೇಳುವುದಾದರೆ "ಪುರಾಣಕಾಲದ ತಪಸ್ವಿಗಳ ಹಾಗೆ ಕಲಿಯುಗದಲ್ಲಿ ಸರ್ವೇಂದ್ರಿಯಗಳನ್ನೂ ಅಡಗಿಸಿ ನಿರಂತರ ದೀರ್ಘಕಾಲ ಭಗವಚ್ಚಿಂತನೆ ಮಾಡುವ, ತಪಸ್ಸು ಮಾಡುವ ಸಾಮರ್ಥ್ಯ ಯಾರಿಗೂ ಇಲ್ಲ. ಆದರೆ ಭಾಗವತ ಶ್ರವಣ ಮಾಡುತ್ತಿದ್ದರೆ, ಭಾಗವತ ಗ್ರಂಥವನ್ನು ಅರ್ಥವತ್ತಾಗಿ ಅನುಸಂಧಾನ ಮಾಡುತ್ತಿದ್ದರೆ ಸರ್ವೇಂದ್ರಿಯಗಳೂ, ನಮ್ಮ ಅಂತಃಕರಣಗಳೂ ಭಗವದ್ವಿಷಯದಲ್ಲೇ ಲೀನವಾಗುತ್ತವೆ. ಶ್ರಮಸಾಧ್ಯವಾದ ಏಕಾಗ್ರತೆ, ಭಗವತ್ಪ್ರವಣತೆ ಅನಾಯಾಸವಾಗಿ ಬರುತ್ತದೆ.

ಮಹಾಭಾರತದ ಸಾರವೆನಿಸಿಕೊಂಡ ಭಗವದ್ಗೀತೆ ಎಷ್ಟು ಮಾನ್ಯವೋ ಅದಕ್ಕಿಂತ ಮಾನ್ಯ ಭಾಗವತ. ಭಗವದ್ಗೀತೆ ಲಕ್ಷಣ ಶಾಸ್ತ್ರವಾದರೆ ಆ ಲಕ್ಷಣಗಳಿಗೆಲ್ಲ ಹೃದಯಂಗಮವಾದ ಲಕ್ಷ್ಯಗಳನ್ನು ತೋರುವ ಉತ್ತಮ ಶಾಸ್ತ್ರ ಭಾಗವತ. ಭಗವದನುಗ್ರಹವನ್ನು ಪಡೆಯಬೇಕೆನ್ನುವವರಿಗೆ ಭಾಗವತವೊಂದು ಪ್ರಧಾನಗ್ರಂಥ. ಇದರ ಅಧ್ಯಯನ ಎಲ್ಲರಿಗೂ ಅತ್ಯಗತ್ಯ."(ಶ್ರೀನಿವಾಸಯ್ಯಂಗಾರ್ ಎನ್.ಟಿ; ೧೯೯೩ : viii)

ಈ ಪುರಾಣಕಾವ್ಯವು ದಕ್ಷಿಣೋತ್ತರ ಭೇದವಿಲ್ಲದೆ ಉತ್ತರಕಾಲೀನ ಕವಿಗಳ ಪೀಳಿಗೆಯನ್ನು ರೂಪಿಸಿದೆ. ಚಿತ್ರ, ಶಿಲ್ಪ, ನೃತ್ಯ, ಸಾಹಿತ್ಯ, ಮೊದಲಾದ ಕಲೆಗಳ ಮೇಲೆ ಗಾಢ ಪ್ರಭಾವ ಬೀರಿದೆ. ಭಾಗವತರಾಟ, ಭಾಗವಂತಿಕೆ ಮೇಳ, ಹರಿಕಥಾ ಕೀರ್ತನ, ಸಂಕೀರ್ತನೆಗಳಂತಹ ವಿನೂತನ ಧಾರ್ಮಿಕ ಕಲಾಪ್ರಕಾರಗಳಿಗೆ ಜನ್ಮ ನೀಡಿದೆ. ಅವಧೂತ ಪರಂಪರೆ, ಮಧುಕರ ವೃತ್ತಿ, ಹರಿದಾಸ ಪಂಥಗಳಂತಹ ವಿಶಿಷ್ಟ ಜೀವನಕ್ರಮಗಳನ್ನು ಹುಟ್ಟುಹಾಕಿದೆ. ಮಧ್ಯಕಾಲೀನ ಭಾರತೀಯ ಜೀವನವಿಧಾನಗಳ, ಭಕ್ತಿ ಚಳುವಳಿಗಳ ಹಾಗೂ ಆ ಮೂಲಕ ನಡೆದ ಸುಧಾರಣಾ ಆಂದೋಲನಗಳ ಮೇಲೆ ಭಾಗವತದ ಪ್ರಭಾವವು ಗಾಢವಾಗಿದೆ. ಅಧ್ಯಯನಯೋಗ್ಯವಾಗಿದೆ.

ವೇದೋಪನಿಷತ್ತುಗಳ ಸಾರವೆನಿಸಿದ ಈ ಭಾಗವತ ಗ್ರಂಥವನ್ನು ಆಧ್ಯಾತ್ಮ ದೀಪವೆಂದು ಕರೆದಿದ್ದಾರೆ. ವೇದದ ಎತ್ತರವನ್ನು ಏರಲು ಸಾಧ್ಯವಾಗದ ಭಕ್ತಜನರಿಗೆ ಭಾಗವತವು ಭಕ್ತಿಯ ಅಮೃತ ರಸವನ್ನು ನೀಡುವುದಾದರೆ; ಸಂಸ್ಕೃತ ಭಾಗವತವನ್ನು ಜೀರ್ಣಿಸಲು ಅಸಮರ್ಥರಾದ ಸಾಮಾನ್ಯ ಭಕ್ತ ಜನತೆಯ ಜ್ಞಾನತೃಷೆಯನ್ನು ತಣಿಸುವ ಕಾರ್ಯವನ್ನು ಕರ್ನಾಟಕದ ಹರಿದಾಸ ಸಾಹಿತ್ಯವು ನೆರವೇರಿಸಿದೆ.



## ಕೊನೆ ಟಿಪ್ಪಣಿಗಳು

೧. ವೆಂಕಟರಾಮಪ್ಪ ಕೆ., ಕೃಷ್ಣಚರಿತೆಯ ಪ್ರಸ್ತಾವನೆಯಲ್ಲಿ ಈ ಅರ್ಥಗಳನ್ನು ಸಂಗ್ರಹಿಸಲಾಗಿದೆ.

೨. ಶ್ರೀಮದ್ಭಾಗವತ ವಿಜಯಧ್ವಜೀಯ ವ್ಯಾಖ್ಯಾನದಲ್ಲಿ ಹೀಗೆ ವಿವರಿಸಲಾಗಿದೆ :

'ಶ್ರೂಯಮಾಣ ರಮಣೀಯತಯಾ, ಅರ್ಥಪರ್ಯಾಲೋಚನಯಾ ಚ | ಅಸ್ಯ ಇತರೇಭ್ಯಃ ಆಧಿಕ್ಯಮೇವ ಶ್ರೀಮತ್ವಂ ||

೩. ಭಾಗವತ ಸಂಪ್ರದಾಯವೆಂದರೆ ಹರಿಹರರಲ್ಲಿ ಅಭೇದವೆಣಿಸುವ ಒಂದು ಪಂಥ ಎಂಬ ಮಾತು ಕನ್ನಡ ಸಾಹಿತ್ಯ ಚರಿತ್ರೆಗಳಲ್ಲಿ ಮತ್ತೆಮತ್ತೆ ಬಂದಿದೆ ಎಂಬುದನ್ನು ಗಮಿಸಬೇಕು. ಹರಿದಾಸರು ಈ ಪಂಥದವರಲ್ಲ.

೪. ಭಾಗವತದ ಕಾಲನಿರ್ಣಯದ ಇಲ್ಲಿಯ ಮಾಹಿತಿಗಳನ್ನು ಡಾ.ಪ್ರಧಾನ್ ಗುರುದತ್ತ ಅವರ 'ಶ್ರೀಕೃಷ್ಣ ಕಥೆಯ ಉಗಮ ಮತ್ತು ವಿಕಾಸ' ದಿಂದ ಬಳಸಿಕೊಳ್ಳಲಾಗಿದೆ 

೫. ಭಾಗವತದ ಕರ್ತೃನಿರ್ಣಯದ ಇಲ್ಲಿಯ ಮಾಹಿತಿಗಳನ್ನು ವಿದ್ವಾನ್ ಮೋಟಗಾನಹಳ್ಳಿ ರಾಮಶೇಷ ಶಾಸ್ತ್ರಿಗಳ ಶ್ರೀಮದ್ಭಾಗವತದ(೧೯೬೩:೨೫-೩೫) ಉಪೋದ್ಘಾತ ಭಾಗದಿಂದ ಸ್ವೀಕರಿಸಿದೆ.

೬. ಶ್ರೀಮದ್ಭಾಗವತಪುರಾಣದ ವಸ್ತುವಿನ ಸ್ಥೂಲಪರಿಚಯವಿಲ್ಲದೆ ದಾಸರ ಕೃತಿಗಳನ್ನು ಅರ್ಥೈಸಲು ಕಷ್ಟವಾಗುತ್ತದೆ. ಪ್ರಸ್ತುತ ಅಧ್ಯಯನಕ್ಕೆ ಪೂರಕವಾದ ಈ ಕಥಾವಸ್ತುವನ್ನು ಅನುಬಂಧ ೧ರಲ್ಲಿ ನೀಡಲಾಗಿದೆ.

೭. ಅರ್ಥೋಽಯಂ ಬ್ರಹ್ಮಸೂತ್ರಾಣಾಂ ಭಾರತಾರ್ಥ ವಿನಿರ್ಣಯಃ |
ಗಾಯತ್ರೀ ಭಾಷ್ಯ ರೂಪೋಽಸೌ ವೇದಾರ್ಥ ಪರಿಬೃಂಹಿತಃ ||
ಪುರಾಣಾನಾಂ ಸಾರರೂಪಃ ಸಾಕ್ಷಾತ್ ಭಾಗವತೋದಿತಃ | (ಗರುಡಪುರಾಣ)



ಈ ಶ್ಲೋಕದ ಅರ್ಥ ಹೀಗಿದೆ : "ಅಪೌರುಷೇಯವಾದ ವೈದಿಕ ವಾಙ್ಮಯದ ಅರ್ಥ ನಿರ್ಣಯಕ್ಕೆ ಬ್ರಹ್ಮಸೂತ್ರ ರಚಿತವಾದರೆ ಆ ಸೂತ್ರಗಳ ಅರ್ಥವನ್ನು ಶ್ರೀ ಭಾಗವತ ವಿವರಿಸುತ್ತದೆ. ಹತ್ತಾರು ಅರ್ಥವುಳ್ಳ ಮಹಾಭಾರತದ ಅರ್ಥನಿರ್ಣಯಕ್ಕೆ ಈ ಗ್ರಂಥ ಪರಮ ಪ್ರಮಾಣ. ವೇದಮಾತೆಯಾದ ಗಾಯತ್ರಿಗೆ ಭಾಷ್ಯರೂಪ ಇದು ಸಮಸ್ತ ವೇದಗಳ ಅರ್ಥಗಳಿಂದ ತುಂಬಿದೆ. ಹದಿನೆಂಟು ಪುರಾಣಗಳ ಸಾರರೂಪ. ಇಂತಹ ಅಮೌಲ್ಯವಾದ ಗ್ರಂಥ ಸಾಕ್ಷಾತ್ ಶ್ರೀವೇದವ್ಯಾಸ ದೇವರಿಂದ ಉಕ್ತವಾಗಿದೆ." (ರಾಮಚಂದ್ರ ಆಚಾರ್ಯ ಡಿ., ೧೯೮೮ : ೧೨)

೮. ಈಗ ಉದಾಹರಿಸುತ್ತಿರುವ ಭಾಗವತ ಶ್ಲೋಕ-ಅರ್ಥಗಳು ದಾಸರ ಕೀರ್ತನೆಗಳ ವಿವೇಚನೆಗೆ ನೇರವಾಗಿ ಸಹಾಯಕವಾಗುವುದನ್ನು ಮುಂದಿನ ಅಧ್ಯಾಯಗಳಲ್ಲಿ ನೋಡುತ್ತೇವೆ.

೯. ಇಂದು ಕರ್ನಾಟಕದಲ್ಲಿ ಭಾಗವತ ಸಂಹಿತೆಯ ಸಂಸ್ಕೃತ ಶ್ಲೋಕ-ಗದ್ಯಗಳನ್ನು ಆಯಾ ಛಂದಸ್ಸಿನಲ್ಲಿ, ಗಂಭೀರ ಧ್ವನಿಯಲ್ಲಿ ಪರಿಣಾಮಕಾರಿಯಾಗಿ ಗಾಯನ ಮಾಡಬಲ್ಲವರಲ್ಲಿ; ಶ್ರೀವಾಸರಾಜ ಮಠಾಧೀಶರಾದ ಶ್ರೀ ಶ್ರೀ ವಿದ್ಯಾವಾಚಸ್ಪತಿ ತೀರ್ಥರು (ಪೂರ್ವಾಶ್ರಮದ ಹೆಸರು ಜಿ.ಎಸ್. ಜಯತೀರ್ಥಾಚಾರ್ಯರು) ಮೊದಲಿಗರೆಂದು ಪ್ರಖಾತರಾಗಿದ್ದಾರೆ. ಈ ಕ್ಷೇತ್ರದಲ್ಲಿ ಎರಡನೆಯ ಹೆಸರೆಂದರೆ ವಿದ್ವಾನ್. ಪೇಡಾ. ವೇದವ್ಯಾಸಾಚಾರ್ಯರದು.

## ಅಧ್ಯಾಯ ನಾಲ್ಕು

# ಹರಿದಾಸರು ಮತ್ತು ಶ್ರೀಮದ್ಭಾಗವತ

೪

# ಹರಿದಾಸರು ಮತ್ತು ಶ್ರೀಮದ್ಭಾಗವತ

## ಪ್ರವೇಶ

ಹರಿದಾಸ ಪರಂಪರೆಯ ಹಿನ್ನೆಲೆಯಲ್ಲಿ ಕನ್ನಡದಲ್ಲಿ ಗೇಯ ಪ್ರಧಾನವಾದ, ಭಕ್ತಿಸ್ಥಾಯಿಯಾಗುಳ್ಳ ಮೊದಲರಚನೆ ಹೆಣೆದವರು ನರಹರಿತೀರ್ಥರು. 'ನರಹರಿ', 'ರಘುಪತಿ' ಎಂಬ ಅಂಕಿತಗಳಲ್ಲಿ ದೊರೆಯುವ ಇವರ 'ಎಂತು ಮರುಳಾದೆ ನಾನೆಂತು ಮರುಳಾದೆ' ಹಾಗೂ 'ಹರಿಯೇ ಇದು ಸರಿಯೇ'- ಎರಡು ಕೀರ್ತನೆಗಳು ಕೀರ್ತನೆಗಳ ಎಲ್ಲ 'ಆಕಾರ' ಹಾಗೂ 'ಜೀವದನಿ'ಯನ್ನು ಪಡೆದಿವೆ. ದಾಸಸಾಹಿತ್ಯ ಒಂದು ಖಚಿತ ಆಕಾರವನ್ನು ಪಡೆದುಕೊಂಡುದು ಶ್ರೀಪಾದರಾಜರಿಂದಲೇ.

ಭಾಗವತದ ಘಟನಾವಳಿಗಳನ್ನು ಬಳಸಿಕೊಂಡು ಕೀರ್ತನೆಗಳನ್ನು ಹೆಣೆಯುವ ತಂತ್ರವನ್ನು ಇವರೇ ಮೊದಲು ಆರಂಭಿಸಿದರು. ಅವರ ಕೀರ್ತನೆಗಳಲ್ಲಿ ಭಕ್ತನೊಬ್ಬನ ಆತ್ಮನಿವೇದನೆ, ಆರ್ತತೆ, ಆತ್ಮಶೋಧನೆ, ಪಶ್ಚಾತ್ತಾಪ, ತಳಮಳಗಳು ದಟ್ಟವಾಗಿ ಗೋಚರಿಸುತ್ತವೆ.

ಕನ್ನಡ ದಾಸಸಾಹಿತ್ಯ ಪರಂಪರೆಯಲ್ಲಿ ವ್ಯಾಸರಾಯರದು ದೊಡ್ಡ ಹೆಸರು. ಅವರು ದಾಸಪರಂಪರೆಯ ಸಂಘಟಕರು, ನಿರ್ಮಾತರು. ಇವರು ಶ್ರೀಪಾದರಾಜರ ವಿದ್ಯಾ ಶಿಷ್ಯರು. ವಿಜಯನಗರದ ದೊರೆ

ಕೃಷ್ಣದೇವರಾಯನಿಂದ ಸನ್ಮಾನಿತರಾಗಿ ವಿಜಯನಗರದಲ್ಲಿ ವಿದ್ಯಾಪೀಠವನ್ನು ತೆರೆದರು. 'ಶ್ರೀಕೃಷ್ಣ, ಸಿರಿಕೃಷ್ಣ' ಅಂಕಿತಗಳಲ್ಲಿ ಕನ್ನಡ ಕೀರ್ತನೆಗಳನ್ನು ರಚಿಸಿದರು. ಸಂಸ್ಕೃತದಲ್ಲೂ ಅನೇಕ ಗ್ರಂಥಗಳನ್ನು ಬರೆದರು. ಅವರು ಕೀರ್ತನೆಗಳನ್ನು ರಚಿಸಿದರು ಎನ್ನುವುದಕ್ಕಿಂತ ಪುರಂದರ ಕನಕದಾಸರಂತಹ ಮಹಾನ್ ಕೀರ್ತನಕಾರರನ್ನು ರೂಪಿಸಿದರು. ಅವರಿಂದ ಕೀರ್ತನೆಗಳನ್ನು ಬರೆಯಿಸಿದರು, ಹಾಡಿಸಿದರು ಎನ್ನುವುದು ಹೆಚ್ಚು ಔಚಿತ್ಯದ ಮಾತು.

ವ್ಯಾಸರಾಯರು ದಾಸಸಾಹಿತ್ಯ ಪರಂಪರೆಗೆ ನೀಡಿದ ಬಹುದೊಡ್ಡ ಕೊಡುಗೆಯೆಂದರೆ ಸೋದೆ ಮಠಾಧೀಶರಾದ ಶ್ರೀವಾದಿರಾಜರು. ವಾದಿರಾಜರು ಸಂಸ್ಕೃತ ಕನ್ನಡಗಳೆರಡರಲ್ಲೂ ಕಾವ್ಯ ನಿರ್ಮಿಸಿದ ಪ್ರತಿಭಾಶಾಲಿಗಳು. ಕೆಳವರ್ಗದ ಸಮುದಾಯದವರಿಗೆ ಹಾಡಿಕೊಳ್ಳಲು ಅನುಕೂಲವಾಗಲೆಂದು ತುಳುಭಾಷೆಯಲ್ಲೂ ಕಾವ್ಯ ಬರೆದರೆಂದು ಹೇಳಲಾಗಿದೆ (ಈಗ ದಶಾವತಾರ ಸ್ತುತಿಯೊಂದೇ ಸಿಗುತ್ತಿದೆ). ಅವರ ಅಂಕಿತ ಹಯವದನ. ತತ್ವಪ್ರತಿಪಾದನೆಯ ಜತೆಗೆ ಸಾಮಾಜಿಕ ವಿಡಂಬನೆ, ಸ್ವಾನುಭವ ನಿರೂಪಣೆ, ಆರ್ತತೆ ಅವರ ಕೀರ್ತನೆಗಳ ಹೆಗ್ಗುರುತುಗಳು. ಭಾಗವತದ ಅನೇಕ ಘಟನಾವಳಿಗಳು ಸಂಭಾಷಣಾ ರೂಪದಲ್ಲಿ ಅವರ ಕೀರ್ತನೆಗಳಲ್ಲಿ ಆಕಾರ ಪಡೆದಿವೆ.

'ದಾಸರೆಂದರೆ ಪುರಂದರದಾಸರಯ್ಯಾ' ಎಂದು ಗುರುಗಳಾದ ವ್ಯಾಸರಾಯರಿಂದ ಹೊಗಳಿಸಿಕೊಂಡ **ಪುರಂದರದಾಸರು** ಕೀರ್ತನ ಸಾಹಿತ್ಯ ಪರಂಪರೆಗೆ ಅತ್ಯಪೂರ್ವವಾದ ನೆಲೆಬೆಲೆಯನ್ನು ಕಲ್ಪಿಸಿಕೊಟ್ಟರು. ಅವರು ತಮ್ಮ ಕೃತಿಗಳಲ್ಲಿನ ಸಾಹಿತ್ಯಕ, ಸಾಮಾಜಿಕ ಹಾಗೂ ಸಂಗೀತದ ಮೌಲ್ಯಗಳಿಂದಾಗಿ ಸಮಸ್ತ ಕನ್ನಡಿಗರ ಗೌರವಕ್ಕೆ ಪಾತ್ರರಾಗಿದ್ದಾರೆ. 'ಪುರಂದರ ವಿಠಲ' ಅವರ ಅಂಕಿತ. ಅವರ ಕೀರ್ತನೆಗಳಲ್ಲಿ ಭಕ್ತಿಯ ಅಭಿವ್ಯಕ್ತಿ ವಿಧಾನಗಳಲ್ಲಿ ಒಂದಾದ 'ಪಂಚಭಾವ' ಸ್ಪಷ್ಟವಾಗಿ ಅಭಿವ್ಯಕ್ತಗೊಂಡಿದೆ. ಅದರಲ್ಲೂ ವಾತ್ಸಲ್ಯಭಾವದ ಅಭಿವ್ಯಕ್ತಿಯಲ್ಲಿ ಅವರಿಗೆ ವಿಶೇಷವಾದ ಒಲವು. ಆಧ್ಯಾತ್ಮತತ್ವ, ಲೋಕನೀತಿ ಹಾಗೂ ಸಂಗೀತದ ರಾಗ ಸ್ವರೂಪಗಳ ಮುಪ್ಪುರಿಯನ್ನು ಪುರಂದರರ ಕೀರ್ತನೆಗಳಲ್ಲಿ ಕಾಣಬಹುದು. ಜನರ ಬದುಕಿನ ಅನಂತ ವೈವಿಧ್ಯವನ್ನು ಪುರಂದರದಾಸರಷ್ಟು ಸೂಕ್ಷ್ಮವಾಗಿ ಗಮನಿಸಿದವರು ಮತ್ತೊಬ್ಬರಿಲ್ಲ. ಸಾರ್ವಕಾಲಿಕ ಜೀವನಮೌಲ್ಯಗಳನ್ನು ಇವರು ಪರಿಣಾಮಕಾರಿಯಾಗಿ ಪ್ರತಿಮೆ ರೂಪಕಗಳ ಮೂಲಕ ಪ್ರತಿಪಾದಿಸಿದ್ದಾರೆ. ಅವರ ಅನೇಕ ಕೀರ್ತನೆಗಳು ಸುಂದರ ಭಾವಗೀತಗಳೇ ಆಗಿವೆ. ಪುರಂದರದಾಸರು ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೆ ಒಂದು ಭದ್ರವಾದ ಅಡಿಪಾಯವನ್ನು ಹಾಕಿಕೊಟ್ಟರಲ್ಲದೆ ಆರಂಭದ ಅಭ್ಯಾಸಿಗಳಿಗಾಗಿ 'ಪಿಳ್ಳಾರಿ ಗೀತ'ಗಳನ್ನು ರಚಿಸಿದರು.

ಪುರಂದರದಾಸರ ಸಮಕಾಲೀನರೂ, ವ್ಯಾಸರಾಯರ ಶಿಷ್ಯರೂ ಆದ ದಾಸರೆಂದರೆ **ಕನಕದಾಸರು.** ಕನಕರು, ಕೀರ್ತನಕಾರರಷ್ಟೇ ಅಲ್ಲ, ಕನ್ನಡದ ಮಂದಿ ಮೆಚ್ಚಿದ ಕವಿಗಳು. 'ಕನಕದಾಸರು ದಾಸರಲ್ಲಿ ಕವಿಗಳು' ಎನ್ನುವ ಮಾತು ಅವರ ಸಾಧನೆಗೆ, ವೈಯಕ್ತಿಕ ಪ್ರತಿಭೆಗೆ ಹಿಡಿದ ಕನ್ನಡಿ. ಸಮಾಜದ ಕೆಳಸ್ತರದಿಂದ ಬಂದು ಸಾಮಾಜಿಕ ಕಟ್ಟುಪಾಡುಗಳನ್ನು ಮುರಿದುಕಟ್ಟಿದ ಧೀಮಂತರು, ಕನಕದಾಸರು.



ಕೃಷ್ಣದೇವರಾಯನಿಂದ ಸನ್ಮಾನಿತರಾಗಿ ವಿಜಯನಗರದಲ್ಲಿ ವಿದ್ಯಾಪೀಠವನ್ನು ತೆರೆದರು. 'ಶ್ರೀಕೃಷ್ಣ, ಸಿರಿಕೃಷ್ಣ' ಅಂಕಿತಗಳಲ್ಲಿ ಕನ್ನಡ ಕೀರ್ತನೆಗಳನ್ನು ರಚಿಸಿದರು. ಸಂಸ್ಕೃತದಲ್ಲೂ ಅನೇಕ ಗ್ರಂಥಗಳನ್ನು ಬರೆದರು. ಅವರು ಕೀರ್ತನೆಗಳನ್ನು ರಚಿಸಿದರು ಎನ್ನುವುದಕ್ಕಿಂತ ಪುರಂದರ ಕನಕದಾಸರಂತಹ ಮಹಾನ್ ಕೀರ್ತನಕಾರರನ್ನು ರೂಪಿಸಿದರು. ಅವರಿಂದ ಕೀರ್ತನೆಗಳನ್ನು ಬರೆಯಿಸಿದರು, ಹಾಡಿಸಿದರು ಎನ್ನುವುದು ಹೆಚ್ಚು ಔಚಿತ್ಯದ ಮಾತು.

ವ್ಯಾಸರಾಯರು ದಾಸಸಾಹಿತ್ಯ ಪರಂಪರೆಗೆ ನೀಡಿದ ಬಹುದೊಡ್ಡ ಕೊಡುಗೆಯೆಂದರೆ ಸೋದೆ ಮಠಾಧೀಶರಾದ ಶ್ರೀವಾದಿರಾಜರು. ವಾದಿರಾಜರು ಸಂಸ್ಕೃತ ಕನ್ನಡಗಳೆರಡರಲ್ಲೂ ಕಾವ್ಯ ನಿರ್ಮಿಸಿದ ಪ್ರತಿಭಾಶಾಲಿಗಳು. ಕೆಳವರ್ಗದ ಸಮುದಾಯದವರಿಗೆ ಹಾಡಿಕೊಳ್ಳಲು ಅನುಕೂಲವಾಗಲೆಂದು ತುಳುಭಾಷೆಯಲ್ಲೂ ಕಾವ್ಯ ಬರೆದರೆಂದು ಹೇಳಲಾಗಿದೆ (ಈಗ ದಶಾವತಾರ ಸ್ತುತಿಯೊಂದೇ ಸಿಗುತ್ತಿದೆ). ಅವರ ಅಂಕಿತ ಹಯವದನ. ತತ್ವಪ್ರತಿಪಾದನೆಯ ಜತೆಗೆ ಸಾಮಾಜಿಕ ವಿಡಂಬನೆ, ಸ್ವಾನುಭವ ನಿರೂಪಣೆ, ಆರ್ತತೆ ಅವರ ಕೀರ್ತನೆಗಳ ಹೆಗ್ಗುರುತುಗಳು. ಭಾಗವತದ ಅನೇಕ ಘಟನಾವಳಿಗಳು ಸಂಭಾಷಣಾ ರೂಪದಲ್ಲಿ ಅವರ ಕೀರ್ತನೆಗಳಲ್ಲಿ ಆಕಾರ ಪಡೆದಿವೆ.

'ದಾಸರೆಂದರೆ ಪುರಂದರದಾಸರಯ್ಯಾ' ಎಂದು ಗುರುಗಳಾದ ವ್ಯಾಸರಾಯರಿಂದ ಹೊಗಳಿಸಿಕೊಂಡ ಪುರಂದರದಾಸರು ಕೀರ್ತನ ಸಾಹಿತ್ಯ ಪರಂಪರೆಗೆ ಅತ್ಯಪೂರ್ವವಾದ ನೆಲೆಬೆಲೆಯನ್ನು ಕಲ್ಪಿಸಿಕೊಟ್ಟರು. ಅವರು ತಮ್ಮ ಕೃತಿಗಳಲ್ಲಿನ ಸಾಹಿತ್ಯಕ, ಸಾಮಾಜಿಕ ಹಾಗೂ ಸಂಗೀತದ ಮೌಲ್ಯಗಳಿಂದಾಗಿ ಸಮಸ್ತ ಕನ್ನಡಿಗರ ಗೌರವಕ್ಕೆ ಪಾತ್ರರಾಗಿದ್ದಾರೆ. 'ಪುರಂದರ ವಿಠಲ' ಅವರ ಅಂಕಿತ. ಅವರ ಕೀರ್ತನೆಗಳಲ್ಲಿ ಭಕ್ತಿಯ ಅಭಿವ್ಯಕ್ತಿ ವಿಧಾನಗಳಲ್ಲಿ ಒಂದಾದ 'ಪಂಚಭಾವ' ಸ್ಪಷ್ಟವಾಗಿ ಅಭಿವ್ಯಕ್ತಗೊಂಡಿದೆ. ಅದರಲ್ಲೂ ವಾತ್ಸಲ್ಯಭಾವದ ಅಭಿವ್ಯಕ್ತಿಯಲ್ಲಿ ಅವರಿಗೆ ವಿಶೇಷವಾದ ಒಲವು. ಆಧ್ಯಾತ್ಮತತ್ವ, ಲೋಕನೀತಿ ಹಾಗೂ ಸಂಗೀತದ ರಾಗ ಸ್ವರೂಪಗಳ ಮುಪ್ಪುರಿಯನ್ನು ಪುರಂದರರ ಕೀರ್ತನೆಗಳಲ್ಲಿ ಕಾಣಬಹುದು. ಜನರ ಬದುಕಿನ ಅನಂತ ವೈವಿಧ್ಯವನ್ನು ಪುರಂದರದಾಸರಷ್ಟು ಸೂಕ್ಷ್ಮವಾಗಿ ಗಮನಿಸಿದವರು ಮತ್ತೊಬ್ಬರಿಲ್ಲ. ಸಾರ್ವಕಾಲಿಕ ಜೀವನಮೌಲ್ಯಗಳನ್ನು ಇವರು ಪರಿಣಾಮಕಾರಿಯಾಗಿ ಪ್ರತಿಮೆ ರೂಪಕಗಳ ಮೂಲಕ ಪ್ರತಿಪಾದಿಸಿದ್ದಾರೆ. ಅವರ ಅನೇಕ ಕೀರ್ತನೆಗಳು ಸುಂದರ ಭಾವಗೀತಗಳೇ ಆಗಿವೆ. ಪುರಂದರದಾಸರು ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೆ ಒಂದು ಭದ್ರವಾದ ಅಡಿಪಾಯವನ್ನು ಹಾಕಿಕೊಟ್ಟರಲ್ಲದೆ ಆರಂಭದ ಅಭ್ಯಾಸಿಗಳಿಗಾಗಿ 'ಪಿಳ್ಳಾರಿ ಗೀತ'ಗಳನ್ನು ರಚಿಸಿದರು.

ಪುರಂದರದಾಸರ ಸಮಕಾಲೀನರೂ, ವ್ಯಾಸರಾಯರ ಶಿಷ್ಯರೂ ಆದ ದಾಸರೆಂದರೆ ಕನಕದಾಸರು. ಕನಕರು, ಕೀರ್ತನಕಾರರಷ್ಟೇ ಅಲ್ಲ, ಕನ್ನಡದ ಮಂದಿ ಮೆಚ್ಚಿದ ಕವಿಗಳು. 'ಕನಕದಾಸರು ದಾಸರಲ್ಲಿ ಕವಿಗಳು' ಎನ್ನುವ ಮಾತು ಅವರ ಸಾಧನೆಗೆ, ವೈಯಕ್ತಿಕ ಪ್ರತಿಭೆಗೆ ಹಿಡಿದ ಕನ್ನಡಿ. ಸಮಾಜದ ಕೆಳಸ್ತರದಿಂದ ಬಂದು ಸಾಮಾಜಿಕ ಕಟ್ಟುಪಾಡುಗಳನ್ನು ಮುರಿದುಕಟ್ಟಿದ ಧೀಮಂತರು. ಕನಕದಾಸರು.

ವ್ಯಾಖ್ಯಾನ : ಶಾಸ್ತ್ರಸಮ್ಮತವಾದ ಹೊಸ ಅರ್ಥವನ್ನು ಹೇಳುವುದು ಅಥವಾ ಬರೆಯುವುದು ಮೊದಲಾದ ಚಟುವಟಿಕೆಗಳು ವ್ಯಾಪಕ ಪ್ರಸಾರದಲ್ಲಿದ್ದುದಕ್ಕೆ, ಪ್ರಾಚೀನ ಕಾಲದಿಂದ ಇಂದಿಗೂ ನಡೆದುಬಂದಿರುವ ಹಲವಾರು ಆಚರಣೆಗಳು ಸಾಕ್ಷಿಗಳಾಗಿವೆ.

**ಭಾಗವತ : ಶ್ರವಣ**

ಶ್ರೀಮದ್ಭಾಗವತವನ್ನು ಪರೀಕ್ಷಿತರಾಜನು ಶುಕಮುನಿಯಿಂದ ಸಪ್ತಾಹ (ಏಳುದಿನಗಳ) ಕಾಲ ಶ್ರವಣ ಮಾಡಿದಂತೆಯೇ ಭಕ್ತರೂ ಸಪ್ತಾಹ ಕ್ರಮದಲ್ಲಿ ಭಾಗತವನ್ನು ಕೇಳುವ ಪದ್ಧತಿಯು ಬಹುಪ್ರಚುರವಾಗಿತ್ತು. ಬೆಳಗಿನಿಂದ ಸಂಜೆಯವರೆಗೆ ಉಪವಾಸದಿಂದ ಕಥಾ ಶ್ರವಣ ಮಾಡಿ, ರಾತ್ರಿ ಮಿತಾಹಾರ ಸೇವಿಸಿ ಮತ್ತೆ ಮರುದಿನಕ್ಕೆ ಸಿದ್ಧರಾಗುವುದು- ಹೀಗೆ ಸತತ ಏಳು ದಿನಗಳಲ್ಲಿ ಸಮಸ್ತ ಭಾಗವತವನ್ನು ಹೇಳಿಸುತ್ತಾ, ತಾನು ತನ್ನ ಬಂಧುಮಿತ್ರರೊಂದಿಗೆ ಕೇಳುತ್ತಾ ಕೊನೆಯದಿನ ಮಂಗಳವನ್ನು ಆಚರಿಸುವ ಈ ಕ್ರಮಕ್ಕೆ **'ಭಾಗವತ ಸಪ್ತಾಹ'**ವೆಂದೇ ಹೆಸರು. ಜೀವನದಲ್ಲಿ ಒಂದು ಬಾರಿಯಾದರೂ ತಮ್ಮ ಮನೆಯಲ್ಲಿ ಈ ರೀತಿಯ 'ಸಪ್ತಾಹ'ವನ್ನು ಏರ್ಪಡಿಸುವುದು ತಮ್ಮ ಜೀವನದ ಕರ್ತವ್ಯಗಳಲ್ಲಿ ಒಂದು ಎಂದು ಭಾವಿಸುತ್ತಿದ್ದುದು ಕಂಡುಬರುತ್ತದೆ. ಒಂದೊಮ್ಮೆ ವ್ಯಕ್ತಿಯ ಮರಣಕಾಲದವರೆಗೂ ಭಾಗವತ ಸಪ್ತಾಹ ಶ್ರವಣ ಸಾಧ್ಯವಾಗದಿದ್ದರೆ ಅವನು ಗತಿಸಿದ ಒಂದು ವರ್ಷದೊಳಗಾಗಿ ಆ ವ್ಯಕ್ತಿಯ ಮಕ್ಕಳು ತಮ್ಮ ಮನೆಯಲ್ಲಿ ಮೃತವ್ಯಕ್ತಿಯ ಸದ್ಗತಿಗಾಗಿ ಒಂದು 'ಸಪ್ತಾಹ' ನಡೆಸುವ ಕ್ರಮವು ಇಂದಿಗೂ ರೂಢಿಯಲ್ಲಿದೆ.

ಹಾಳು ಹರಟೆ ಮಾಡಿ ಮನವ |
ಬೀಳು ಮಾಡಿಕೊಳ್ಳ ಬೇಡಿ ||
ಏಳುದಿನದ ಕಥೆಯ ಕೇಳಿ |
ಏಳಿರಯ್ಯ ವೈಕುಂಠಕೆ ||
(ಹರಿಯನೆನೆಯಿರೋ ನಮ್ಮ ಹರಿಯ ನೆನೆಯಿಗೋ)

ಎಂಬ ಪುರಂದರದಾಸರ ಉಲ್ಲೇಖವು 'ಭಾಗವತ ಸಪ್ತಾಹ' ಪದ್ಧತಿಯ ಅಸ್ತಿತ್ವ ಸೂಚಕವಾಗಿದೆ.

ಭಾದ್ರಪದ ಶುಕ್ಲಪಕ್ಷವೆಂದರೆ ಭಾಗವತಪ್ರಿಯರಿಗೆ ಆನಂದದ ಕಾಲ. ಶುಕಮುನಿಯು ಪರೀಕ್ಷಿತನಿಗೆ ಪ್ರೋಷ್ಠಪದ (ಭಾದ್ರಪದ) ಕಾಲದಲ್ಲಿ ಭಾಗವತವನ್ನು ಉಪದೇಶಿಸಿದ ಸ್ಮರಣೆಗಾಗಿ, ಪ್ರತಿವರ್ಷವೂ ಭಾದ್ರಪದ ಶುಕ್ಲಪಕ್ಷದ ಹದಿನೈದು ದಿನಗಳು ಅಥವಾ ಕನಿಷ್ಠ ಒಂದು ಸಪ್ತಾಹದ ಅವಧಿಯಲ್ಲಾದರೂ ಪ್ರೋಷ್ಠಪದೀ ಭಾಗವತ ಪ್ರವಚನವನ್ನು ಶ್ರದ್ಧಾಭಕ್ತಿಯಿಂದ ಕೇಳುವ ಕ್ರಮವು ಪ್ರಸಿದ್ಧವಾಗಿದೆ.

ಏಕಾದಶಿಯ ದಿನ ಭಾಗವತ ಶ್ರವಣವು ಅವಶ್ಯ ಕರ್ತವ್ಯವಾಗಿತ್ತು.

'ಯಾಮಿನಿಯಲಿ ಅನಿಮಿಷದ ಜಾಗರವು |
ಶ್ರೀಮದ್ಭಾಗವತ ಶ್ರವಣ ಗೀತಾ ಪಠಣ ||



ಪ್ರೇಮವಾರಿಧಿ ಮುಳುಗಿ ಸಂಕೀರ್ತನೆಯು |
ಧಾಮತ್ರಯದ ಸುಖಕಿದೇ ಕಾರಣವು ||'

ಎಂಬ ಪ್ರಸನ್ನ ವೆಂಕಟದಾಸರ ಉಲ್ಲೇಖವು ಮೇಲಿನ ಅಭಿಪ್ರಾಯವನ್ನು ಸಮರ್ಥಿಸುವಂತಿದೆ.

ಸದಾಚಾರವಂತರಾದ ಸಂಪ್ರದಾಯ ನಿಷ್ಠರಾದ ವಿಷ್ಣುಭಕ್ತರ ವಾರ್ಷಿಕ ಆಚರಣೆಗಳಲ್ಲಿ[೨] ಅನೇಕ ನಿತ್ಯ ನೈಮಿತ್ತಿಕ ಪರ್ವಕಾಲಗಳು ಭಾಗವತದ ಚಿಂತನ ಮಂಥನಗಳಿಗೆ ಸಂಬಂಧಿಸಿವೆ. ಉತ್ತಮ ಮಕ್ಕಳನ್ನು ಪಡೆಯಲೆಂಬ ಆಶಯದಿಂದ ನಡೆಸುವ ಪುಂಸವನ ವ್ರತ, ಪಯೋವ್ರತಗಳ ಸಂದರ್ಭದಲ್ಲೂ; ಗರ್ಭಿಣಿಯ ಉದರದಲ್ಲಿ ಬೆಳೆಯುತ್ತಿರುವ ಮಗುವಿಗೆ ಉತ್ತಮ ಸಂಸ್ಕಾರವಾಗಬೇಕೆಂಬ ನಿಮಿತ್ತದಿಂದಲೂ; ಭಕ್ತನು ಭಗವತ್ಪ್ರೀತಿಗಾಗಿ ನಡೆಸುವ ವಿಷ್ಣುಪಂಚಕ, ಭೀಷ್ಮಪಂಚಕ, ಚಾಂದ್ರಾಯಣ ಮೊದಲಾದ ಉಪವಾಸ ವ್ರತಗಳ ಅಂಗವಾಗಿಯೂ ಭಾಗವತ ಪುರಾಣ ಶ್ರವಣವು ನಡೆಯುತ್ತಿದ್ದುದು ಕಂಡುಬರುತ್ತದೆ.

ತೀರ್ಥಯಾತ್ರೆಯ ಸಂದರ್ಭದಲ್ಲಿ ತತ್ವ ಶ್ರವಣದ ಅಂಗವಾಗಿಯೂ, ಕ್ಷೇತ್ರ ಮಹಾತ್ಮೆ ತಿಳಿಯುವ ಅಗತ್ಯಕ್ಕಾಗಿಯೂ ಭಾಗವತದ ಶ್ರವಣ ಮನನಗಳು ನಡೆಯುತ್ತಿದ್ದವು. ಜೀವನ ಪರ್ಯಂತ ತಮ್ಮ ಮನೆ-ಮಠಗಳಲ್ಲೇ ಕುಳಿತು ನೈಮಿಷಾರಣ್ಯ, ಹರಿದ್ವಾರ, ಮಥುರಾ, ಗೋಕುಲ, ವೃಂದಾವನ, ದ್ವಾರಕಾ, ಕುರುಕ್ಷೇತ್ರ, ಬದರೀ, ಕಾಶೀ, ಪ್ರಯಾಗ, ಗಯಾ, ಪುಷ್ಕರ, ಪ್ರಭಾಸ, ಸಿದ್ಧಪುರೀ(ಮಾತೃಗಯಾ), ಗಂಗಾ, ಯಮುನಾ, ಸರಸ್ವತೀ, ಕಾವೇರಿ ತಾಮ್ರಪರ್ಣಿ ಮುಂತಾದ ತೀರ್ಥ-ಕ್ಷೇತ್ರಗಳಿಗೆ ಸಂಬಂಧಿಸಿದ ಭಾಗವತ ಘಟನೆಗಳನ್ನು ಚಿಂತಿಸುತ್ತಿದ್ದ ವ್ಯಕ್ತಿಯು ತನ್ನ ಮನಸ್ಸಿನಲ್ಲೇ ಆ ಸ್ಥಳಗಳ ಬಗ್ಗೆ ಆಪ್ತವಾದ ಭಾವಕೋಶವನ್ನು ನಿರ್ಮಿಸಿಕೊಂಡಿರುತ್ತಾನೆ. ಯಾತ್ರೆಯ ಕಾಲದಲ್ಲಿ ಪ್ರತ್ಯಕ್ಷವಾಗಿ ಆಯಾ ಕ್ಷೇತ್ರದಲ್ಲೇ ಕುಳಿತು ಅಲ್ಲಿಗೆ ಸಂಬಂಧಿಸಿದ ಭಾಗವತ ವಿಚಾರವನ್ನು ಆತ್ಮೀಯವಾಗಿ ಪರಿಭಾವಿಸುವಾಗ ಅವರ್ಣನೀಯ ಆನಂದವನ್ನು ಅನುಭವಿಸುವುದೇ ಈ ಕ್ರಿಯೆಯ ಪ್ರಯೋಜನವೆನ್ನಬಹುದು.[೩]

ಇದಲ್ಲದೆ ಪ್ರತಿನಿತ್ಯವೂ ಶ್ರೀಮದ್ಭಾಗವತವನ್ನು ಹೇಳಿ-ಕೇಳುವುದು; ನಿಲ್ಲುವಂತಿಲ್ಲ. ಹೆಚ್ಚಿನ ಸಮಯಾವಕಾಶವಿಲ್ಲದಿದ್ದರೆ, ಒಂದು ಶ್ಲೋಕ, ಅರ್ಧಶ್ಲೋಕ ಅಥವಾ ಕನಿಷ್ಠ ಒಂದು ಪಾದ (ಕಾಲು ಶ್ಲೋಕ)ವನ್ನಾದರೂ ಪಾರಾಯಣ ಮಾಡಬೇಕು ಶ್ರವಣ ಮಾಡಬೇಕು.[೪] 'ಇದೊಂದು ಜೀವನ ವ್ರತ' ಎಂಬ ದೀಕ್ಷೆಯನ್ನಿಟ್ಟುಕೊಂಡವರು ಕಂಡುಬರುತ್ತಾರೆ.

'ಹರಿಕಥಾ ಶ್ರವಣ ಮಾಡೋ ನಿರಂತರ |
ಪರಗತಿಗಿದು ನಿರ್ಧಾರ ನೋಡೋ |'
'ಹರಿಕಥಾ ಶ್ರವಣಕ್ಕೆ ಮನವಿಟ್ಟ ಪ್ರೌಢ |
ಅರವತ್ತುಗಳಿಗೆಗಳ ವ್ಯರ್ಥ-ಹೋಗಾಡ' (ಉಗಾಭೋಗ)

ಮುಂತಾದ ಪುರಂದರದಾಸರ ಮಾತುಗಳು ಭಾಗವತದ ನಿತ್ಯ ವಿನಿಯೋಗದ ಪ್ರಾಚೀನ ರೂಢಿಗಳನ್ನು ಸೂಚಿಸುತ್ತಿರುವಂತಿವೆ.

ಹೀಗೆ ಶ್ರೀಮದ್ಭಾಗವತ ಪುರಾಣವನ್ನು ಸತತವಾಗಿ ಒಂದು ವಾರ ಕಾಲದಲ್ಲಿ, ಹದಿನೈದು ದಿನಗಳಲ್ಲಿ, ವರ್ಷದ ವಿಶೇಷದಿನಗಳಲ್ಲಿ; ಮಾತ್ರವಲ್ಲದೆ, ಸೌಲಭ್ಯವಿದ್ದರೆ ದಿನನಿತ್ಯವೂ; ಹೇಳುವ-ಕೇಳುವ ರೂಢಿಯು ಕಂಡುಬರುತ್ತದೆ. ಆದ್ದರಿಂದಲೇ ಭಾಗತವನ್ನು 'ನಿತ್ಯಂ ವಿಷ್ಣು ಜನಾಶ್ರಯಂ' ಎಂದು ಹೇಳಲಾಗಿದೆ.

ರಾಜನ ಆಸ್ಥಾನದಲ್ಲಿ ಒಬ್ಬಗಾಯಕಿಯು ಭಾಗವತದ ಪುಣ್ಯಕಥೆಗಳನ್ನು ರಸಾಭಿವ್ಯಂಜಕವಾಗಿ ಹಾಡುತ್ತಿದ್ದುದನ್ನು, ಗೋವಿಂದವೈದ್ಯನೆಂಬ ಕವಿಯು 'ಆಸಮಯದೊಳ್ ಓರ್ವನಾರಿ ಭಾಗವತ ವಿಳಾಸದ ಪುಣ್ಯಕಥೆಗಳ ಗಾನರಸದೊಳೋದಿ ಬಹುಸಂತೋಷವನಿತ್ತಳರಸಂಗೆ' (ಉದ್ಧೃತ: ನಾಗರಾಜ ಡಿ.ಕೆ., ೧೯೮೨ : ೧೮) ಎಂದು ಉಲ್ಲೇಖಿಸಿದ್ದಾನೆ.

ವಿದ್ವಾಂಸರನ್ನು ಭಾಗವತದಲ್ಲಿ ಪರೀಕ್ಷಿಸಬೇಕು (ವಿದ್ಯಾವತಾಂ ಭಾಗವತೇ ಪರೀಕ್ಷಾ) ಎಂಬ ಮಾತು ಬಹು ಪ್ರಚುರವಾಗಿದ್ದ ಆ ಕಾಲದಲ್ಲಿ ಜನಕೇಂದ್ರಗಳಾಗಿದ್ದ ದೇವಾಲಯದಲ್ಲಿ ನಡೆಯುತ್ತಿದ್ದ ಪುರಾಣ ಪಾರಾಯಣ-ಪ್ರವಚನಗಳಲ್ಲಿ, ವಿದ್ವಜ್ಜನಾಶ್ರಯವಾದ ಅರಮನೆ-ಗುರುಮನೆಗಳಲ್ಲಿ ನಡೆಯುತ್ತಿದ್ದ ವಿದ್ವದ್ಗೋಷ್ಠಿಗಳಲ್ಲಿ; 'ಭಾಗವತ' ಪುರಾಣಕ್ಕೆ ವಿಶೇಷ ಪ್ರಾಶಸ್ತ್ಯವಿದ್ದುದು ಅತಿಶಯವೇನಲ್ಲ. ಅಂತೆಯೇ ಕಾಲಕ್ರಮದಲ್ಲಿ ಈ ಗ್ರಂಥಕ್ಕೆ ಅನೇಕ ವ್ಯಾಖ್ಯಾನಗಳೂ ಬಂದವು.

### ಭಾಗವತ : ವ್ಯಾಖ್ಯಾನ

ಮಧ್ವಾಚಾರ್ಯರು ಭಾಗವತದ ಪ್ರವಚನ, ಪಾರಾಯಣ, ಪಾಠನಿರ್ಣಯ ಮಾಡಿದ ಹಾಗೂ ವ್ಯಾಖ್ಯಾನವನ್ನು ರಚಿಸಿದ ಘಟನೆಗಳನ್ನು 'ಸುಮಧ್ವವಿಜಯ'[೫] ಎಂಬ ಜೀವನ ಚರಿತ್ರಾತ್ಮಕವಾದ ಸಂಸ್ಕೃತ ಕಾವ್ಯದಲ್ಲಿ ದಾಖಲಿಸಲಾಗಿದೆ.ಅಲ್ಲಿಯ ವಿವರಗಳು ಹೀಗಿವೆ :

ಶ್ರೀಮಧ್ವಾಚಾರ್ಯರ ಶಿಷ್ಯರಲ್ಲಿ ಪ್ರಮುಖರಾದ ಹೃಷೀಕೇಶ ತೀರ್ಥರು, ಸಾಂಸಾರಿಕ ದುಃಖವನ್ನು ನಿವಾರಿಸುವ ಶ್ರೀಮದ್ಭಾಗವತದ ಶ್ಲೋಕಗಳನ್ನು ಕೇಳುಗರ ಕಿವಿಗೆ ಇಂಪಾಗುವಂತೆ ಮಧುರ ಸ್ವರದಿಂದಲೂ ವಾಚನ ನೈಪುಣ್ಯ ಮೊದಲಾದ ಗುಣಗಳಿಂದಲೂ ಓದುತ್ತಿದ್ದಾಗ ಮಧ್ವಾಚಾರ್ಯರು ಉಪನ್ಯಾಸ ರೂಪದಲ್ಲಿ ಭಾಗವತದ ಆ ಶ್ಲೋಕಗಳ ಅರ್ಥವನ್ನು ವಿವರಿಸುವ ಪ್ರವಚನ ಮಾಡಿದರೆಂದೂ, ಮೃದುವಾದ ಶಬ್ದಾರ್ಥಗಳಿಂದ ಕೂಡಿದ ಸರಳವಾದ ಮತ್ತು ಅರ್ಥಗರ್ಭಿತವಾದ ಅವರ ಭಾಗವತ ಪ್ರವಚನವು ಏಕಕಾಲಕ್ಕೆ ಪಂಡಿತರಿಗೂ-ಪಾಮರರಿಗೂ ಆನಂದವನ್ನುಂಟು ಮಾಡಿತೆಂದೂ ವಿವರಿಸಿದ್ದಾರೆ.

ಗ್ರಂಥಸಂಪಾದನಾ ಶಾಸ್ತ್ರದಲ್ಲಿ ಪರಿಣತರಾಗಿದ್ದ ಮಧ್ವಾಚಾರ್ಯರು ತಮ್ಮ ಕಾಲಕ್ಕೆ ಪ್ರಚಲಿತವಿದ್ದ ಶ್ರೀಮದ್ಭಾಗವತದ ಅನೇಕ ಹಸ್ತಪ್ರತಿಗಳನ್ನು ಪರಿಶೀಲಿಸಿ ಪಾಠನಿರ್ಣಯವನ್ನು ಮಾಡಿದ ವಿಚಾರ ತಿಳಿದುಬರುತ್ತದೆ. ಆ ಸಂದರ್ಭದಲ್ಲಿ ಅವರು ಪುಸ್ತಕವನ್ನು ನೋಡದೆ ಪಾಠಾಂತರ ಸಹಿತವಾಗಿ ಭಾಗವತ ಪಂಚಮಸ್ಕಂಧದ ಅನೇಕ ಅಧ್ಯಾಯಗಳನ್ನು ಮುಖತಃ ಹೇಳಿದ ವಿಚಾರ ಪ್ರಸಿದ್ಧವಾಗಿದೆ.

ಮಧ್ವಾಚಾರ್ಯರು ಶ್ರೀಮದ್ಭಾಗವತದ ಅನೇಕ ಶ್ಲೋಕಗಳ ಅರ್ಥವಿವರಣ ರೂಪವಾದ ‘ಶ್ರೀಮದ್ಭಾಗವತ ತಾತ್ಪರ್ಯ ನಿರ್ಣಯ’ ಎಂಬ ಸಂಸ್ಕೃತ ವ್ಯಾಖ್ಯಾನವನ್ನು ರಚಿಸಿದ್ದಾರೆ. ಪುರಾಣಗಳಲ್ಲಿ ಸಾಮಾನ್ಯ ವಾಗಿ ಕಂಡುಬರುವ ದರ್ಶನ ಭಾಷೆ, ಗುಹ್ಯ ಭಾಷೆ ಮತ್ತು ಸಮಾಧಿ ಭಾಷೆ ಎಂಬ ನಿರೂಪಣಾ ಕ್ರಮಗಳ ಸ್ವರೂಪವನ್ನು ತಿಳಿಸುವ ಮೂಲಕ ಈ ಗ್ರಂಥವು ಪುರಾಣಗಳನ್ನು ಅಧ್ಯಯನ ಮಾಡುವ ವಿದ್ವಾಂಸರಿಗೆ ಮಾರ್ಗದರ್ಶಕವಾಗಿದೆ. ಅವರ ಶಿಷ್ಯ ಪರಂಪರೆಯ ಮೇಲೆ ಈ ಗ್ರಂಥ ಸಾಕಷ್ಟು ಪ್ರಭಾವ ಬೀರುವುದನ್ನು ಗುರುತಿಸಬಹುದು.

ಮಧ್ವಾಚಾರ್ಯರ ಈ ಭಾಗವತ ಪ್ರೇಮವು ಅವರ ಶಿಷ್ಯರಾದ ನರಹರಿ ತೀರ್ಥರಿಗೂ ಪ್ರೇರಕವಾಗಿರಬೇಕು. ನರಹರಿತೀರ್ಥರ ಕನ್ನಡ ಕೀರ್ತನೆಗಳಲ್ಲಿ ಭಾಗವತದವಸ್ತು, ವಿಷಯಗಳು ಕಂಡುಬರಲು ಕಾರಣವಾಗಿರಬೇಕು. ನಂತರದ ಎಲ್ಲ ಹರಿದಾಸರ ಮೇಲೆ ವ್ಯಾಪಕವಾದ ಪ್ರಭಾವ ಬೀರಿರಬೇಕು.

ಮಧ್ವಾಚಾರ್ಯರ ತಾತ್ಪರ್ಯ ನಿರ್ಣಯವನ್ನು ಅನುಸರಿಸಿ ಉಡುಪಿ ಪೇಜಾವರ ಮಠದ ಶ್ರೀವಿಜಯಧ್ವಜ ತೀರ್ಥರು ಶ್ರೀಮದ್ಭಾಗವತಕ್ಕೆ ‘ಪದರತ್ನಾವಳಿ’ ಎಂಬ ವಿಸ್ತಾರವಾದ ವ್ಯಾಖ್ಯಾನವನ್ನು ರಚಿಸಿದ್ದು, ಇದು **‘ವಿಜಯಧ್ವಜೀಯ’** ಎಂಬ ಹೆಸರಿನಿಂದ ಪ್ರಖ್ಯಾತವಾಗಿದೆ. ಸಮಗ್ರವೂ ಸುವಿಸ್ತೃತವೂ ಆದ ಈ ವ್ಯಾಖ್ಯಾನವು ಬಹಳ ಪ್ರಸಿದ್ಧವಾಗಿದೆ. ಇವರು ಕ್ರಿ.ಶ.೧೪೨೮ರಲ್ಲಿ ಕಾಲವಾಗುವ ಹೊತ್ತಿಗೆ, ಶ್ರೀಪಾದರಾಜರು ೨೨ ವರ್ಷ ವಯಸ್ಸಿನವರಾಗಿದ್ದರು. ಈ ಭಾಗವತಪರಿಸರವು ಸಹಜವಾಗಿಯೇ ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಪುರಂದರದಾಸರು ಹಾಗೂ ಕನಕದಾಸರಿಗೆ; ಅಂದರೆ ಮೊದಲ ಕಾಲಘಟ್ಟದ ಹರಿದಾಸರಿಗೆ ಪ್ರೇರಕವಾಗಿದ್ದುದನ್ನು ಗುರುತಿಸಬಹುದಾಗಿದೆ.

ವ್ಯಾಸರಾಯರ ಕಿರಿಯ ಸಮಕಾಲೀನರಾದ, ಅವರ ವಿದ್ಯಾಪರಂಪರೆಯ ಪ್ರಶಿಷ್ಯರಾದ ಸುಧೀಂದ್ರ ತೀರ್ಥರು (ರಾಘವೇಂದ್ರಸ್ವಾಮಿಗಳ ಗುರುಗಳು) ಭಾಗವತ ದ್ವಿತೀಯಸ್ಕಂಧ ಹಾಗೂ ಏಕಾದಶ ಸ್ಕಂಧಗಳಿಗೆ ವಿಸ್ತಾರವಾದ ಪ್ರೌಢವಾದ ವ್ಯಾಖ್ಯಾನವನ್ನು ರಚಿಸಿದ್ದಾರೆ. ಸರಿಸುಮಾರು ಅದೇ ಕಾಲದಲ್ಲಿ ‘ಯಾದುಪತ್ಯ’[೬] ಹಾಗೂ ‘ಶ್ರೀನಿವಾಸ ತೀರ್ಥೀಯ’ ಎಂಬ ಮತ್ತೆರಡು ವ್ಯಾಖ್ಯಾನಗಳು ಕಂಡುಬರುತ್ತವೆ. ಅವರ ಸಮಕಾಲೀನರಾದ ಪ್ರಸನ್ನ ವೆಂಕಟದಾಸರು ಭಾಗವತ ದಶಮಸ್ಕಂಧವನ್ನು ಕನ್ನಡ ಕೀರ್ತನೆಗಳನ್ನಾಗಿ ರೂಪಾಂತರಿಸಿದ್ದಾರೆ.

ಗೋಪಾಲದಾಸರು ಹಾಗೂ ಜಗನ್ನಾಥದಾಸರ ಕಾಲದಲ್ಲಿ ಇದ್ದ, ಸ್ವತಃ ಹರಿದಾಸರಾದ ವ್ಯಾಸ ತತ್ವಜ್ಞತೀರ್ಥರು (ವಾಸುದೇವವಿಠಲರು) ಭಾಗವತ ಸಪ್ತಮ ಸ್ಕಂಧಕ್ಕೆ ‘ಮಂದನಂದಿನೀ’ ಎಂಬ ವ್ಯಾಖ್ಯಾನವನ್ನು ರಚಿಸಿದ್ದಾರೆ. ಇವರ ವಿದ್ಯಾಶಿಷ್ಯರಾದ ಮೂದನೂರಿನ ವಿಷ್ಣುತೀರ್ಥರು ಅವಧೂತ ಶಿರೋಮಣಿಗಳೆನಿಸಿ (ಹತ್ತಾರು ವರ್ಷ ನದೀ ತೀರದಲ್ಲಿ ಪಾಠ-ಪ್ರವಚನ ನಿರತರಾಗಿದ್ದು) ‘ಶ್ರೀ ಮದ್ಭಾಗವತ

ಸಾರೋದ್ಧಾರ' ಎಂಬ ವ್ಯಾಖ್ಯಾನವನ್ನೂ, 'ಭಾಗವತ ಧರ್ಮಸ್ತೋತ್ರ' ಮುಂತಾದ ಇತರ ಕೃತಿಗಳನ್ನೂ ರಚಿಸಿರುತ್ತಾರೆ. ಇದೇ ಕಾಲದ ಸತ್ಯಧರ್ಮತೀರ್ಥರ ಭಾಗವತ ವ್ಯಾಖ್ಯಾನವೂ ಪ್ರಸಿದ್ಧವಾಗಿದೆ.

ಹೀಗೆ ಹರಿದಾಸ ಪರಂಪರೆಯ ಪ್ರತಿಘಟ್ಟದಲ್ಲೂ ಕನ್ನಡ ಕೀರ್ತನೆಗಳ ರಚನೆಗೆ ಸಮಸಮವಾಗಿ ಭಾಗವತ ಗ್ರಂಥದ ಋಣ ಮತ್ತು ವೃದ್ಧಿಯ ಕಾರ್ಯಗಳು ಸಂಸ್ಕೃತ ಮಾಧ್ಯಮದಲ್ಲೂ ನಡೆದಿದ್ದು ಈ ಚಟುವಟಿಕೆಗಳು ನಂತರದ ಹರಿದಾಸರ ಮೇಲೆ ಪ್ರಭಾವ ಬೀರಬಲ್ಲ ಭಾಗವತ ಪರಿಸರವನ್ನು ನಿರ್ಮಿಸುತ್ತ ಬಂದಿರುವುದನ್ನು ಗುರುತಿಸಬಹುದು.

ಶ್ರೀಮದ್ಭಾಗವತಕ್ಕೆ ಶ್ರೀಧರಸ್ವಾಮಿಗಳ 'ಭಾವಾರ್ಥ ದೀಪಿಕ'(ಅದ್ವೈತ); ವೀರರಾಘವಾಚಾರ್ಯರ 'ಭಾಗವತ ಚಂದ್ರಿಕಾ'(ವಿಶಿಷ್ಟಾದ್ವೈತ); ಶ್ರೀಶುಕದೇವನ 'ಸಿದ್ಧಾಂತ ದೀಪಿಕಾ'(ಭಾಗವತ ಮತ); ವಲ್ಲಭಾಚಾರ್ಯರ 'ಸುಭೋಧಿನೀ'(ವಲ್ಲಭಮತ); ರಾಧಾರಮಣರ 'ದೀಪಿನೀ', ಗೋಸ್ವಾಮಿಯ 'ಕ್ರಮಸಂದರ್ಭ' ವಿಶ್ವನಾಥ ಚಕ್ರವರ್ತಿಯ 'ಸಾರಾರ್ಥದರ್ಶಿನೀ' ಧನಪತಿಸೂರಿಯ 'ಗೂಢಾರ್ಥ ದೀಪಿಕಾ' ಮುಂತಾದ ಎಲ್ಲ ಮತಗಳ ಹಿನ್ನೆಲೆಯಲ್ಲಿ ಬಂದ ಹತ್ತಾರು ಸಂಸ್ಕೃತ ವ್ಯಾಖ್ಯಾನಗಳಿದ್ದವು.

ಶ್ರೀಮದ್ಭಾಗವತವನ್ನು ತಮ್ಮ ತಮ್ಮ ಪ್ರಾದೇಶಿಕ ಭಾಷೆಗಳಲ್ಲಿ ಸಮಗ್ರವಾಗಿ ಅನುವಾದಿಸುವ ಪ್ರಯತ್ನಗಳು ನಡೆಯುತ್ತಿದ್ದ ಕಾಲವದು. ಗೋದಾದೇವಿಯು ತಮಿಳಿನಲ್ಲಿ 'ತಿರುಪ್ಪಾವೈ' ಎಂಬ ತಮಿಳು ಭಾಗವತವನ್ನೂ; ಪೋತನ ಕವಿಯು(೧೫ನೇ ಶತಮಾನ) 'ಶ್ರೀಮದಾಂಧ್ರ ಭಾಗವತಮು' ಗ್ರಂಥವನ್ನೂ; ಸಂತ ಏಕನಾಥ ಕವಿಯು(೧೫೦೦) 'ಮರಾಠಿ ಭಾಗವತ'ವನ್ನೂ; ನಿತ್ಯಾತ್ಮ ಶುಕಯೋಗಿ ಎಂಬ ಹೆಸರುಳ್ಳ ಚಾಟುವಿಠಲನಾಥನು(೧೫೯೯) 'ಕನ್ನಡ ಭಾಗವತ'ವನ್ನೂ; ವಿಷ್ಣು ತುಂಗಕವಿಯು(೧೬೩೬)ತುಳುವಿನಲ್ಲಿ 'ಶ್ರೀಭಾಗವತೋ' ಗ್ರಂಥವನ್ನೂ; ಕೇರಳದ ತುಂಜತ್ತು ರಾಮಾನುಜನ್ ಎಟುತ್ತಚ್ಚನು(೧೬ನೇ ಶತಮಾನ) 'ಮಲಯಾಳಂ ಭಾಗವತ'ವನ್ನೂ ರಚಿಸಿದ್ದಾರೆ. ಈ ಚಟುವಟಿಕೆಗಳು ಆಯಾಕಾಲದ ಹರಿದಾಸರಿಗೆ ಪರೋಕ್ಷವಾಗಿ ಪ್ರೇರಕವಾಗಿರಬೇಕು.

## ೪.೨. ಹರಿದಾಸರು : ಭಾಗವತ ಪ್ರಜ್ಞೆ

ಹರಿದಾಸರು ವೇದ, ಉಪನಿಷತ್ತು ಇತರ ಪುರಾಣಗಳು, ಪಂಚರಾತ್ರ, ರಾಮಾಯಣ, ಮಹಾಭಾರತಗಳನ್ನು ತುಂಬುಹೃದಯದಿಂದ ಗೌರವಿಸುವವರಾದರೂ ಶ್ರೀಮದ್ಭಾಗವತಕ್ಕೆ ಅಗ್ರಸ್ಥಾನವನ್ನು ನೀಡಿದ್ದಾರೆ. ಈ ಗ್ರಂಥದ ಪಠಣ ಪಾರಾಯಣಾದಿಗಳಿಂದ ಅಪರೋಕ್ಷದಲ್ಲಿ ಶ್ರೀಹರಿಯ ದರ್ಶನವಾಗಿ ಅವನ ಅನುಗ್ರಹವು ಪ್ರಾಪ್ತವಾಗುವುದೆಂದು ಅವರ ಅಚಲ ವಿಶ್ವಾಸ.

ಏಳು ದಿನವು ಪರೀಕ್ಷಿತನು ವೇಳೆಯರಿತು ಹರಿಯ ಕಥೆಯ |
ಕೇಳಿ ಮುಕ್ತನಾದ ಮೇಲೆ ಕೇಳಿದ ಕಥೆಯ ಕೇಳಬೇಕು ||

ಎರಡು ಘಳಿಗೆ ಖಟ್ವಾಂಗರಾಯ ಕರಣಪುಟದಿ ಕೃಷ್ಣನ ಕಥೆಯ
ಸ್ಮರಿಸಿ ಮುಕ್ತನಾದ ಮೇಲೆ ನಿರುತ ಕಥೆಯ ಕೇಳಬೇಕು ||
(ಲಾಭವಹುದು ಹರಿಕಥಾಮೃತ)

ಎಂಬ ಮಾತುಗಳು ವ್ಯಾಸರಾಯರ ಭಾಗವತಾಸಕ್ತಿಯನ್ನೂ ಶ್ರವಣದ ಭಾಗವತ ಪುರಾಣದ ಪುನರಾವೃತ್ತಿಯ ಅಗತ್ಯವನ್ನೂ ತಿಳಿಸುತ್ತವೆ.

'ಅನುದಿನವು ಶ್ರವಣ ಮನನಾದಿ ಸಾಧನ ಮಾಡೊ ಇನ್ನು ಸಂಶಯ ವೇತಕೋ' ಎಂಬ ಕೀರ್ತನೆಯಲ್ಲಿ ವಾದಿರಾಜರು 'ಭಾಗವತ ಶಾಸ್ತ್ರವೇ ಬಹುಭಾಗ್ಯವೆಂತೆಂದು ಭಾಹ ಶಿರದಲಿ ವಹಿಸಲೋ' ಎಂದು ಸವಾಲು ಹಾಕುತ್ತಾರೆ. ಎಂದರೆ ಭಾಗವತವೇ ಭಕ್ತಜನರ ಪಾಲಿಗೆ ಬಹುದೊಡ್ಡ ಭಾಗ್ಯವೆಂದೂ ಈ ಮಾತನ್ನು ಸಮರ್ಥಿಸಲು ತಾವು ಬಹುಭಾರವನ್ನು ಧರಿಸುವ 'ದಿವ್ಯ'ವನ್ನೆದುರಿಸಲು ಸಿದ್ಧರಾಗಿರುವುದಾಗಿಯೂ ಹೇಳುತ್ತಾರೆ. ಇಲ್ಲಿ ಭಾಗವತವನ್ನು ಕತೆ-ಪುರಾಣ ಎಂದು ಕರೆಯದೆ **'ಶಾಸ್ತ್ರ'** ಎಂದು ಉಲ್ಲೇಖಿಸಿರುವುದು ಹರಿದಾಸರ ಭಾಗವತ ಪ್ರಜ್ಞೆಯ ವಿಶಿಷ್ಟತೆಯನ್ನು ಸೂಚಿಸುತ್ತದೆ.

ಭವಮೋಚಕ ಭಾಗವತ ಶಾಸ್ತ್ರವ |
ಅವನೀಶಗೆ ಪೇಳ್ದವನೀನಲ್ಲವೆ ||
(ಶಿವನೇ ನಾನಿನ್ನ ಸೇವಕನಯ್ಯ)

ಎಂಬ ಶ್ರೀದವಿಠ್ಠಲದಾಸರ ಕೀರ್ತನೆಯ ಸಾಲುಗಳಲ್ಲೂ ಭಾಗವತವನ್ನು ಶಾಸ್ತ್ರವೆಂದೇ ತಿಳಿಯಲಾಗಿದೆ. 'ಭಕ್ತ್ಯಾ ಭಾಗವತಂ ಶಾಸ್ತ್ರಂ' ಎಂಬ ಮಾತು ಚಲಾವಣೆಯಲ್ಲಿದೆ. ಹೀಗಾಗಿ ಹರಿದಾಸ ಪರಿಸರದಲ್ಲಿ ಭಾಗವತವನ್ನು ಕೇವಲ ಮನರಂಜಕವಾದ ಸೃಜನಶೀಲ ಕಾವ್ಯವನ್ನಾಗಿ ಗ್ರಹಿಸದೆ; ಭಕ್ತಿಯ ಸ್ವರೂಪ, ಲಕ್ಷಣ ಹಾಗೂ ಮೌಲ್ಯಗಳನ್ನು ವಿವರಿಸುವ ಶಾಸ್ತ್ರಗ್ರಂಥವನ್ನಾಗಿ 'ವಿಷ್ಣುಭಕ್ತಿಯ ವಿಶ್ವಕೋಶ'ವನ್ನಾಗಿ ಪರಿಭಾವಿಸುವ ದೃಷ್ಟಿ ಸ್ಪಷ್ಟವಾಗುತ್ತದೆ.

ಪುರಂದರದಾಸರು 'ವಿಧಾತೃದೇವತೆಗಳೆಲ್ಲ ವಿಷ್ಣುವಿನ ಹಿಂದೆ' ಎಂಬ ಕೀರ್ತನೆಯಲ್ಲಿ 'ಪ್ರಕಟ ಗ್ರಂಥಗಳೆಲ್ಲ ಭಾಗವತದ ಹಿಂದೆ'[2] ಎಂಬ ಉದ್ಗಾರವನ್ನೆತ್ತಿದ್ದಾರೆ. ಈ ಮಾತುಗಳಲ್ಲಿ ಉಳಿದ ಯಾವುದೇ ಗ್ರಂಥಗಳ ತಿಳುವಳಿಕೆಗಿಂತ ಭಾಗವತದ ಶ್ರವಣ-ಮನನಗಳು ಕೇಳುಗನ ಸಂಸ್ಕಾರವನ್ನೇ ಬದಲಾಯಿಸಬಲ್ಲವು ಎಂಬ ಅಭಿಪ್ರಾಯವಿರುವಂತೆ ಕಂಡುಬರುತ್ತದೆ.

'ಪರಮಭಾಗವತರು ಹರಿಕಥೆಪೇಳಲು
ಪರಮಭಕುತಿಯಲಿ ಕೇಳುತಿದ್ದೆ
(ಪಾಪೋಸು ಪೋದುವಲ್ಲ)

ಎಂಬ ಪುರಂದರರ ನಿರೂಪಣೆಯಲ್ಲಿ 'ಕತೆ ಕೇಳುವಾಗ ಯಾರೋ ತಮ್ಮ ಪಾದರಕ್ಷೆ ಕದ್ದರು' ಎಂಬುದನ್ನು

ಚಮತ್ಕಾರದಿಂದ ಸೂಚಿಸಿದಂತೆ ಕಂಡುಬಂದರೂ ಅದೇ ವಿವಕ್ಷಿತಾರ್ಥವಲ್ಲ. ಇಲ್ಲಿ, 'ಭಾಗವತ ಶ್ರವಣದಿಂದ ಪಾಪಗಳು ಸರ್ವ ನಾಶವಾಗುತ್ತವೆ' ಎಂದು ಹೇಳುವುದೇ ಅವರ ಮುಖ್ಯ ಉದ್ದೇಶವಾಗಿದೆ.

ಸಂತತಿಯಪ್ಪುದು ರಾಮಾಯಣವ ಕೇಳಲು
ಸಕಲ ಪಾಪಹರವು ಭಾರತ ಕೇಳಲು
ತಂತು ಮಾತ್ರವೆ ವಿಷ್ಣು ಪುರಾಣವ ಕೇಳಲು
ತತ್ವ ವಿವೇಕವು ಬಾಹೋದು
ಅಂತರವರಿತು ಭಾಗವತ ಕೇಳಲು
ಆಹೋದೈ ಜ್ಞಾನ ಭಕ್ತಿ ವೈರಾಗ್ಯವು
ಸಂತತ ಪುರಂದರ ವಿಠಲನ ಸಂಕೀರ್ತನೆ ಮಾಡಲು
ಸಕಲವು ಬಾಹೋದು ಸಾಯುಜ್ಯವು

ಈ ಉಗಾಭೋಗವು ಭಾಗವತ ಶ್ರವಣದ ಫಲವನ್ನು ಉಲ್ಲೇಖಿಸುವ ಜೊತೆ ಜೊತೆಗೆ ಹರಿದಾಸರ ಭಾಗವತ ಪ್ರಜ್ಞೆಯ ದೃಷ್ಟಿಕೋನವನ್ನು ಸ್ಪಷ್ಟಪಡಿಸುತ್ತದೆ. ಭಾಗವತ ಪುರಾಣವನ್ನು ಚೆನ್ನಾಗಿ ಕೇಳಿದ ಮೇಲೆ ಜ್ಞಾನ-ಭಕ್ತಿ-ವೈರಾಗ್ಯಗಳ ವಿನಃ ಬೇರೆ ಯಾವುದೇ ಕಾಮನೆಗಳು ಉಳಿಯುವುದಿಲ್ಲ ಮತ್ತು ಉಳಿಯಬಾರದೆಂಬುದನ್ನು ಧ್ವನಿಸುವ ಈ ಸಾಲುಗಳು 'ನಿಷ್ಕಾಮ ಭಕ್ತಿ'ಯ ಪರಮಾದರ್ಶವನ್ನು ಸಾರುತ್ತವೆ. ಅಂತರಾರ್ಥವನ್ನು ತಿಳಿಯದೆ ಯಾಂತ್ರಿಕವಾಗಿ ಕೇಳಿದರೆ ಆ ಫಲಗಳು ದೊರೆಯಲಾರವು ಎಂಬುದನ್ನೂ ಇಲ್ಲಿ ಸ್ಪಷ್ಟಪಡಿಸಲಾಗಿದೆ.

ಹ್ಯಾಂಗೆ ನೀ ದಾಸನಾದೆ ಪ್ರಾಣಿ |ಪ|
ಹ್ಯಾಂಗೆ ನೀ ದಾಸನಾದೆ ಹೀಂಗೆ ಸಂಸಾರದೊಳು
ಮಂಗನಂದದಲಿ ಭವ ಭಂಗವ ಪಡುವವನು
*　*　*　*
ವೇದಶಾಸ್ತ್ರಗಳ ಮೋದದಿಂದೋದದೆ
ಬಾದರಾಯಣಕೃತ ಭಾಗವತ ಕೇಳದೆ

(ಕನಕದಾಸರು)

ಹರಿದಾಸನಾಗಲು ಕೇವಲ ಬಾಹ್ಯ ಚಿಹ್ನೆಗಳ ವೇಷಕಟ್ಟಿದರೆ ಸಾಲದು. ಸಂಸಾರಾವಸ್ಥೆಯಲ್ಲೂ ನಿಶ್ಚಂಚಲನಾಗಿ ಇರಬೇಕು. ಈ ಸ್ಥಿತಪ್ರಜ್ಞತೆಯನ್ನು ಸಂಪಾದಿಸಲು ವೇದಶಾಸ್ತ್ರಾಧ್ಯಯನದಂತೆಯೇ **'ಭಾಗವತ ಶ್ರವಣವೂ'** ಅನಿವಾರ್ಯವೆನ್ನುತ್ತಾರೆ, ಕನಕದಾಸರು. ಅವರ ಪ್ರಕಾರ ಭಾಗವತ ಕೇಳದವನು ಹರಿದಾಸನೆನಿಸಿಕೊಳ್ಳಲು ಅರ್ಹನಾಗಲಾರ. ಭಾಗವತ ದಶಮಸ್ಕಂಧವನ್ನು ಕನ್ನಡೀಕರಿಸಿರುವ ಪ್ರಸನ್ನ ವೆಂಕಟದಾಸರ

'ಶ್ರೋತವ್ಯವು ಇದೆ ಮಂತ್ರವ್ಯವು ಇದೆ ಧ್ಯಾತವ್ಯವು ನಮಗೆ
ಪೂತವು ಹರಿಗುಣಗಾಥೆಯು ಮುಕುತಿಯ ಪಾಥೇಯವು ನಮಗೆ'



ಎಂಬ ಎರಡು ಸಾಲುಗಳಲ್ಲಿ ಈ ಭಾಗವತ ಕಥೆಯ ಬಗ್ಗೆ ದಾಸರಿಗಿರುವ ಅಪಾರವಾದ ಗೌರವ ಆದರಗಳು ವ್ಯಕ್ತವಾಗಿದ್ದು ಇದೇ ಭಾವವು ಅವರ ಇತರ ಕೀರ್ತನೆಗಳಲ್ಲೂ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತದೆ. 'ವ್ಯಾಸಪುತ್ರನಾದ ಶುಕಮುನಿಯು ಉಪದೇಶಿಸಿದ ಈ ಗ್ರಂಥವು ದುಷ್ಟರಿಗೆ ರುಚಿಸದು. ಚತುರ್ದಶ ಭುವನಗಳ ಪಾಪಹಾರಿಯಾದ ಭಾಗವತಾಮೃತಪಾನವು ಭಕ್ತರಿಗೆ ಮುಕ್ತಿ ಮಾರ್ಗವಾಗಿದೆ. ಮನನಶೀಲರಿಗೆ ಭಾಗವತದ್ದೇ ಧ್ಯಾನ'ಎಂಬ ಅಭಿಪ್ರಾಯದ ಕೀರ್ತನೆಗಳನ್ನು ರಚಿಸುವಾಗ ಅವರು ಭಾಗವತ ಶ್ಲೋಕಗಳನ್ನು ನೇರವಾಗಿ ಅನುವಾದಿಸಿದ್ದಾರೆ.

ವಿಜಯದಾಸರು 'ಭಾಗವತ ಶ್ರವಣವೇ ಶ್ರವಣವೆನ್ನಿ' ಎಂದು ಘೋಷಿಸಿದ್ದಾರೆ. ಜಗನ್ನಾಥದಾಸರ ಪ್ರಕಾರ ಭಾಗವತ ಗ್ರಂಥದಲ್ಲಿ ಆದರವಿರುವುದೇ ಭಕ್ತನ ಲಕ್ಷಣ. ಅನಾದರವು ಪಾಪಸ್ಥಿತಿಯ ದ್ಯೋತಕ. ಅವರ ಕೀರ್ತನೆಯೊಂದರಲ್ಲಿ 'ಬಾದರಾಯಣಕೃತ ಭಾಗವತ ಕೇಳಲಿಕೆ ಆದರವು ಪುಟ್ಟಲಿಲ್ಲ' ಎಂಬ ಪ್ರವೃತ್ತಿಯು 'ಸಿರಿರಮಣ ತವಚರಣ ದೊರಕುವುದು ಹ್ಯಾಂಗಿನ್ನು ಪರಮಪಾಪಿಷ್ಠ ನಾನು' ಎಂಬ ಕಳವಳಕ್ಕೆ ಕಾರಣವಾಗುತ್ತದೆ.

'ಭಾಗವತದ ಕಥೆಯೇ ಕಥೆಯು
ಮಿಕ್ಕ ಕಾಗಿ ಗುಬ್ಬಿಕಥೆಗಳು ಬರಿವ್ಯಥೆಯು'

ಶ್ರೀವಿದ್ಯಾಪ್ರಸನ್ನ ತೀರ್ಥರ ಈ ಮಾತುಗಳು ಹರಿದಾಸ ಪರಂಪರೆಯ ಭಾಗವತ ಶ್ರದ್ಧೆಯ ನೇರ ನಿದರ್ಶನಗಳಾಗಿವೆ. ಈ ಹಿನ್ನೆಲೆಯಲ್ಲಿ ಹರಿದಾಸರ ಈ ಭಾಗವತ ಪ್ರಜ್ಞೆ ಮತ್ತು ಪರಿಸರಗಳು ಅವರನ್ನು ಪ್ರೇರಿಸಿದ ಬಗೆಯನ್ನು ವಿವೇಚಿಸಬಹುದು.

## ೪.೩. ಹರಿದಾಸರ ಭಾಗವತ ಕೃತಿಗಳ ಹಿನ್ನೆಲೆ

ಹರಿದಾಸ ಪರಂಪರೆಯ ಸುವರ್ಣ ಯುಗವೆಂದೇ ಪ್ರಸಿದ್ಧವಾದ ಮೊದಲ ಘಟದಲ್ಲಿ ಶ್ರೀಪಾದರಾಜರು(೧೪೦೪ ರಿಂದ ೧೫೦೨); ಇವರ ವಿದ್ಯಾಶಿಷ್ಯರಾದ ವ್ಯಾಸರಾಯರು(೧೪೪೭ ರಿಂದ ೧೫೩೯); ಇವರ ವಿದ್ಯಾಶಿಷ್ಯರಾದ ವಾದಿರಾಜರು(೧೪೮೦ ರಿಂದ ೧೬೦೦) ಎಂಬ ಮೂವರು ಯತಿಗಳು ಪ್ರಮುಖರಾಗಿದ್ದಾರೆ. ಇವರು ಅನುಕ್ರವಾಗಿ ವೇದಾದಂತ ವಿದ್ಯೆಯ ಪಾಠ ಪ್ರವಚನ ಪದ್ಧತಿಯನ್ನು ಮುಂದುವರೆಸಿಕೊಂಡು ಬಂದವರಾಗಿದ್ದಾರೆ. ಶ್ರೀವ್ಯಾಸರಾಯರಲ್ಲಿ ಉಪದೇಶ ಪಡೆದ ದಾಸದ್ವಯರಾದ ಪುರಂದರ ದಾಸರು(೧೪೮೪ ರಿಂದ ೧೫೬೪) ಹಾಗೂ ಅವರ ಸಮಕಾಲೀನರಾದ ಕನಕದಾಸರು(೧೫೦೯ ರಿಂದ ೧೬೦೭), ಗೃಹಸ್ಥರಾಗಿದ್ದು ಸಾಂಸಾರಿಕ ಸ್ಥಿತಿಯಲ್ಲೇ ಹರಿದಾಸ್ಯವನ್ನು ಸಿದ್ಧಿಸಿಕೊಂಡವರು. ಈ ಯತಿಗಳು ಸಂಸಾರವನ್ನು ಬಿಟ್ಟಿದ್ದರೂ; ಈ ದಾಸರು ಸಂಸಾರದ ವ್ಯಾಮೋಹವನ್ನು ತ್ಯಜಿಸಿದ್ದರೂ ಮಾನವನ ಬದುಕು ಹಸನಾಗಬೇಕೆಂಬ ಉದಾತ್ತ ಕಳಕಳಿಯನ್ನು ಬಿಟ್ಟಿರಲಿಲ್ಲ.



ಈ ಐವರು ಮಹನೀಯರ ವಿದ್ಯಾ(ಗುರು-ಶಿಷ್ಯ) ಸಂಬಂಧ, ಜೀವನದೃಷ್ಟಿ ಹಾಗೂ ಸ್ಥಾನಮಾನಗಳು, ಅವರ ಕೃತಿಗಳ ವಸ್ತು, ರೂಪ ಮತ್ತು ಆಶಯಗಳನ್ನು ನಿರ್ಧರಿಸುವಲ್ಲಿ ಗಮನಾರ್ಹ ಪರಿಣಾಮ ಬೀರಿರುವುದನ್ನು ಗುರುತಿಸಬಹುದಾಗಿದೆ.

ಇವರೆಲ್ಲರೂ ವಿಷ್ಣುಭಕ್ತ ಮನೆತನಗಳಲ್ಲಿ ಹುಟ್ಟಿ ಬಂದವರು. ಭಾಗವತ ಪುರಾಣವನ್ನು ಬಾಲ್ಯದಿಂದ ಹೇಳಿ, ಕೇಳಿ, ಮನನ ಮಾಡುವ ಪರಿಸರದಲ್ಲೇ ಬಾಳಿ ಬದುಕಿದವರು. ಮೊದಲ ಮೂವರು ಸ್ವತಃ ಪೀಠಾಧಿಪತಿಗಳಾಗಿದ್ದು;(ಜನರ ಒಳಿತಿಗಾಗಿ) ತಾವು ಕಂಡುಕೊಂಡ ಧರ್ಮ-ನೀತಿಗಳನ್ನು ಬೋಧಿಸಿ ಮಾರ್ಗದರ್ಶನ ಮಾಡಬೇಕಾದ ಸಾಂಸ್ಕೃತಿಕ ಜವಾಬ್ದಾರಿ ಹೊತ್ತವರು. ಪುರಂದರ-ಕನಕರು ಹರಿದಾಸ್ಯಕ್ಕಾಗಿ ತಮ್ಮ ಶ್ರೀಮಂತಿಕ ವೈಭವ-ಅಧಿಕಾರಗಳನ್ನು ತೊರೆದರೂ, ಕುಟುಂಬವನ್ನು ನಿರಾಕರಿಸದೆ ಬಾಳುತ್ತ ಸರಳ ಸಾತ್ವಿಕ ಜೀವನದ ಮೂಲಕ ಭಾಗವತದ ಆದರ್ಶವನ್ನು ಅಳವಡಿಸಿಕೊಂಡವರು. ತಮ್ಮ ಅನುಭವಗಳನ್ನು ಹಾಡುಗಳನ್ನಾಗಿ ಹಾಡಿದವರು. ಇವರೆಲ್ಲರೂ ಭಾಗವತ ಪ್ರತಿಪಾದ್ಯನಾದ ಶ್ರೀಕೃಷ್ಣನ ವಿವಿಧ ರೂಪಗಳಾದ ತಿರುಪತಿಯ 'ವೆಂಕಟೇಶ', ಶ್ರೀರಂಗದ 'ರಂಗನಾಥ', ಪಂಢರಾಪುರದ 'ಪಾಂಡುರಂಗ ವಿಠ್ಠಲ' ಹಾಗೂ ಉಡುಪಿಯ 'ಕೃಷ್ಣ'ನ ಆರಾಧಕರಾಗಿದ್ದರು.

ತೀರ್ಥಕ್ಷೇತ್ರ ಯಾತ್ರೆಯ ಅಂಗವಾಗಿ ಸತತ ಸಂಚಾರ ಮಾಡುವಾಗ ದಕ್ಷಿಣ ಭಾರತದ ವಿವಿಧ ಪ್ರದೇಶಗಳ ಜನರು ಇವರನ್ನು ಸಂಧಿಸುತ್ತಿದ್ದರು. ಇವರ ಉಪದೇಶವನ್ನು ಬಯಸುತ್ತಿದ್ದರು. ಕನಕ-ಪುರಂದರರು ಗ್ರಾಮಪ್ರದಕ್ಷಿಣೆಗಾಗಿ ಕೇರಿಕೇರಿಗಳಲ್ಲಿ ಸಂಚರಿಸುವಾಗ ಜನರ ನೇರ ಸಂಪರ್ಕ ಏರ್ಪಡುತ್ತಿತ್ತು. ಕಾಲಿಗೆ ಗೆಜ್ಜೆ, ಕೈಯಲ್ಲಿ ತಂಬೂರಿ, ಚಿಟಿಕೆಗಳನ್ನು ಧರಿಸಿ ಮಧುರ ಕಂಠದಲ್ಲಿ ಹರಿ ಕೀರ್ತನೆಗಳನ್ನು ಹಾಡುವಾಗ; ಆಕರ್ಷಿತರಾಗಿ ನೆರೆಯುತ್ತಿದ್ದ ಜನರಿಗೆ ಜೀವನ ಮೌಲ್ಯಗಳನ್ನು, ಆತ್ಮೀಯವಾಗಿ ತಿಳಿಸಿ ಹೇಳುತ್ತಿದ್ದರು. ಸಿಕ್ಕ ಸ್ವಲ್ಪ ಕಾಲಾವಕಾಶದಲ್ಲಿ ಏಕಕಾಲಕ್ಕೆ ಹರಿಸ್ಮರಣೆ, ಹಾಗು ನೀತಿ ನಿರೂಪಣೆಯನ್ನು ಕೈಗೊಳ್ಳುವ ಅವರ ಹಂಬಲಕ್ಕೆ 'ಭಾಗವತ'ವು ಒಂದು ಸಿದ್ಧ ಆಕರವಾಗಿತ್ತು. ಇದನ್ನು ಅನುಸರಿಸಿ ರಚಿತವಾದ ದಾಸಸಾಹಿತ್ಯವನ್ನು 'ಕಥನಕೇಂದ್ರಿತ ರಚನೆಗಳು' ಹಾಗೂ 'ಕಥನೇತರ ರಚನೆ'ಗಳೆಂದು ವರ್ಗೀಕರಿಸಿಕೊಳ್ಳಬಹುದು. ಕಥನೇತರ ರಚನೆಗಳನ್ನು 'ತತ್ವಪ್ರತಿಪಾದಕ' ಮತ್ತು 'ಮೌಲ್ಯಪ್ರತಿಪಾದಕ' ಕೃತಿಗಳೆಂದು ಮತ್ತೆ ಎರಡು ವರ್ಗಗಳಾಗಿ ವಿಂಗಡಿಸಿಕೊಳ್ಳಬಹುದು. ಈ ವರ್ಗೀಕರಣವು ನಮ್ಮ ಅಧ್ಯಯನದ ಸೌಲಭ್ಯಕ್ಕೆ ಮಾತ್ರ. ವಾಸ್ತವವಾಗಿ ದಾಸರ ಪದಗಳಲ್ಲಿ ಕಥೆ, ತತ್ವ ಮತ್ತು ಮೌಲ್ಯಗಳು ಬೇರ್ಪಡಿಸಲಾರದಷ್ಟು ಅನ್ಯೋನ್ಯವಾಗಿ ಬೆರೆತಿವೆ. ಅಲ್ಲಿಯ ಸಾವಯವ ಶಿಲ್ಪವನ್ನು ಇರುವಂತೆಯೇ ಗ್ರಹಿಸಬೇಕಾಗುತ್ತದೆ. ಕಥಾಪ್ರಧಾನ, ತತ್ವಪ್ರಧಾನ ಮತ್ತು ಮೌಲ್ಯಪ್ರಧಾನ ಎಂಬ ದೃಷ್ಟಿಯಿಂದ ಮಾತ್ರ ಮೇಲಿನ ವರ್ಗೀಕರಣವನ್ನು ಕೈಗೊಳ್ಳಲಾಗಿದೆ. ಇಲ್ಲಿ ಈ ಎಲ್ಲ ಬಗೆಯ ಕೃತಿಗಳ ನಿರ್ಮಾಣಕ್ಕೆ ಕಾರಣಗಳನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

## ಕಥನ ಕೇಂದ್ರಿತ ರಚನೆಗಳು

ಕನ್ನಡ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಹರಿದಾಸ ಪರಂಪರೆಯ ಮೊದಲ ಘಟ್ಟದ ಕಾಲವನ್ನು ಸಮಗ್ರ ಕನ್ನಡ ಕಥಾಯುಗವೆನ್ನಬಹುದು. ಪಂಪಯುಗದ ಕಥಾಪ್ರಧಾನ ಸಾಹಿತ್ಯ ಮಾರ್ಗವನ್ನು ಸಂಪೂರ್ಣವಾಗಿ ನಿರಾಕರಿಸಿ ವಚನಕಾರರು ಕಥೆಯ ಹಂಗಿಲ್ಲದ ಸಾಹಿತ್ಯ ರಚನೆಯ ಪ್ರಯೋಗಗಳನ್ನು ನಡೆಸಿದ್ದರು. ಪುರಾಣನಾಯಕರೊಂದಿಗೆ ತಮ್ಮ ಆಶ್ರಯದಾತರನ್ನು ಸಮೀಕರಿಸುವ ಮೂಲಕ ರಾಜಸತ್ತೆಯ ಪರವಾಗಿ ನಿಲ್ಲುವ ಆಸ್ಥಾನಕವಿ ಪರಂಪರೆಯನ್ನು ಧಿಕ್ಕರಿಸುವ ಉದ್ದೇಶವೋ ಅಥವಾ ವೈಚಾರಿಕತೆಗೆ ಕತೆಯ ಕವಚ ಬೇಕಿಲ್ಲವೆಂಬ ಧೋರಣೆಯೋ ಕಾರಣವಾಗಿ ಕಥಾಧಾರಿತ ಕಾವ್ಯರಚನೆ ವಿರಳಗೊಳ್ಳತೊಡಗಿತ್ತು.

ಆದರೆ ಜನಸಾಮಾನ್ಯರಿಗೆ ಕತೆಬೇಕಿತ್ತು. 'ಚಿಂತಕರ ವಿಚಾರಗಳು ಜನರಿಗೆ ಸಂವಹನಗೊಳ್ಳಲು ತಕ್ಕ ಭಾವಪರಿಸರವನ್ನು ನಿರ್ಮಿಸಲು ಕತೆಗಳು ಅಗತ್ಯ'ವೆಂಬ ವಾಸ್ತವವನ್ನು ತಿಳಿದ ಹರಿಹರ, ರಾಘವಾಂಕರು ವಚನಕಾರರ ಧೋರಣೆಗಿಂತ ಭಿನ್ನರಾಗಿ ನಿಂತು, ಕಾವ್ಯರಚನೆಗೆ ವಸ್ತುವಾಗಿ ಕತೆಗಳನ್ನು ಮತ್ತೆ ಕೈಗೆತ್ತಿ ಕೊಂಡರು.

ವೈಷ್ಣವ ಕತೆಗಳೂ(ಮೌಖಿಕವಾಗಿ) ಸಾಕಷ್ಟು ಪ್ರಸಾರದಲ್ಲಿದ್ದವು. ಸಂಸ್ಕೃತ ಮೂಲ ಶ್ಲೋಕಗಳನ್ನು ರಾಗವಾಗಿ ಓದಿ ಕನ್ನಡದ ಆಡುಮಾತಿನಲ್ಲಿ ಅರ್ಥವನ್ನು ವಿವರಿಸಿ ಹೇಳುವ ಪುರಾಣ ಪ್ರವಚನ ರೂಪದ ಸಮೂಹ ಶಿಕ್ಷಣ ಬಹುಪ್ರಾಚೀನ ಕಾಲದಿಂದಲೂ ನಡೆದುಬಂದಿತ್ತು. ಹೀಗಾಗಿ ರಾಮಾಯಣ, ಮಹಾಭಾರತ ಹಾಗೂ ಭಾಗವತ ಕತೆಗಳು ಭಾರತೀಯರ ಮನಸ್ಸಿನಲ್ಲಿ 'ಸಮೂಹ ಸ್ಮೃತಿ'ಯ ರೂಪದಲ್ಲಿ ಸೇರಿಹೋಗಿದ್ದವು. ಜೈನಕವಿಗಳು ಈ ಕತೆಗಳನ್ನು ತಮ್ಮ ಉದ್ದೇಶಕ್ಕೆ ತಕ್ಕಂತೆ ಬದಲಾಯಿಸಿ ಕೊಂಡಿದ್ದರು. ಹರಿಹರಾದಿ ಕವಿಗಳು ಶೈವಕತೆಗಳನ್ನು ಮಾತ್ರ ಅವಲಂಬಿಸಿದರು. ಒಟ್ಟಾರೆ ಕನ್ನಡ ಸಾಹಿತ್ಯದ ಆರಂಭದ ಕಾಲದಿಂದಲೂ ವೈಷ್ಣವ ಕೃತಿ ರಚನೆಗೆ ಅನುಕೂಲಕರ ಅವಕಾಶ ದೊರೆತಿರಲಿಲ್ಲ. ಇದಕ್ಕೆ ಆಂತರಿಕ ಕಾರಣವೂ ಇದ್ದಿರಬೇಕು.

ವೇದ-ಪುರಾಣ-ಪಂಚರಾತ್ರಾದಿ ಆಗಮಗಳ ಕಾಲದಿಂದಲೂ ದೇವರನ್ನು 'ಸಗುಣ' 'ಸಾಕಾರ'ನೆಂದು ಸ್ತುತಿಸುವ ಕ್ರಮವು ಪ್ರಸಿದ್ಧವಾಗಿತ್ತು. ವೈಷ್ಣವರ ದೈವ ಪರಕಲ್ಪನೆ, ವಿಗ್ರಹಾರಾಧನೆ ಹಾಗೂ ಕಥಾ ನಿರೂಪಣೆಗಳಲ್ಲಿ ಈ ತಾತ್ವಿಕ ನಿಲುವು ಸ್ಪಷ್ಟವಾಗಿ ಕಂಡುಬರುತ್ತದೆ. ಆದರೆ ಕನ್ನಡ ಸಾಹಿತ್ಯೋದಯದ ಹೊತ್ತಿಗೆ ವಿವಿಧ ಮತ ಪಂಥಗಳು ಪ್ರಬಲಿಸಿ ಭಗವಂತನನ್ನು ನಿರ್ಗುಣ-ನಿರಾಕಾರನೆಂದು ಸಾರತೊಡಗಿದಾಗ ವೈದಿಕ-ವೈಷ್ಣವ ಪರಂಪರೆಯ ಭಕ್ತರಿಗೆ, ಅವರ ಸಗುಣ-ಸಾಕಾರ ಉಪಾಸನೆಗೆ; ತಾತ್ವಿಕ ಬೆಂಬಲವಿಲ್ಲದಂತಾಯಿತು. ಇಂತಹ ಗೊಂದಲದ ಮನಃಸ್ಥಿತಿಯು ಸೃಜನಕ್ರಿಯೆಗೆ ತೊಡಕಾಗಿ ಪರಿಣಮಿಸಿರಬೇಕು. ತಮ್ಮತನದ ಅಭಿವ್ಯಕ್ತಿಗೆ ಸೈದ್ಧಾಂತಿಕ ವಿರೋಧದ ಪ್ರತಿಕೂಲ ವಾತಾವರಣವಿದ್ದುದರಿಂದಲೇ ಕನ್ನಡ

ವೈಷ್ಣವ ಭಕ್ತ ಕವಿಗಳು ಚಂಪೂಯುಗ ಮತ್ತು ವಚನಯುಗಗಳಲ್ಲಿ ಕೃತಿರಚನೆಗೆ ಹಿಂಜರಿದಂತೆ ಕಂಡು ಬರುತ್ತದೆ.

ದಾಸರ ಕಾಲಕ್ಕೆ ಈ ಪರಿಸ್ಥಿತಿ ಸುಧಾರಿಸಿತ್ತು. ತಿರುಪತಿ, ಶ್ರೀರಂಗ, ಕರ್ನಾಟಕದ ಪಂಢರಾಪುರ ಹಾಗೂ ಉಡುಪಿಗಳು ಇತರ ಎಲ್ಲ ಕ್ಷೇತ್ರಗಳಿಗಿಂತ ಹೆಚ್ಚು ಪ್ರಸಿದ್ಧಿಪಡೆದವು. ಸಹಜವಾಗಿಯೇ ಮೂರ್ತಿಪೂಜೆ, ಸಗುಣ-ಸಾಕಾರ ವರ್ಣನೆಯ ಪ್ರಾಚೀನ ಪದ್ಧತಿಗಳು ಪುನರಾಂಭವಾದವು. ಕನ್ನಡ ಕವಿಕಾವ್ಯ ವಲಯದಲ್ಲಿ ರುದ್ರಭಟ್ಟನ 'ಜಗನ್ನಾಥ ವಿಜಯ' ಚೌಂಡರಸನ 'ನಳಚರಿತ್ರೆ' ಮೊದಲಾದ ಕೃತಿಗಳು ಕಂಡುಬರ ತೊಡಗಿದ್ದವು. ವೈಷ್ಣವ ಕಥಾಯುಗದ ಪ್ರವರ್ತಕನಾದ ಕುಮಾರವ್ಯಾಸನು 'ಕರ್ಣಾಟ ಭಾರತ ಕಥಾಮಂಜರಿ'ಯನ್ನು ರಚಿಸಿದ ಆಚೀಚಿನ ಕಾಲದಲ್ಲೇ ಹರಿದಾಸರೂ ಕೀರ್ತನೆಗಳನ್ನು ರಚಿಸತೊಡಗಿದ್ದರು.

ದಾಸರ ಕೆಲವು ಕೀರ್ತನೆಗಳಲ್ಲಿ ಜಾನಪದ ನಡೆಯು ಕಂಡುಬರುವುದರಿಂದ ಅವರಿಗೆ ಹಿನ್ನಲೆಯಾಗಿ ವಿಷ್ಣುಸ್ತುತಿ ರೂಪದ ಕನ್ನಡ ಹಾಡುಗಳ ಸ್ಥಳೀಯ ಪರಂಪರೆಯೊಂದು ಇದ್ದಿರಬೇಕೆನಿಸುತ್ತದೆ. ಆದರೆ ಇಂದು ಅನುಪಲಬ್ಧವಾದ ಆ ಹಾಡುಗಳ ಸ್ವರೂಪ ಮತ್ತು ಪ್ರಭಾವಗಳನ್ನು ತಿಳಿಯಲು ಅವಕಾಶವಿಲ್ಲದಂತಾಗಿದೆ. ಕೀರ್ತನೆಗಳ ರೂಪ-ಸತ್ವಗಳಿಗೆ ಸಂಬಂಧಿಸಿದಂತೆ ಹರಿದಾಸ ಸಾಹಿತ್ಯಕ್ಕೆ ಮಧ್ವಾಚಾರ್ಯರ ಸಂಸ್ಕೃತ ದ್ವಾದಶಸ್ತೋತ್ರವು ಸ್ಫೂರ್ತಿಯನ್ನೊದಗಿಸಿದೆ ಎಂಬ ಸಂಗತಿಯನ್ನು ಅನೇಕ ವಿದ್ವಾಂಸರು ಪ್ರಸ್ತಾಪಿಸಿದ್ದಾರೆ.

ಭಗವಂತನ ಆಪಾದ ಮಸ್ತಕ ರೂಪವರ್ಣನೆ, ಸೃಷ್ಟ್ಯಾದ್ಯಷ್ಟ ಕರ್ತೃತ್ವ ಮಹಿಮಾ ಕೇಶವಾದಿ ಭಗವದ್ರೂಪಸ್ತುತಿ, ದಶಾವತಾರಸ್ತುತಿ ಇತ್ಯಾದಿ ವಿಷಯಗಳನ್ನು ರಾಗ-ತಾಳಬದ್ಧ ಬಿಡಿಗೀತೆಗಳ ರೂಪದಲ್ಲಿ ಹಾಡುವ ಕ್ರಮವನ್ನು 'ದ್ವಾದಶ ಸ್ತೋತ್ರ'ದಲ್ಲಿ ಕಾಣುತ್ತೇವೆ. ಮಾಧ್ವಸಮುದಾಯದಲ್ಲಿ ಈ ಕೃತಿಯನ್ನು ನಿತ್ಯವೂ ಭಕ್ತಿಯಿಂದ ಹಾಡುವ ಪದ್ಧತಿಯು ಆಚರಣೆಯಲ್ಲಿತ್ತು. ದ್ವಾದಶಸ್ತೋತ್ರವು ಸಗುಣ ಸಾಕಾರ ಮಾರ್ಗದ ವಿಷ್ಣುಭಕ್ತಿಗೆ ನಿಚ್ಚಳವಾದ ಅಭಿವ್ಯಕ್ತಿ ಮಾದರಿಗಳನ್ನೂ ತಾತ್ವಿಕ ಸಮರ್ಥನೆಯ ನೆಲೆಗಟ್ಟನ್ನೂ ನಿರ್ಮಿಸಿಕೊಟ್ಟಿತು. ದ್ವಾದಶ ಸ್ತೋತ್ರದ ಹಾಡುವಿಕೆಯಲ್ಲಿ ಮತ್ತೆ ಮತ್ತೆ ಕೇಳಿಬರುವ :

೧. 'ಶುಭತಮ ಕಥಾಶಯ ಪರಮಸದೋದಿತ ಜಗದೇಕ ಕಾರಣ ರಾಮರಮಾರಮಣ'

(ಭಗವಂತನು ಶುಭತಮವಾದ ಕಥೆಗಳಿಗೆ ವಸ್ತುವಾಗಬಲ್ಲ ಜಗತ್ಕಾರಣಾದಿ ಚಾರಿತ್ರ್ಯವುಳ್ಳವನು)

೨. 'ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯಮೇತೇ' (ಕರುಣಾಪೂರ್ಣನೇ, ವರಪ್ರದನೇ, ನನಗೆ ನಿನ್ನ ಚರಿತ್ರೆಗಳನ್ನು ನೆನಪಿಸು)

ಮುಂತಾದ ಪಲ್ಲವಿಗಳು ಭಗವಂತನ ಮಹಿಮೆಗಳನ್ನು(ಬಿಡಿ ಹಾಡುಗಳು ರೂಪದಲ್ಲಿ ರಚಿಸಿ ಹಾಡುವ ಮೂಲಕ) ಭಕ್ತರಿಗೆ ನೆನಪಿಸುವ ಕಾರ್ಯಗಳಿಗೆ ಪ್ರೇರಕವಾಗಿರುವಂತೆ ಕಂಡುಬರುತ್ತವೆ. ದ್ವಾದಶಸ್ತೋತ್ರದ

ಆದರ್ಶವನ್ನು ಕನ್ನಡ ಮಾಧ್ಯಮದಲ್ಲಿ ಸಾಧಿಸುವಲ್ಲಿ ವಸ್ತುವಿಗಾಗಿ ಹರಿದಾಸರು ಭಗವಂತನ ಚರಿತ್ರೆ ಹಾಗೂ ಮಹಿಮೆಗಳು ಆಕರವಾದ 'ಶ್ರೀಮದ್ಭಾಗತ'ವನ್ನೇ ಆಶ್ರಯಿಸಿದರು. ತಮ್ಮ ಬಹುಪಾಲು ಕೀರ್ತನೆಗಳಲ್ಲೂ ಭಾಗವತದ ಕತೆ-ತತ್ವಮೌಲ್ಯಗಳನ್ನು ಅಳವಡಿಸಿ ಹಾಡಿದರು.

ದಾಸರು ಭಾಗವತವನ್ನೇ ಹೆಚ್ಚಾಗಿ ಬಳಸಲು ಅವರ ಕೆಲವು ಪೂಜಾ ವಿಧಾನಗಳೂ ಕಾರಣವಾಗಿದ್ದಿರಬೇಕು. ಉದಾ : ಶ್ರೀಪಾದರಾಜರ ಪರಂಪರಾಗತ ಆರಾಧ್ಯದೈವ ಶಂಖ-ಚಕ್ರಧರಿಸಿ ಕೊಳಲೂದುವ ಗೋಪೀನಾಥನಾದರೆ ಅವರಿಗೆ ಪಂಢರಾಪುರದಲ್ಲಿ ಒಲಿದು ಬಂದ ಇಷ್ಟದೈವ -ರುಕ್ಮಿಣೀ ಸತ್ಯಭಾಮಾ ಸಮೇತ ರಂಗವಿಠ್ಠಲ. ಹೀಗಾಗಿ ಕೃಷ್ಣಭಕ್ತಿ ಹಾಗು ಕೃಷ್ಣಸ್ತುತಿಗಳು ಅವರ ಬದುಕಿನ ಅವಿಭಾಜ್ಯ ಅಂಗಗಳಾಗಿದ್ದವು. ಆದ್ದರಿಂದಲೇ ಅವರು ವೇಣುಗೀತೆ, ಗೋಪಿಗೀತೆ, ಭ್ರಮರಗೀತೆಗಳಲ್ಲದೆ ಇತರ ಅನೇಕ ಕೀರ್ತನೆಗಳಲ್ಲಿ ಕೃಷ್ಣನ ಲೀಲಾವಿಲಾಸಗಳನ್ನು ರಚಿಸಿ ಹಾಡುವ ಸಂದರ್ಭ ಒದಗಿಬಂತು. ಅವರು ತಮ್ಮ ಸಂಚಾರ ಕ್ರಮದಲ್ಲಿ ನ್ಯಾಮತಿಗೆ ಹೋದಾಗ ಶ್ರೀ ಲಕ್ಷ್ಮೀನರಸಿಂಹ ದೇವರ ಮಹಿಮೆಯನ್ನು ಹೇಳಬೇಕಾಗಿದ್ದು 'ಶ್ರೀಲಕ್ಷ್ಮೀನೃಸಿಂಹ ಪ್ರಾದುರ್ಭಾವ ದಂಡಕ' ರಚನೆಯಿಂದ ಆ ಉದ್ದೇಶವನ್ನು ಪೂರೈಸಿರಬಹುದು. ಈ ಎಲ್ಲ ಕೃತಿಗಳಿಗೆ ವಸ್ತುವು ಶ್ರೀಮದ್ಭಾಗವತದಲ್ಲೇ ಇರುವುದರಿಂದ ಅದನ್ನೇ ಆಕರವನ್ನಾಗಿ ಬಳಸಿದ್ದಾರೆ. ಅಲ್ಲಿಯ ಭಾವಗಳನ್ನು ಕನ್ನಡ ಕೀರ್ತನೆಗಳಲ್ಲಿ ಹಲವು ರೀತಿಯಿಂದ ಬೆಳೆಸಿದ್ದಾರೆ.

ಶ್ರೀಪಾದರಾಜರ ಆದರ್ಶವನ್ನು ಮೈಗೂಡಿಸಿಕೊಂಡು ಬೆಳೆದ ವ್ಯಾಸತೀರ್ಥರ ಸಂದರ್ಭವೂ ಇದಕ್ಕಿಂತ ಬೇರೆಯೇನಲ್ಲ. ಅವರ ಪರಂಪರಾಗತ ಉಪಾಸ್ಯಮೂರ್ತಿ ಮೂಲ ಗೋಪಾಲಕೃಷ್ಣ ಹಾಗೂ ಅವರಿಗೆ ಒಲಿದು ನಲಿದ ಮೂರ್ತಿ ವೇಣುಗೋಪಾಲಕೃಷ್ಣನಾದ್ದರಿಂದ ಅವರಲ್ಲೂ ಭಾಗವತ ಪುರಾಣದ ಕೃಷ್ಣ ಮಹಿಮಾ ಸಂಕೀರ್ತನವು ಮುಂದುವರಿದು ಬರಲು ಸೂಕ್ತ ವಾತಾವರಣವಿತ್ತು. '

ವಾದಿರಾಜರಂತೂ ಉಡುಪಿಕೃಷ್ಣನ ಪೂಜಕರು. ಪರ್ಯಾಯ ವ್ಯವಸ್ಥೆಯನ್ನು ಪುನಾರಚಿಸಿದ ನೇತಾರರು. ಸ್ವತಃ ಕೃಷ್ಣಭಕ್ತರಾದ ಅವರಿಗೆ ವ್ಯಾಸರಾಯರ ಸಾಮೀಪ್ಯದಿಂದ ಮತ್ತಷ್ಟು ಉತ್ಸಾಹ ಲಭಿಸಿರಬಹುದು. ಭೂವರಾಹ, ಹಯಗ್ರೀವ, ತ್ರಿವಿಕ್ರಮ ಮೊದಲಾದ ಭಗವನ್ಮೂರ್ತಿಗಳ ನಿತ್ಯಪೂಜಾನಿರತರಾದ ಅವರಿಗೆ ತತ್ಸಂಬಂಧವಾದ ಮಹಿಮೆಗಳನ್ನು ವರ್ಣಿಸುವ ಅಗತ್ಯ ಒದಗಿಬಂದಿರಬೇಕು.

ಅಂದಿನಕಾಲದ ಪುಣೆಯ ವಿದ್ವಾಂಸರು ಸಂಸ್ಕೃತ ಕಾವ್ಯಗಳಲ್ಲಿ ಮಾಘನ 'ಶಿಶುಪಾಲವಧೆ'ಗೆ ಅಗ್ರ ಗೌರವ ಸಲ್ಲಿಸ ಹೊರಟಾಗ ಕೇವಲ ಹತ್ತೊಂಬತ್ತು ದಿನಗಳಲ್ಲಿ 'ರುಕ್ಮಿಣೀಶ ವಿಜಯ'ವೆಂಬ ಪ್ರೌಢ ಸುಂದರ ಸಂಸ್ಕೃತ ಕಾವ್ಯವನ್ನು ರಚಿಸಿ ಸನ್ಮಾನಿತರಾದವರು ವಾದಿರಾಜರು. ರುಕ್ಮಿಣೀಶ ವಿಜಯವು ಭಾಗವತ ದಶಮಸ್ಕಂಧ ಪೂರ್ವಾರ್ಧಕ್ಕೆ ಋಣಿಯಾದರೂ; ಮೂಲವನ್ನು ಎಲ್ಲ ಅರ್ಥದಲ್ಲೂ 'ವೃದ್ಧಿ'ಗೊಳಿಸಿ ರಚಿಸಿದ ಅದ್ಭುತ ಕಾವ್ಯ.

ಕವಿಕುಲತಿಲಕರೆಂದೇ ಖ್ಯಾತರಾದ ವಾದಿರಾಜರು ಸಂಸ್ಕೃತಬಾರದ ಜನ-ಸಾಮಾನ್ಯರಿಗಾಗಿ ತಮ್ಮ 'ರುಕ್ಮಿಣೀಶ ವಿಜಯ' ಪ್ರೌಢ ಸಂಸ್ಕೃತ ಕಾವ್ಯವನ್ನು 'ಶ್ರೀಕೃಷ್ಣ ಬಾಲಲೀಲೆ' ಎಂಬ ಸರಳ ದೀರ್ಘ ಕನ್ನಡ ಕಥನ ಕವನವನ್ನಾಗಿ ಪುನಾರಚಿಸಿದ್ದಾರೆ.[೯] ಭೋಗ ಷಟ್ಪದಿಯ ನಡೆಯಲ್ಲಿ ಸಾಗುವ ದ್ವಿಪದಿಗಳ ಈ ಅಚ್ಚದೇಸೀ ಬಂಧವು(ವಾದಿರಾಜ ಕೃತವಲ್ಲವೆಂದು ಅನುಮಾನಿಸುವಷ್ಟು) ಸರಳ ರೂಪದಲ್ಲಿದೆ.

ಗಜೇಂದ್ರಮೋಕ್ಷ ಉದಯರಾಗ, ಲಕ್ಷ್ಮೀಶೋಭಾನೆ, ಭ್ರಮರಗೀತೆ, ವಿರಾಟ ರೂಪಧ್ಯಾನ, ವೈಕುಂಠ ವರ್ಣನೆ, ಸ್ವಪ್ನಪದಗಳಲ್ಲದೆ ಅನೇಕ ಭಾಗವತಾಧಾರಿತ ಕೀರ್ತನೆಗಳನ್ನು ರಚಿಸಿದ ವಾದಿರಾಜರು ಉತ್ತರಕಾಲೀನ ಹರಿದಾಸರಿಗೆ ಅನೇಕ ವಿಧಗಳಲ್ಲಿ ಪ್ರೇರಕಶಕ್ತಿಯಾಗಿದ್ದಾರೆ.

ಪುರಂದರದಾಸರು ರಚಿಸಿರುವ ಸುಧಾಮ ಚರಿತ್ರೆ ಹಾಡು, ನರಸಿಂಹ ಚರಿತ್ರೆ ಹಾಡು, ವಾಮನ ಹುಟ್ಟಿನ ಕತೆ, ಗಜೇಂದ್ರಮೋಕ್ಷ, 'ಅಜಾಮಿಳಚರಿತ್ರೆ'ಗಳು; ಕನಕದಾಸರ ಮೋಹನ ತರಂಗಿಣಿ, ಹರಿಭಕ್ತಿಸಾರ, ನರಸಿಂಹಚರಿತ್ರೆಯ ರೂಪದ ಉದಯರಾಗ-ಮುಂತಾದ ಅನೇಕ ಕೃತಿಗಳೂ ವಿವಿಧ ಪ್ರಮಾಣದಲ್ಲಿ ಭಾಗವತಕ್ಕೆ ಋಣಿಯಾಗಿವೆ. ಕಥನಕವನಗಳಂತಿರುವ ಈ ಮೇಲ್ಕಂಡ ಕೃತಿಗಳ ವಿಶ್ಲೇಷಣೆಯನ್ನು ಪ್ರಸ್ತುತ ಮಹಾಪ್ರಬಂಧದ ಐದನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

### ಕಥನೇತರ ರಚನೆಗಳು

ಮೇಲೆ ತಿಳಿಸಿದ ಕೃತಿಗಳಲ್ಲದೆ ದಾಸರ ಇತರ ನೂರಾರು ಬಿಡಿ ಕೀರ್ತನೆಗಳಲ್ಲಿ ಭಾಗವತದ ವಿಷಯಗಳನ್ನು ಬಳಸಿಕೊಳ್ಳಲಾಗಿದೆ. ಕತೆ, ಪಾತ್ರ, ಪ್ರಸಂಗಗಳ ನೇರ ಪ್ರಸ್ತಾಪವಿಲ್ಲದೆ ಅಲ್ಲಿಯ ತತ್ವವನ್ನೋ ಮೌಲ್ಯವನ್ನೋ ಹೇಳುವ ಇಂತಹ ಹಾಡುಗಳ ಸ್ವರೂಪವನ್ನೂ ತಿಳಿಯಬೇಕು. ಅನೇಕ ವೇಳೆ ಸಾಮಾನ್ಯ ಓದುಗರು ಇವುಗಳನ್ನು ದಾಸರ ಆಶುರಚನೆಗಳೆಂದು, ಅಲ್ಲಿಯ ಮಾತುಗಳನ್ನು ಅವರ ಸ್ವಂತ ಅಭಿಪ್ರಾಯಗಳೆಂದು ಭಾವಿಸುವ ಸಂದರ್ಭಗಳಿವೆ. ಆದರೆ ಭಾಗವತವನ್ನು ಬಲ್ಲ ವಿದ್ವಾಂಸರು ಇಂತಹ ಕೀರ್ತನೆಗಳಿಗೆ ಆಕರಗಳಾದ ಶ್ಲೋಕಗಳನ್ನು ತಟ್ಟನೆ ಗುರುತಿಸಿ ಹೇಳಬಲ್ಲರು. ಉದಾಹರಣೆಗೆ ಇಲ್ಲಿ ಭಕ್ತಿತತ್ವ ಪ್ರತಿಪಾದನೆಯ ಸಂದರ್ಭವನ್ನು ಗಮನಿಸಬಹುದು.

ನೋಡುವುದೇ ಕಣ್ಣು ಕೇಳುವುದೇ ಕಿವಿ |
ಪಾಡುವುದೇ ವದನ | ರಂಗಯ್ಯನ ||

ಎಂಬ ಪುರಂದರದಾಸರ ಈ ಸಾಲುಗಳು ನಮಗೆ ನೇರವಾಗಿ ಅರ್ಥವಾಗುತ್ತವೆ. 'ಭಕ್ತನ ಇಂದ್ರಿಯಗಳು ಭಗವಂತನ ಸೇವೆಗೆ ಬಳಕೆಯಾದಲ್ಲಿ ಸಾರ್ಥಕ' ಎಂಬ ಭಾವವು ಸುಲಭವಾಗಿ ಸಂವಹನಗೊಳ್ಳುತ್ತವೆ. ಇಲ್ಲಿಯ ಅಚ್ಚಗನ್ನಡ ಭಾಷೆ ಹಾಗೂ ಹಾಡಿನ ಪರಿಚಿತ ಲಯಗಳು ನಮ್ಮನ್ನು ಆವರಿಸಿನಿಂತಾಗ ಈ ಪದ್ಯ ಪಾದಗಳಿಗೆ ಒಂದು ಸಂಸ್ಕೃತ ಮೂಲವಿರಬಹುದೆಂದು ಯೋಚಿಸುವ ಕಡೆ ನಮ್ಮ ಗಮನ ಹರಿಯುವುದಿಲ್ಲ.

ಆದರೆ ಶ್ರೀಮದ್ಭಾಗವತವನ್ನು ಚೆನ್ನಾಗಿ ತಿಳಿದ ವಿದ್ವಾಂಸರಿಗೆ 'ನೋಡುವುದೇ ಕಣ್ಣು' ಎಂದೊಡನೆ 'ತದೇವ ಯತ್ ಪಶ್ಯತಿ ತದ್ಧಿ ಚಕ್ಷುಃ' ಎಂಬ ವಾಕ್ಯವೂ, 'ಕೇಳುವುದೇ ಕಿವಿ' ಎಂದೊಡನೆ 'ಶೃಣೋತಿ ತತ್ಪುಣ್ಯ ಕಥಾಃ ಸ ಕರ್ಣಃ' ಎಂಬ ಮಾತೂ, 'ಪಾಡುವುದೇ ವದನ' ಎಂದಾಗ 'ಸವಾಕ್ ಯಮಾ ತಸ್ಯ ಗುಣಾನ್ ಗೃಣೀತೇ' ಎಂಬ ನಿರೂಪಣೆಯೂ ತಟ್ಟನೆ ನೆನಪಿಗೆ ಬರುತ್ತವೆ. ಈ ರೀತಿಯ ತುಲನೆಯಿಂದ ಇಲ್ಲಿಯ ಒಂದೊಂದು ಮಾತುಗಳೂ ಭಾಗವತದ ಪರೀಕ್ಷಿತ ರಾಜರ ಅಭಿಪ್ರಾಯಗಳಿಗೆ ಅನುಸಾರಿಯಾಗಿವೆ ಎಂಬುದನ್ನು ನಿರ್ಧರಿಸಲು ಸಹಾಯಕವಾಗುತ್ತದೆ. ರಂಗಯ್ಯನನ್ನು 'ನೋಡುವುದೇ' ಕಣ್ಣು ಎಂಬಲ್ಲಿನ ಅವಧಾರಣೆಗೂ, ಮೂಲದ 'ತದೇವ' ಎಂಬಲ್ಲಿನ ಅವಧಾರಣೆಯೇ ಕಾರಣವೆಂಬ ಸೂಕ್ಷ್ಮ ವಿಶ್ಲೇಷಣೆಯೂ ಸಾಧ್ಯವೆನಿಸುತ್ತದೆ.

ಯಾವುದೇ ಕವಿಯು ಇಷ್ಟೊಂದು ಪ್ರಜ್ಞಾಪೂರ್ವಕವಾಗಿ ಹೆಜ್ಜೆ ಹೆಜ್ಜೆಗೂ ಮತ್ತೊಂದು ಆಕರವನ್ನು ಅನುಸರಿಸುತ್ತಾನೆಯೇ? ಎಂಬ ಅನುಮಾನ ಬರಬಹುದು. ಆದರೆ 'ತಮ್ಮ ಪ್ರತಿಯೊಂದು ಮಾತೂ ಭಾಗವತಾದಿ ಶಾಸ್ತ್ರಾನುಸಾರವಾಗಿಯೇ ಇರಬೇಕು' ಎಂಬುದು ದಾಸರ ಪ್ರಾಮಾಣಿಕ ಕಾಳಜಿಯಾಗಿತ್ತು. ಲಕ್ಷ್ಮೀದೇವಿಯನ್ನು ಸ್ತುತಿಸುವ ಒಂದು ಕೀರ್ತನೆಯಲ್ಲಿ ಪುರಂದರ ದಾಸರು,

ವಚನಗಳೆಲ್ಲ ವಾಸುದೇವನ ಕಥೆಯೆಂದು
ರಚನೆ ಮಾಡುವರಲ್ಲಿ ರಕ್ತಿ ನಿಲ್ಲುವ ಹಾಗೆ
(ಮದ್ದು ಮಾಡಲರಿಯಾ ಮುದ್ದುರಮಾದೇವಿ)

ಎಂದು ಅಂಗಲಾಚಿದ್ದಾರೆ. ಇಂತಹ ಕಡೆಗಳಲ್ಲಿ ದಾಸರ ಭಾಗವತಾಸಕ್ತಿಯ ತೀವ್ರತೆ ಎದ್ದುಕಾಣುತ್ತದೆ. ವಾದಿರಾಜರಾದರೂ,

ಹರಿಯೆನ್ನುವೆನು ಹರಿಯ ನಮಿಸುವೆನು
ಹರಿಕಥೆಗಳನೆ ನಾ ನುತಿಸುವೆ ಮತಿಸುವೆ
ಹರಿಯ ಪರಾಕ್ರಮಗಳನೆ ನಾ ಬಣ್ಣಿಸುವೆ
ಹರಿ ಹರಿ ಹರಿಯೆಂದು ದುರಿತವ ಕಳೆವೆನು
ಸಿರಿ ಹಯವದನನ್ನ ಚರಣದ ಭಕುತಿಯು
ದೊರೆಕೊಂಡರೆ ಸಾಕೆನ್ನ ಜನುಮ ಜನುಮಕಿನ್ನು (ಉಗಾಭೋಗ)

ಎಂದು ನಿರ್ಧರಿಸಿದವರು. ಈ ಹರಿಪರ ದೃಷ್ಟಿಯು ಅವರ ಕಾವ್ಯ ಸೃಷ್ಟಿಯ ಸ್ವರೂಪವನ್ನು ನಿರ್ಧರಿಸುವ ಪ್ರಣಾಳಿಕೆಯಂತೆ ಕಂಡುಬರುತ್ತದೆ.

ಇವರಿಬ್ಬರಿಗೂ ಮಾರ್ಗದರ್ಶಕರಾದ ವ್ಯಾಸರಾಯರ ಕೀರ್ತನೆಯ ಈ ಕೆಳಗಿನ ಸಾಲುಗಳು ದಾಸಸಾಹಿತ್ಯದ ನಿರ್ಮಾಣ ಕ್ರಿಯೆಯ ಒಟ್ಟು ತಾತ್ವಿಕತೆಯನ್ನು ತಿಳಿಸುವಂತಿವೆ :

ಚತುರ ವೇದಶಾಸ್ತ್ರ ಮೇಣಷ್ಟಾದಶವಾದ
ಸ್ಮೃತಿ ತರ್ಕಪೌರಾಣದಡವಿಯಲ್ಲಿ |
ಮತಿವಂತ ಮುನಿಗಳಾರಿಸಿ ತಂದು ತಾವು
ಪ್ರತಿಗಂಡು ಲೋಕಕ್ಕೆ ಹಿತವಾಗಿ ತೋರುವ ||
(ಭವರೋಗ ಹರವಾದೊಂದೌಷಧಿ)

ಇಲ್ಲಿ ವ್ಯಾಸರಾಯರು ಕೃಷ್ಣನಾಮವನ್ನು ಔಷಧಿಯೆಂದು ವರ್ಣಿಸುವ ಜೊತೆಗೆ ಹರಿದಾಸರ ಕಾವ್ಯ ಪದ್ಧತಿಯ ಬಗ್ಗೆ ಹಾಗೂ ಪ್ರಾಚೀನ ಆಕರ ಗ್ರಂಥಗಳ ಋಣ ಮತ್ತು ವೃದ್ಧಿಯ ಬಗ್ಗೆ ತಮ್ಮ ನಿಲುವನ್ನೂ ಹೇಳುತ್ತಿದ್ದಾರೆ.

[ಮತಿವಂತರಾದ (ಸಾರಾಸಾರ ನಿಶ್ಚಯ ಸಮರ್ಥರಾದ) ಮುನಿಗಳು(ಮನನಶೀಲರು); ನಾಲ್ಕು ವೇದಗಳು, ವ್ಯಾಕರಣ, ಛಂದಸ್ಸು, ಮೀಮಾಂಸೆ ಮುಂತಾದ ಶಾಸ್ತ್ರಗಳು; ಹದಿನೆಂಟು ಪುರಾಣಗಳು, ಸ್ಮೃತಿಗಳು, ತರ್ಕ ಮೊದಲಾದ ವೃಕ್ಷಗಳಿಂದ ಕೂಡಿದ ಕಾಡಿನಲ್ಲಿ(ಆಕರ ರಾಶಿಯಲ್ಲಿ) ಹುದುಗಿದ್ದ ಉತ್ತಮಾಂಶಗಳನ್ನು ಆರಿಸಿ ತಂದು (ಆಯ್ಕೆಯ ಮೂಲಕ ಸ್ವೀಕರಿಸಿ) ತಾವು ಅದರ ಮಹತ್ವವನ್ನು ಪ್ರತಿಗಂಡು, ಅಂದರೆ ಪ್ರಾಯೋಗಿಕವಾಗಿ ಅನುಭವಿಸಿ(ದರ್ಶನ), ಲೋಕಕ್ಕೆ ಅದು ಹಿತಕರವೆಂಬುದನ್ನು ಹಿತವಾಗಿ ತೋರುವ (ವರ್ಣನದ) ಮೂಲಕ ನೀಡುವ ಔಷಧಿಯು(ನೂತನ ರಚನೆ) ಭವರೋಗಹರವಾದುದು.] ಹರಿದಾಸರ ಬಹುಪಾಲು ದೇವರನಾಮಗಳ ರಚನಾ ವಿಧಾನವನ್ನು ವಿಶ್ಲೇಷಿಸಲು ಸಹಾಯಕವಾಗುವ 'ಆರಿಸಿ ತಂದು', 'ಪ್ರತಿಗಂಡು', 'ಹಿತವಾಗಿ ತೋರುವ' ಎಂಬ ಈ ಮಾತು ಸಮಗ್ರ ಸಾಹಿತ್ಯ ಕುರಿತ ಮಾತೂ ಆಗಬಹುದಾಗಿದೆ.

ವ್ಯಾಸರಾಯರು ಕಂಡುಕೊಂಡ ಈ ಕಾವ್ಯ ತತ್ವವನ್ನು ಅವರ ಸುಳಾದಿಯ ಒಂದು ಭಾಗಕ್ಕೆ ಅನ್ವಯಿಸಿ ನೋಡಬಹುದು

ಸಾಂಕೇತ್ಯಂ ಪಾರಿಹಾಸ್ಯಂ ವಾ
ಸ್ತೋಭಂ ಹೇಲನಮೇವ ವಾ |
ವೈಕುಂಠ ನಾಮ ಗ್ರಹಣಂ
ಅಶೇಷಾಘಹರಂ ವಿದುಃ || (ಭಾಗವತ : ೬-೨-೧೪, ೧೫)

ಎಂಬ ಭಾಗವತ ಶ್ಲೋಕಗಳ ಭಾವವನ್ನು ಅವರು

ಸಂಕೇತವಾಗಲಿ ಪರಿಹಾಸವಾಗಲಿ
ಅಣಕದಿಂದಾಗಲಿ ಡಂಭದಿಂದಾಗಲಿ
ಎದ್ದಾಗಲಿ ಮತ್ತೆ ಬಿದ್ದಾಗಲಿ
ನಮೋ ನಮೋ ನಮೋ ಸಿರಿಕೃಷ್ಣ ಎಂಬ ಘೋಷ |
ಮುಕುತಿ ಕನ್ನಿಕೆಯ ಮದುವೆಯ ವಾದ್ಯ ಘೋಷ || (ಉಗಾಭೋಗ)

ಎಂಬ ಸಾಲುಗಳಲ್ಲಿ ಕನ್ನಡೀಕರಿಸಿದ್ದಾರೆ. ಮೂಲದಲ್ಲಿ 'ಪರಮಾತ್ಮನ ನಾಮಸ್ಮರಣೆ ಸರ್ವಪಾಪ ನಾಶಕ' ಎಂದು ಹೇಳಿದೆ. ಅದನ್ನು ವ್ಯಾಸರಾಯರು 'ಎಲ್ಲ ಕಾಲದಲ್ಲೂ ಮಾಡುವ ಕೃಷ್ಣನಾಮ ಸ್ಮರಣೆಯು, ಮಾನವನು ಮುಕ್ತಿ ಕನ್ನಿಕೆಯ ಕೈಹಿಡಿಯುವಾಗ ನಡೆಯುವ ಮಂಗಲವಾದ್ಯದ ಘೋಷವಾಗುತ್ತದೆ' ಎಂಬ ಅರ್ಥದ ರೂಪಕವನ್ನಾಗಿ ವೃದ್ಧಿಸಿದ್ದಾರೆ.

ಹೀಗೆ ದಾಸರ ಅನೇಕ ತತ್ವಪ್ರತಿಪಾದಕ ಕೃತಿಗಳು ಶ್ರೀಮದ್ಭಾಗವತದ ಋಣ ಮತ್ತು ವೃದ್ಧಿಯ ವಿವಿಧ ವಿನ್ಯಾಸಗಳಲ್ಲಿ ರೂಪುಗೊಂಡಿರುವುದನ್ನು ಪ್ರಸ್ತುತ ಅಧ್ಯಯನದ ಆರನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಹರಿದಾಸ ಸಾಹಿತ್ಯದಲ್ಲಿ ಕಂಡುಬರುವ ಜೀವನ ಮೌಲ್ಯಗಳು ದಾಸರ ಮಾನವೀಯತೆ ಮತ್ತು ಜೀವನ ಪ್ರೇಮದ ಫಲವಾಗಿ (ಅಂದಿನಕಾಲದ ಸಮಸ್ಯೆಗಳ ವಿಶ್ಲೇಷಣೆ ಮತ್ತು ಪರಿಹಾರ ರೂಪದಲ್ಲಿ) ಕಂಡು ಬರುತ್ತವೆ. ಆದರೆ ಅಲ್ಲಿಯ ಬಹುಪಾಲು ಮಾತುಗಳು ಸಾರ್ವತ್ರಿಕ, ಸಾರ್ವಕಾಲಿಕ ಜೀವನಾನುಭವವನ್ನು ಕಟ್ಟಿಕೊಡುವಂತಿವೆ. ಅಂತಹ ಪ್ರತಿಯೊಂದು ಮೌಲಿಕ ವಿಚಾರಕ್ಕೂ ಭಾಗವತ ಮೂಲವನ್ನು ಗುರುತಿಸಿ ಹೇಳಲು ಸಾಧ್ಯವಿದೆ.

ಉದಾ : ನಳಮಾಂಧಾತರೇನಾದರೆಂಬುದ ನೀ ತಿಳಿದು ನೋಡೆಚ್ಚರಿಕೆ |
ಅಳಿವುದು ಕಾಯವು ಉಳಿವುದೊಂದೇ ಕೀರ್ತಿ ಇಳೆಯೊಳಗೆಚ್ಚರಿಕೆ ||
ಆಳಲಿಸಿ ಪರರನು ಗಳಿಸಿ ತಂದರ್ಥವು ಉಳಿಯದು ಎಚ್ಚರಿಕೆ |
ಉಳಿದಲ್ಪಕಾಲದಿ ಧರ್ಮದ ಹಾದಿಯ ಹಳಿಯಬೇಡೆಚ್ಚರಿಕೆ ||
(ಎಚ್ಚರಿಕೆ ಭಾಗ್ಯ ಯಾರಿಗೂ ಸ್ಥಿರವಲ್ಲ)

ಎಂಬ ಪುರಂದರ ದಾಸರ ಕೀರ್ತನೆಯಲ್ಲಿ ಬರುವ ಮಾತುಗಳಿಗೆ ಮೂಲ ಛಾಯೆಯನ್ನು ಭಾಗವತ ೧೨ನೇ ಸ್ಕಂಧ ೩ನೇ ಅಧ್ಯಾಯದ ೯,೧೦,೧೩,೧೪,೧೫,೧೬ ಮುಂತಾದ ಶ್ಲೋಕಗಳಲ್ಲಿ ಗುರುತಿಸಬಹುದು.

ಜನರ ನಡತೆ ಕೇಳಿರಯ್ಯ ಇಂಥ |
ಜನರ ನೋಡಿ ನೀವು ಏನೆಂಬಿರಯ್ಯ ||ಪ||
ತಾಯಿಗನ್ನವ ನಿಕ್ಕರಯ್ಯ ಬಲು |
ಬಾಯಿ ಮಾತಿಗೆ ಮರುಳಾಗುವರಯ್ಯ ||
ನ್ಯಾಯವೆಂಬುದು ಇಲ್ಲವಯ್ಯ |
ಅನ್ಯಾಯವೆ ಗತಿಯೆಂದು ಸಾಧಿಪರಯ್ಯ ||

ಮುಂತಾದ ಮಾತುಗಳು ದಾಸರು ಕಂಡ ಅವರ ಕಾಲದ ವಾಸ್ತವ ದೃಶ್ಯಗಳ ಚಿತ್ರಣವೇ ಇರಬಹುದಾದರೂ ಭಾಗವತ (೧೨ನೇ ಸ್ಕಂಧ ೩ನೇ ಅಧ್ಯಾಯ ೪೧, ೪೨, ೪೩ ಮುಂತಾದ) ಶ್ಲೋಕಗಳ ಭಾವಾನುವಾದವಾಗಿರುವುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ.

ಹೀಗೆ ದಾಸರ ಮೌಲ್ಯ ಪ್ರತಿಪಾದ ಕೃತಿಗಳಲ್ಲಿ ಕಂಡುಬರುವ ಭಾಗವತದ ಋಣ ಮತ್ತು ವೃದ್ಧಿಯ ಕೆಲವು ಮಾದರಿಗಳನ್ನು ಏಳನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ.ಇದುವರೆಗೆ ದಾಸರ ಅನೇಕ

ಕೀರ್ತನೆಗಳ ವಿವಿಧ ಭಾಗಗಳು ಭಾಗವತಕ್ಕೆ ಋಣಿಯಾಗಿರುವುದನ್ನು ಗುರುತಿಸಿದ್ದೇವೆ. ಕೇವಲ ಸ್ವೋಪಜ್ಞತೆ ಅಥವಾ ಅನನ್ಯತೆಯನ್ನು ಹುಡುಕ ಹೊರಡುವ ವಿಮರ್ಶಕರಿಗೆ ಇಂತಹ ಕೀರ್ತನೆಗಳಲ್ಲಿ ಹೆಚ್ಚಿನ ಸ್ವಾರಸ್ಯ ಕಾಣದಿರಬಹುದು. ಇಲ್ಲಿನ ತೌಲನಿಕ ಅಧ್ಯಯನದಿಂದ ಹೆಚ್ಚು ಪ್ರಯೋಜನವಿಲ್ಲವೆನಿಸ ಬಹುದು. ಆದರೆ ಸಾವಿರಾರು ವರ್ಷಗಳಿಂದ ಸಾತ್ವಿಕ ಭಕ್ತಿಮಾರ್ಗದ ಮೂಲಕ ಜನಜೀವನಕ್ಕೆ ನೆಮ್ಮದಿಯ ತಂಪೆರೆದ ಭಾಗವತ ಪರಂಪರೆಯ ಅರಿವು-ಅನುಷ್ಠಾನ ಮತ್ತು ಅಭಿವ್ಯಕ್ತಿಗಳನ್ನು ಸಾಧಿಸಿದ ಹರಿದಾಸ ಸಾಹಿತ್ಯದ ಸಾಂಸ್ಕೃತಿಕ ಮಹತ್ವವನ್ನು ತಿಳಿಯುವಲ್ಲಿ ಇಂತಹ ವಿಶ್ಲೇಷಣೆ ಅಗತ್ಯವಾಗುತ್ತದೆ.

"ಭರತವರ್ಷದ ಸಂಸ್ಕೃತಿಯನ್ನು ರೂಪಿಸುವುದರಲ್ಲಿ ಭಾಗವತವು ಎಂತಹ ಮಹತ್ವದ ಸ್ಫೂರ್ತಿಗಂಗೋತ್ರಿಯಾಗಿದೆಯೆಂಬುದನ್ನು ವಿದ್ವಾಂಸರು ನಿರ್ಧರಿಸಲೇಬೇಕಾಗಿದೆ. ನಮ್ಮ ದೇಶದ ಜನಜೀವನವು ಅನೇಕ ತಲೆಮಾರುಗಳಿಂದ ಈ ಗ್ರಂಥಕ್ಕೆ ಋಣಿಯಾಗಿದೆ. ಭಕ್ತಿಮಾರ್ಗದ ವೈಭವದ ಹೂವುಗಳೆಲ್ಲ ಈ ವ್ಯಾಸವೃಕ್ಷಕ್ಕೆ ಅರಳಿವೆ. ಚಿತ್ರ, ಸಂಗೀತ, ನೃತ್ಯ, ಶಿಲ್ಪಗಳಲ್ಲಿ ಕಂಡುಬರುವ ವೈಭವ, ವೈವಿಧ್ಯಗಳು ಭಾಗವತದ ತೊಟ್ಟಿಲಲ್ಲಿ ತೂಗಾಡಿವೆ. ರಾಮಾಯಣ, ಮಹಾಭಾರತ, ಭಾಗವತ ಈ ಮೂರು ಕಾವ್ಯಗಳು ನಮ್ಮ ಜೀವನದ ಜೀವವಾಗಿ ಹರಿದುಕೊಂಡು ಬಂದಿವೆ. ನಾವು ಪಡೆಯಬೇಕಾದ ಸಿದ್ಧಿಯನ್ನೂ ಕಾಣಬೇಕಾದ ಕನಸನ್ನೂ ಒಂದು ಕ್ಷಣ ಕೂಡ ಮರೆಯದಂತೆ ನಮಗೆ ವಿವರಿಸಿ ಹೇಳಿವೆ. 'ಹೀಗಿದೆ ಜೀವನ' - 'ಹೀಗಿರಬೇಕು ಜೀವನ' ಎಂದು ಹೆಜ್ಜೆ ಹೆಜ್ಜೆಗೆ ಎಚ್ಚರಿಸಿಕೊಂಡು ಬಂದಿವೆ.

ಇವುಗಳನ್ನು ರಚಿಸಿದ ಮಹಾಕವಿಗಳು ಯಾವ ಕಾಡಿನಲ್ಲಿ ಯಾವ ಕಾಲದಲ್ಲೋ ಕುಳಿತು ತಮ್ಮ ಗ್ರಂಥಗಳನ್ನು ರಚಿಸಿದರು. ಇವುಗಳ ಪರಿಣಾಮ ಮಾತ್ರ ಅಸಾಮಾನ್ಯವಾಯಿತು. ಭಿನ್ನ ಭಾಷೆಗಳ ಜನ, ಭಿನ್ನ ಕಾಲಗಳಲ್ಲಿ ಇವೇ ಹಾಡನ್ನು ಮತ್ತೆ ಮತ್ತೆ ಹಾಡಿದ್ದಾರೆ. ಕನ್ನಡ ಕಾವ್ಯಪ್ರವಾಹವೂ ಇದಕ್ಕೆ ಹೊರತಾಗಿಲ್ಲ. ನಮ್ಮಲ್ಲಿ ಎಷ್ಟು ರಾಮಾಯಣ! ಎಷ್ಟು ಮಹಾಭಾರತ! ಗಮನಕ್ಕೆ ಬಂದಿರುವ ಬಾರದಿರುವ ಭಾಗವತಗಳೆಷ್ಟು! ನಾಲ್ಕುನೂರು ವರ್ಷಗಳ ಹಿಂದೆ ಆಗಿಹೋದ ಪುರಂದರದಾಸರು, ಅವರಿಗಿಂತ ಮುಂಚಿನವರು, ಅವರ ತರುವಾಯದವರು ನಿರ್ಮಿಸಿದ ಈ ಸಾಹಿತ್ಯವನ್ನು 'ಭಾಗವತದ ಕುಟುಂಬ'ವೆಂದು ಕರೆಯಬಹುದು(ಸು.ರಂ.ಎಕ್ಕುಂಡಿ, ೧೯೬೪:೨೭-೨೮) ಎಂಬ ಅಭಿಪ್ರಾಯವು ಮೇಲಿನ ಮಾತುಗಳಿಗೆ ಪೂರಕವಾಗಿದೆ.

"The greatness of literature cannot be delermined solely by literary standards: though we must remember that whether it is literature or not can be determined solely by literany standards". (T.S.Eliot ಉದ್ಧೃತ ತಿಪ್ಪೇರುದ್ರಸ್ವಾಮಿ.ಹೆಚ್. ೧೯೯೮:[illegible]) ಎಂಬ ದೃಷ್ಟಿಕೋನದಿಂದ ನೋಡಿದರೆ ಹರಿದಾಸ ಸಾಹಿತ್ಯದ ಗುಣಾತ್ಮಕ ಅಂಶಗಳನ್ನು ಯಥಾರ್ಥವಾಗಿ ಗ್ರಹಿಸಲು ಇಂಥ ಅಧ್ಯಯನಗಳು ಉಪಯುಕ್ತವಾಗಬಲ್ಲವೆಂಬ ಅಂಶವು ಮನವರಿಕೆಯಾಗುತ್ತದೆ.

## ೪.೪. ಹರಿದಾಸರು : ಋಣ ಮತ್ತು ವೃದ್ಧಿಯ ಸ್ವರೂಪ

ಪ್ರಸಿದ್ಧ ಧಾರ್ಮಿಕ ಪುರಾಣಗಳನ್ನು ಹೆಚ್ಚು ಮಾರ್ಪಡಿಸಲು ಅವಕಾಶವಿರುವುದಿಲ್ಲ. ಒಂದೊಮ್ಮೆ ಕವಿಯು ಸ್ವಾತಂತ್ರ್ಯವಹಿಸಿ ಹೆಚ್ಚು ಮಾರ್ಪಡಿಸಿದರೆ, ಆ ಕೃತಿಯನ್ನು ಜನರು ಗೌರವದಿಂದ ಸ್ವೀಕರಿಸುವುದಿಲ್ಲ. ಈ ಅರ್ಥದಲ್ಲಿ ಲೌಕಿಕ ಕಾವ್ಯದ ಕವಿಗಿಂತ ಆಗಮಿಕ ಕಾವ್ಯದ ಕವಿಗೆ ನಿರ್ಬಂಧಗಳು ಹೆಚ್ಚು. ಆದ್ದರಿಂದ ಅವನು ಏಕಕಾಲಕ್ಕೆ ಪರಂಪರೆಯ 'ಮೂಲ'ಕ್ಕೆ ಬದ್ಧನಾಗಿರುತ್ತಲೇ ತನ್ನ ಕಾಲದ ಅಗತ್ಯಗಳಿಗೆ ತಕ್ಕಂತೆ ತಾನು ಬಯಸಿದ ಹೊಸತನದ ಅಂಶಗಳನ್ನೂ ಅಳವಡಿಸಲು ಪ್ರಯತ್ನಿಸುತ್ತಾನೆ. ಇದೊಂದು ಕಷ್ಟಸಾಧ್ಯವಾದ ಸವಾಲೇ ಸರಿ.

ಅಂದರೆ ಕವಿಯು ಮೂಲದ ಒಟ್ಟಂದವು ಕೆಡದಂತೆ ಎಚ್ಚರಿಕೆ ವಹಿಸುತ್ತಲೇ ತನ್ನ ವಿಶಿಷ್ಟತೆಯನ್ನು ಬೆರೆಸಲು ಬೇರೆ ಬೇರೆ ಮಾರ್ಗೋಪಾಯಗಳನ್ನು ಅನುಸರಿಸುತ್ತಾನೆ. ಹೀಗೆ ಋಣದ ಜೊತೆಗೇ ವೃದ್ಧಿಯನ್ನೂ ಸಾಧಿಸುವುದು ಎಲ್ಲ ಕವಿಗಳ ಹಂಬಲವಾಗಿರುತ್ತದೆ. ಹರಿದಾಸರು ಭಾಗವತವನ್ನು ಆಧರಿಸಿ ರಚಿಸಿದ ಕೃತಿಗಳ ವಿಷಯದಲ್ಲೂ ಈ ಮಾತು ಸಲ್ಲುತ್ತದೆ. ಅವರು ಸಾಧಿಸಿದ 'ಋಣ ಮತ್ತು ವೃದ್ಧಿ'ಯ 'ಸ್ವರೂಪ'ವನ್ನು ವಿಚಾರಿಸಬೇಕು.

ಹರಿದಾಸರಿಗೆ ಮೂಲಸ್ರೋತ್ರವಾದ ಭಾಗವತವು, ಪುರಾಣ ರೂಪದಲ್ಲಿರುವ ತಾತ್ವಿಕ ಭಕ್ತಿಕಾವ್ಯ. ಇದರಲ್ಲಿ ಕತೆ ಹಾಗೂ ವೇದಾಂತಗಳು ಔಚಿತ್ಯಪೂರ್ಣಪಾಕವಾಗಿ ಪ್ರತಿಪಾದಿತವಾಗಿವೆ. ಆದ್ದರಿಂದ ಸಾಕಷ್ಟು ಸ್ವಾರಸ್ಯಕರವೂ ಮಹತ್ವಪೂರ್ಣವೂ ಆಗಿ ಪರಿಣಮಿಸಿದೆ.

"ಪುರಾಣದ ಮುಖ್ಯಗುರಿ ನೀತಿ ನಿರೂಪಣೆ. ನೀತಿಯನ್ನು ಹೇಳುತ್ತಾ, ತತ್ವವನ್ನು ಉಪದೇಶ ಮಾಡುತ್ತಾ ಶ್ರೋತೃಗಳ ಹೃದಯದಲ್ಲಿ ಧರ್ಮನಿಷ್ಠೆಯೂ, ದೈವಭಕ್ತಿಯೂ, ಜಾಗೃತವಾಗವಂತೆ ನಿರೂಪಿಸುವುದು ಪುರಾಣದ ಸಂವಹನ ವಿಧಾನವಾಗಿದೆ.

ಕಾವ್ಯದ ಮುಖ್ಯ ಗುರಿಯಾದರೋ ರಸ ನಿರೂಪಣೆ. ಕತೆಯನ್ನು ಹೇಳುತ್ತ, ಪಾತ್ರಗಳನ್ನು ಚಿತ್ರಿಸುತ್ತ, ಪ್ರಕೃತಿಯನ್ನು ವರ್ಣಿಸುತ್ತ ಕೇಳುವವರ ಹೃದಯದಲ್ಲಿ ರಸತರಂಗಗಳನ್ನು ಉಕ್ಕೇರಿಸಿ ಭಾವಪರವಶರನ್ನಾಗಿ ಮಾಡಿ ನಿರ್ದುಷ್ಟವೂ ಅಹೇತುಕವೂ ಆದ ಆನಂದದಲ್ಲಿ ಮುಳುಗಿಸಿ ಬಿಡುವುದೇ ಕಾವ್ಯದ ಉದ್ದೇಶ" (ಪರಮೇಶ್ವರ ಭಟ್ಟ ಎಸ್.ವಿ., ೧೯೬೭:೩೨)

ಹರಿದಾಸರ ರಚನೆಗಳು ಪುರಾಣಕ್ಕಿಂತ ಭಿನ್ನವಾಗಿವೆ. ಸೃಜನಶೀಲ ಕಾವ್ಯಗಳಿಗಿಂತಲೂ ಕೆಲವು ಲಕ್ಷಣಗಳಿಂದ ಸ್ವಲ್ಪ ಭಿನ್ನವಾಗಿವೆ. ಹರಿದಾಸರು ಕಥಾನಿರೂಪಣೆಗೆ ಕಥನ ಕವನದ ಮಾದರಿಯನ್ನೂ, ತತ್ತ್ವ ಪ್ರತಿಪಾದನೆಗೆ ಸುಳಾದಿ ವೃತ್ತನಾಮಗಳಂತಹ ವಿಶಿಷ್ಟ ರಚನೆಗಳನ್ನೂ, ಮೌಲ್ಯಪ್ರತಿಪಾದನೆಗೆ ಭಾವಗೀತ ಮಾದರಿಯ ಕೀರ್ತನ ಪ್ರಕಾರವನ್ನೂ ಆಯ್ದುಕೊಂಡಿದ್ದಾರೆ. ಇವು ಒಂದೊಂದೂ ಬಿಡಿ

ರಚನೆಗಳು. ಇಲ್ಲಿ 'ಓಟ'ದ ಜೊತೆ ಜೊತೆಗೆ 'ನೋಟ'ವೂ ಮುಖ್ಯವಾಗುತ್ತದೆ. ಬಿಡಿ ರಚನೆಗಳನ್ನು ಆಧರಿಸಿದ ದಾಸರ ಪ್ರಯತ್ನವನ್ನು ಭಾಗವತದ 'ಅಂಶಲಕ್ಷೀ ವಿವೇಚನೆ'(Micro analysis) ಎನ್ನಬಹುದು. ಹೀಗೆ ಬೃಹದ್ಗಾತ್ರದ ಪುರಾಣ ವಸ್ತುವನ್ನುಕಿರುಗವನಗಳ ಆಕೃತಿಯಲ್ಲಿ ಅಳವಡಿಸ ಹೊರಟರೆ ಏಕಕಾಲಕ್ಕೆ ಸಮಗ್ರತೆ ದಕ್ಕುವುದಿಲ್ಲ. ಆದರೆ ದಾಸರ ದೃಷ್ಟಿಯೇ ಬೇರೆ ರೀತಿಯದೆನಿಸುತ್ತದೆ. 'ದಿನಕ್ಕೆ ಕನಿಷ್ಟ ಒಂದು ಶ್ಲೋಕ ಅಥವಾ ಅರ್ಧಶ್ಲೋಕ ಭಾಗವತವನ್ನಾದರೂ ಹೇಳಬೇಕು ಅಥವಾ ಕೇಳಬೇಕು' ಎಂಬ ಜನರ ಸಾಂಸ್ಕೃತಿಕ ಅಗತ್ಯವನ್ನು ಪೂರೈಸಲು ಭಾಗವತದ ಒಂದೊಂದೇ 'ತತ್ವ' ಅಥವಾ 'ಮೌಲ್ಯ'ವನ್ನು ಕತೆಯ ಲೇಪದೊಂದಿಗೆ 'ಬಿಡಿ'ಯಾಗಿ ಪರಿಣಾಮಕಾರಿಯಾಗಿ ಹೇಳುವ ತಾಳ್ಮೆ ಹಾಗೂ ಶ್ರದ್ಧೆಗಳು ಅವರಿಗಿದ್ದುದು ಕಂಡುಬರುತ್ತದೆ. ಈ ಅರ್ಥದಲ್ಲಿ ದಾಸರಿಗೆ 'ಸಮಗ್ರ ಶಿಲ್ಪ' ಸಾಧನೆಯ ಉದ್ದೇಶವಿರಲಿಲ್ಲವಾದ್ದರಿಂದಲೇ; ಅವರು 'ಕಥನ'ಕ್ಕಿಂತ ಸಂಕಥನದ ವಿವಿಧ ತಂತ್ರಗಳಿಗೆ ಒಲಿದಿರುವುದನ್ನು ಗುರುತಿಸಬಹುದು.

ಈ ಅರ್ಥದಲ್ಲಿ ದಾಸರ ಭಾಗವತಾಧಾರಿತ ಸಾಹಿತ್ಯವು 'ಪುರಾಣ' ಮತ್ತು 'ಕಾವ್ಯ'ಗಳ 'ಸಾರಗ್ರಹಣೈಕ ದೃಷ್ಟಿಯ' ವಿನೂತನ ಪ್ರಯತ್ನವಾಗಿ ಕಂಡುಬರುತ್ತವೆ.

ಹೀಗೆ ಭಾಗವತದ ಅಂಶಲಕ್ಷೀ ವಿವೇಚನೆಯ ಮೂಲಕ ಸಾರಗ್ರಹಣಕ್ಕೆ ಹೊರಟ ಹರಿದಾಸರು ಸಾಧಿಸಿದ 'ಋಣ ಮತ್ತು ವೃದ್ಧಿ'ಯನ್ನು ಸ್ಥೂಲವಾಗಿ **ಸಂಕ್ಷೇಪ, ವಿಸ್ತಾರ, ಯಥಾಗಾತ್ರ ನಿರೂಪಣ, ಅನುಕ್ತ ಕಥನ, ಕ್ರೋಢೀಕರಣ, ಶಂಕಾಪರಿಹಾರ, ಅಪವ್ಯಾಖ್ಯಾನ ನಿರಾಕರಣ ಹಾಗೂ ಛಂದೋ ಪ್ರಕಾರದಲ್ಲಿ ಬದಲಾವಣೆ** ಎಂಬ ಎಂಟು ಪ್ರಕಾರಗಳಲ್ಲಿ ವರ್ಗೀಕರಿಸಿಕೊಳ್ಳಬಹುದು. ಅವುಗಳ ಕಾರ್ಯ ವಿಧಾನದ ಪರಿಚಯಕ್ಕೆ ಈ ರೀತಿಯ ಅಧ್ಯಯನ ಅಗತ್ಯವೆನಿಸುತ್ತದೆ.

**೧. ಸಂಕ್ಷೇಪ**

ಬರಹಗಾರನೊಬ್ಬನು ದೀರ್ಘವಾದ ಮೂಲವನ್ನು ತನ್ನ ಅಗತ್ಯಗಳಿಗನುಗುಣವಾಗಿ ಸಂಕ್ಷೇಪಗೊಳಿಸಿ ಕೊಂಡರೆ ಅದೂ ಪರೋಕ್ಷವಾಗಿ ವೃದ್ಧಿ ಕಾರ್ಯವೇ ಆಗುತ್ತದೆ. ಇಲ್ಲಿ ದಾಸರ ವೃದ್ಧಿಯ ಪರಿಯನ್ನು ತಿಳಿಯಬೇಕಾದರೆ ಅವರು ಮೂಲದ ಯಾವುದನ್ನು ಕೈಬಿಟ್ಟಿದ್ದಾರೆ ಎಂಬುದನ್ನು ತಿಳಿಯಬೇಕು.

ಪುರಾಣ ವಸ್ತುವನ್ನು ಆರಿಸಿಕೊಳ್ಳುವಾಗ ಬರೆಹಗಾರನು ತನ್ನ ಉದ್ದೇಶಕ್ಕೆ ಅನುಕೂಲವಾಗುವಂತೆ ಮಾರ್ಪಡಿಸಿಕೊಳ್ಳಬೇಕಾಗುತ್ತದೆ. ಅದು ಸಾಧ್ಯವಾಗದೆ ಹೋದರೆ ಅಲ್ಲಿರುವ ಸುವಿಸ್ತೃತ ಭಾಗಗಳನ್ನು, ದೀರ್ಘಉಪದೇಶಗಳನ್ನು, ಕಥಾಗತಿಯನ್ನೇ ದೂರಕ್ಕೊಯ್ಯುವ ಕವಲು ಕತೆಗಳನ್ನು ಬಿಡಬೇಕಾಗುತ್ತದೆ. ಮುಖ್ಯ ಕಥೆಯೊಂದನ್ನೇ ಗ್ರಹಿಸಿ-ಸಂಗ್ರಹಿಸಿ ಬರೆಯಬೇಕಾಗುತ್ತದೆ.

ಹರಿದಾಸರು ಮೂಲದ ವಸ್ತುವನ್ನು ಮಾರ್ಪಡಿಸುವ ಪ್ರಯತ್ನಕ್ಕೆ ಮುಂದಾಗದೆ; ಆಯ್ಕೆ-ಸಂಕ್ಷೇಪ-ಸಾರಗ್ರಹಣ-ಸರಳೀಕರಣದ ಮಾರ್ಗವನ್ನು ಹಿಡಿದಿದ್ದಾರೆ. ಉಪಲಬ್ಧ ಪ್ರಸಿದ್ಧ ಪ್ರಕಟಿತ ಕೃತಿಗಳನ್ನು



ಗಮನದಲ್ಲಿಟ್ಟುಕೊಂಡು ಹೇಳುವುದಾದರೆ ಭಾಗವತದ ಧ್ರುವವಂಶ, ಪ್ರಿಯವ್ರತವಂಶ, ಸೂರ್ಯ-ಚಂದ್ರವಂಶ ಹಾಗೂ ಭವಿಷ್ಯನ್ನರಪಾಲಕರ ಕತೆಗಳನ್ನು ಕೈಬಿಟ್ಟಿದ್ದಾರೆ. ಭಗವಂತನ ಹಾಗೂ ಪ್ರಸಿದ್ಧ ಭಾಗವತೋತ್ತಮರ[೧೦] ಕಥೆಗಳ ನಿರೂಪಣೆಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿದ್ದಾರೆ. ಹರಿದಾಸ 'ಸಂಕ್ಷೇಪ' ಪ್ರಕ್ರಿಯೆಯ ತಾತ್ವಿಕತೆಯನ್ನು ಸರಿಯಾಗಿಯೇ ಈ ಗುರುತಿಸಿರುವ ಎ.ಟಿ.ಪಾಟೀಲರು "ಭಾಗವತವು ಪುರಾಣವಾದ್ದರಿಂದ ಅಲ್ಲಿ ಪ್ರತಿಯೊಂದು ವಿಷಯದ ಕಾರಣ, ಉತ್ಪತ್ತಿ ಮೊದಲಾದ ವಿಷಯಗಳು ಕಂಡುಬರುವುದು ಸಹಜ. ಇಷ್ಟೆಲ್ಲ ವಿವರಗಳು ದಾಸರಿಗೆ ಬೇಡವಾದ್ದರಿಂದ ಅರು ತಮ್ಮ ಭಾಗವತದಲ್ಲಿ ಅವುಗಳಿಗೆ ಸ್ಥಾನ ಕಲ್ಪಿಸಿಕೊಟ್ಟಿಲ್ಲ. ಜನಜನಿತವಾದ ಮತ್ತು ಅನೇಕಾವೃತ್ತಿ ಓದಿ ಮನದಟ್ಟಾದ ಲೀಲೆಗಳನ್ನು ಮಾತ್ರ ವರ್ಣಿಸಿದ್ದಾರೆ. ಆಗ ಭಾಗವತದಲ್ಲಿ, ಸಹಜವಾಗಿ ಬರುವ ಹೋಲಿಕೆಗಳನ್ನು ತೆಗೆದುಕೊಂಡಿದ್ದಾರೆ" (ಪಾಟೀಲ ಎ.ಟಿ., ೧೯೫೬:೧೦೧) ಎಂದಿದ್ದಾರೆ. ಈ ಹಿನ್ನೆಲೆಯಲ್ಲಿ ಶ್ರೀಪಾದರಾಜರ 'ವೃಷಭಾನೇರಿದ...' ಎಂಬ ಕೀರ್ತನೆಯ ಎರಡು ನುಡಿಗಳನ್ನು ನೋಡಬಹುದು.

ವೃಷಭಾನೇರಿದ ವಿಷಧರನ್ಯಾರೆ ಪೇಳಮ್ಮಯ್ಯ ||ಪ||

*     *     *     *     *

ಹರನೊಂದಿಗೆ ವೈಕುಂಠಕೆ ಬರಲು ತಾತಗೆ ವಂದಿಸುತ  
ತರುಣೀರೂಪವ ನೋಡ್ಬೆನೆನಲು ಹರಿ ತಾ ನಸುನಗುತ |  
ಕರೆದು ಸೈರಿಸಲಾರೆ ನೀ ಎನಲು ಹಠದಿ ಕುಳ್ಳಿರಲು |  
ಕರುಣೆಗಳರಸನು ಹರನ ಮೊಗವ ನೋಡಿ |  
ಅರುಣೋದಯಕೆ ಬಾರೆಂದು ಕಳುಹಿದ ||

ಅರುಣೋದಯಕೆ ಗಂಗಾಧರ ಬರಲು |  
ಹದಿನಾರು ವರುಷದ ತರುಣೀರೂಪದಿ ಹರಿ ವನದೊಳಗಿರಲು |  
ಚರಣನಖಾಗ್ರದಿ ಧರಣೀ ಬರೆಯುತ್ತ ನಿಂತಿರಲು |  
ಸೆರಗ ಪಿಡಿಯೆ ಬರಲು |  
ಕರದಿ ಶಂಖ ಗದೆ ಚಕ್ರವ ತೋರಲು |  
ಹರನು ನಾಚಿ ತಲೆತಗ್ಗಿಸಿ ನಿಂತ ||

ಇಲ್ಲಿ ಅವರು ಭಾಗವತ ಅಷ್ಟಮ ಸ್ಕಂಧದ ೧೨ನೇ ಅಧ್ಯಾಯದಲ್ಲಿ ವಿಸ್ತಾರವಾಗಿ ಬರುವ ಕತೆಯನ್ನು ಮಾರ್ಪಡಿಸದೆ 'ಕನಿಷ್ಠತಮ' ಗಾತ್ರಕ್ಕೆ ಸಂಕ್ಷೇಪಗೊಳಿಸಿದ್ದಾರೆ. ಇಂತಹ ಸಂಕ್ಷೇಪೀಕರಣವೂ 'ವೃದ್ಧಿ'ಯ ಒಂದು ವಿಧಾನವಾಗಿದೆ. ಇದರಿಂದ ಕತೆಯ ಓಟ ಮತ್ತು ನಾಟ್ಯಾಯಮಾನತೆಯನ್ನು ಸಾಧಿಸಲು ಸಾಧ್ಯವಾಗಿದೆ. ವ್ಯಾಸರಾಯರ ಸುಳಾದಿಯ ಒಂದು ಭಾಗವು ಇದೇ ರೀತಿಯಲ್ಲಿದೆ :

ಮಲ್ಲಿಗೆ ಮೊಗ್ಗೆಗಳಂತೆ ಹಲ್ಲು ಬಂದಿವೆ ಸಿರಿಕೃಷ್ಣಯ್ಯಗೆ  
ಎಲ್ಲಿ ಎಲ್ಲಿ ಬಾಯ ತೆರೆಯೊ ಎನೆ |

ಎಲ್ಲ ಬೊಮ್ಮಾಂಡವ ಕಂಡೆ।
ಎಲ್ಲರಂಥ ಕಂದನಲ್ಲಿವ।
ಬಲ್ಲವರಿಗೆ ಪುರಂದರವಿಠಲನು।
ಜಗದ ಪಾಲಕನು....ಹಲ್ಲು ಬಂದಿವೆ॥

ಹೀಗೆ ಒಂದೆರಡು ವಾಕ್ಯಗಳಲ್ಲಿ ಅದ್ಭುತರಸಾಭಿವ್ಯಕ್ತಿಯನ್ನು ಸಾಧಿಸಿರುವುದು ವ್ಯಾಸರಾಯರ ಸಂಕ್ಷೇಪೀಕರಣ ಕೌಶಲಕ್ಕೆ ಸಾಕ್ಷಿಯಾಗಿದೆ. ಇಲ್ಲಿಯ ಭಾವ ತೀವ್ರತೆಯು ಕೇಳುಗರ ಹೃದಯವನ್ನು ಸೆರೆ ಹಿಡಿಯುತ್ತದೆ. ಹೀಗೆ ಸಂಕ್ಷೇಪೀಕರಣದಿಂದ ಉದ್ದೇಶಿತ ವಸ್ತುವಿನ ನಿರೂಪಣೆ ಸಾರವತ್ತಾಗುತ್ತದೆ.

**೨. ವಿಸ್ತಾರ**

ಮೂಲದಲ್ಲಿ ಅತ್ಯಂತ ಸಂಕ್ಷೇಪವಾಗಿರುವುದನ್ನು ದಾಸರು ವಿವರಣಾತ್ಮಕವಾಗಿ ಹೇಳುವ ಮೂಲಕ ವೃದ್ಧಿಸಿರುವುದನ್ನು 'ವಿಸ್ತಾರ'ವೆಂದು ಕರೆಯಬಹುದು.

ಕನಕದಾಸರ 'ಮೋಹನ ತರಂಗಿಣಿ'ಯಲ್ಲಿ ಮೂಲದ ಸುವಿಸ್ತೃತ ಕಥನವನ್ನು ಕಾಣಬಹುದು. ಆ ರೀತಿಯ ವಿಸ್ತಾರವನ್ನು ಸಾಧಿಸುವಾಗ ಮಹಾಕಾವ್ಯದ ಮಾರ್ಗವನ್ನನುಸರಿಸಿ ಅಷ್ಟಾದಶವರ್ಣನೆಗೂ ನವರಸಗಳ ಅಭಿವ್ಯಕ್ತಿಗೂ ಪ್ರಾಶಸ್ತ್ಯ ನೀಡಿದ್ದಾರೆ. ಜೊತೆಗೆ "ಮೋಹನ ತರಂಗಿಣಿಯ ಕಥಾವಸ್ತು ಭಾರತ, ಭಾಗವತ, ಹರಿವಂಶ, ವಿಷ್ಣುಪುರಾಣ ಮತ್ತು ಸ್ಕಾಂಧಪುರಾಣ ಮೊದಲಾದವುಗಳನ್ನು ಆಧರಿಸಿದೆ" (ವರದರಾಜರಾವ್ ಜಿ., ೧೯೬೭:೬೦)

ಇದರಿಂದ ಕನಕದಾಸರು ಮೂಲದ ವಿಸ್ತರಣೆಗೆ 'ಬಹುಪಠ್ಯೀಯತೆ' ಹಾಗೂ 'ಮಹಾಕಾವ್ಯ' ಮಾದರಿಯ ರಚನೆಯ ವಿಧಾನವನ್ನು ಅನುಸರಿಸುವುದು ಕಂಡುಬರುತ್ತದೆ. ಉಳಿದಂತೆ ದಾಸಸಾಹಿತ್ಯದಲ್ಲಿ ಮೂಲದ ವಿಸ್ತರಣೆ ಇಲ್ಲವೆನ್ನುವಷ್ಟು ವಿರಳವಾಗಿವೆ. ಅಂತಹ ವಿರಳ ಪ್ರಯೋಗವೊಂದನ್ನು ನೋಡಬಹುದು.

ವಾದಿರಾಜರು ರಚಿಸಿರುವ ೨೨ ನುಡಿಗಳ ಒಂದು ಹಾಡಿನಲ್ಲಿ ಶಿವನು ವಿಷ್ಣುವಿನ ಮೋಹಿನಿ ರೂಪಕ್ಕೆ ಮರುಳಾದ ಕತೆಯ ಮೂಲದ ಒಂದೆರಡು ಎಳೆಗಳನ್ನು ಆರಿಸಿಕೊಂಡು ಪ್ರಕೃತಿವರ್ಣನೆ ಮತ್ತು ಮೋಹಿನೀ ರೂಪ ವರ್ಣನೆಯ ಮೂಲಕ ವಿಸ್ತರಿಸಿದ್ದಾರೆ.

ಹರಿಹರರಿಬ್ಬರು ಒಲಿದು ಮಾತಾಡಲು
ಕೊಳವಕಂಡಲ್ಲಿ ಎಲೆತೋಟ
ಕೊಳವ ಕಂಡಲ್ಲಿ ಎಲೆತೋಟದೊಳಗಾಡುವ
ಹೆಣ್ಣಿನ ಕಂಡು ಹರ ಮರುಳಾದ ॥ಪ॥

ತೆಂಗಿನ ತಿಳಿಗೊಳ ನಿಂಬೆ ಕಿತ್ತಳೆ ಬಾಳೆ
ಹೊಂಬಾಳೆ ಅಡಿಕೆ ಬನಗಳು

ಹೊಂಬಾಳೆ ಅಡಿಕೆ ಬನದೊಳಗಾಡುವ
ರಂಬೆಯ ಕಂಡು ಮರುಳಾದ ||೧||

ಹೀಗೆ ನಾಲ್ಕು ಪದ್ಯಗಳಲ್ಲಿ ವಿಷಯಕ್ಕೆ ಪ್ರವೇಶಿಸಿ ಮೋಹಿನಿಯ ಸೌಂದರ್ಯ ಹಾಗೂ ಅಲಂಕಾರಗಳನ್ನು ವರ್ಣಿಸಿದ್ದಾರೆ.

**ನಡುಬಳುಕಿ ಮುಡಿಸಡಲಿ ಉಡಿಗಂಟೆ ಹೊಳೆಯುತ**
**ಕೊರಳ ಪದಕ ಹಾರ ಒಲೆಯುತ |**
**ಕೊರಳ ಪದಕ ಹಾರ ಒಲೆಯುವ ಹೆಣ್ಣಿನ**
**ಇರವ ವರ್ಣಿಸಲಾರಿಗಳವಲ್ಲ ||**

**ತೋರಕುಚದ ಮೇಲೆ ಸಾಧು ಗಂಧವ ಪೂಸಿ**
**ಆಯಕೆ ಹಿಡಿದಳೆ ಕಮಲವ |**
**ಆಯಕೆ ಹಿಡಿದಳೆ ಕಮಲವ ಕಡೆಗಣ್ಣ**
**ಥಾಳಬಂಧ್ಧರನ ಕಂಗೆಡಿಸಿತು ||**

**ನೋಡಳು ನುಡಿಯಳು ಕೊಡೆ ಮಾತಾಡಳು**
**ಓಡುತ್ತ ಚೆಂಡ ಹೊಯ್ವಳು |**
**ಓಡುತ್ತ ಚೆಂಡ ಹೊಯ್ವ ವೇಗವ ಕಂಡು**
**ಮೂರು ಕಣ್ಣವನೂ ಮರುಳಾದ ||**

ಹೀಗೆ ಕತೆ ಮುಂದುವರಿಯುತ್ತದೆ. ಇಲ್ಲಿಯ ವಿಸ್ತರಣೆಯು ಮೋಹನ ತರಂಗಿಣಿಯ ಮಾದರಿಯದಲ್ಲ. ಅಚ್ಚದೇಸೀ ಛಂದಸ್ಸು, ನಿರೂಪಣಾ ಕ್ರಮ ಹಾಗೂ ಮೂರನೇ ಸಾಲಿನಲ್ಲಿ ಕಂಡುಬರುವ ಎರಡನೇ ಸಾಲಿನ ಪುನರಾವೃತ್ತಿಗಳು ಆಕರ್ಷಕವಾಗಿವೆ. ಈ ಹಾಡುಗಬ್ಬವು ಭಾಗವತದ 'ಮೂಲ'ಕತೆಯನ್ನು ಯಾವುದೇ ರೀತಿಯಲ್ಲಿ ಬದಲಿಸದೆ ಅಲ್ಲಿಯ ಸೌಂದರ್ಯವನ್ನು ದೇಸೀ ವರ್ಣನೆಯ ಮೂಲಕ ವಿಸ್ತರಿಸಿ ವೃದ್ಧಿಸಿದೆ. ಸಾಮಾನ್ಯವಾಗಿ ದಾಸರ ವಿಸ್ತರಣೆ ಗಾತ್ರದ್ದಲ್ಲ; ಸತ್ವದ್ದು.

## ೩. ಯಥಾಗಾತ್ರ ನಿರೂಪಣ

ಮೂಲವನ್ನು ವಿಸ್ತರಿಸದೆ, ಸಂಕ್ಷೇಪಿಸದೆ, ಇರುವಷ್ಟೇ ವಿಸ್ತಾರದಲ್ಲಿ ಹೇಳುವ ಮೂಲಕ ವೃದ್ಧಿಸುವುದನ್ನು ಯಥಾಗಾತ್ರ ನಿರೂಪಣೆ ಎನ್ನಬಹುದು. ದಾಸರ ಕಥನ ಕೇಂದ್ರಿತ ಕೃತಿಗಳಲ್ಲಿ ಈ ವಿಧಾನಕ್ಕೆ ಉದಾಹರಣೆ ಇಲ್ಲವೆಂದೇ ಹೇಳಬಹುದು. ಆದರೆ ತತ್ವ ಪ್ರತಿಪಾದಕ ಕೃತಿಗಳಲ್ಲಿ ಇಂತಹ ರಚನೆಗಳಿವೆ.

ಬಲ್ಲವರೆ ಬಲ್ಲರು ಎಲ್ಲವರು ಅರಿಯರು
ಫುಲ್ಲಲೋಚನ ಪರಬ್ರಹ್ಮನೆಂಬುದನು ||ಪ||

ಅಜಜ್ಞಾನಾಧಿಕ ಬಲ್ಲ ಅನಲಸ್ನೇಹಿತ ಬಲ್ಲ
ಗಜಚರ್ಮಾಂಬರ ಬಲ್ಲ ಗರುಡ ಬಲ್ಲ

ಭುಜಗೇಶ್ವರ ಬಲ್ಲ ಭೂರಿಲೋಚನ ಬಲ್ಲ
ತ್ರಿಜಗದಧಿಪತಿ ತ್ರಿವಿಕ್ರಮನೆಂಬುದನು ೧

ಶುಕಯೋಗೀಶ್ವರ ಬಲ್ಲ ಸುಗುಣ ನಾರದ ಬಲ್ಲ
ಭಕುತ ಪ್ರಹ್ಲಾದ ಬಲ್ಲ ಬಲಿಯು ಬಲ್ಲ
ರುಕುಮಾಂಗದ ಬಲ್ಲ ಋಷಿ ಪರಾಶರ ಬಲ್ಲ
ಮಕರಕುಂಡಲಧರ ಪರಾತ್ಪರನೆಂಬುದನು ೨

ಅಂಬರೀಷನು ಬಲ್ಲ ಅತ್ರಿ ಋಷಿಯು ಬಲ್ಲ
ಸಂಭ್ರಮದಿ ಮನು ಬಲ್ಲ ಸಹದೇವ ಬಲ್ಲ
ಬೆಂಬಿಡದುದ್ಧವ ಬಲ್ಲ ಬೇಡಿದ ಧ್ರುವ ಬಲ್ಲ
ಕಂಬು ಚಕ್ರಧರ ಕರ್ಮಹರನೆಂಬುದನು ೩

ವಶಿಷ್ಠಮುನಿ ಬಲ್ಲ ವರ ವಿಭೀಷಣ ಬಲ್ಲ
ವಿಶಿಖಶಯ ಬಲ್ಲ ವಿದುರ ಬಲ್ಲ
ಋಷಿವಾಲ್ಮೀಕಿ ಬಲ್ಲ ರಾಜವಿದೇಹ ಬಲ್ಲ
ಶಶಿಮಿತ್ರನೇತ್ರ ಸರ್ವೋತ್ತಮನೆಂಬುದನು ೪

ವಾಗಿನಿಂದಕ್ರೂರ ಬಲ್ಲ ವಚನಿ ಶೌನಕ ಬಲ್ಲ
ಯೋಗಿ ಕಪಿಲ ಬಲ್ಲ ಭೃಗು ಬಲ್ಲನು
ತ್ಯಾಗಿ ಧರ್ಮಜ ಬಲ್ಲ ರಣದೂಳರ್ಜುನ ಬಲ್ಲ
ಕಾಗಿನೆಲೆಯಾದಿಕೇಶವ ಕೈವಲ್ಯನೆಂಬುದನು ೫

ವಿಷ್ಣುಮಾಯೆಯ(ಇಚ್ಛಾರೂಪದ ಬಂಧಕ ಶಕ್ತಿ)ಯಿಂದಾಗಿ ಯಾರೂ ಭಗವತ್ಸ್ವರೂಪವನ್ನು ಅರಿಯಲಾರರು. ಆದರೆ ಭಕ್ತ ಶ್ರೇಷ್ಠರಿಗೆ ಭಗವಂತನೇ ಮಾಯಾಬಂಧನ ಹರಿಸಿ ಸ್ವರೂಪದರ್ಶನ ನೀಡುತ್ತಾನೆ. ಹೀಗೆ ದೇವರನ್ನು ಬಲ್ಲವರು ಯಾರಾರೆಂಬುದನ್ನು ಹೇಳುವ ಭಾಗವತ ದ್ವಿತೀಯಸ್ಕಂಧದ ಏಳನೇ ಅಧ್ಯಾಯದ ವಿಚಾರವನ್ನು ಮೇಲಿನ ಕೀರ್ತನೆಯಲ್ಲಿ ಕನಕದಾಸರು ಯಥಾಗಾತ್ರದಲ್ಲಿ ಭಾಷಾಂತರಿಸಿದ್ದಾರೆ. ಮೂಲದ 'ಬ್ರಹ್ಮ-ನಾರದ ಸಂವಾದ ರೂಪದ ಸಂವಿಧಾನವನ್ನು ಬದಲಾಯಿಸಿ ಏಕಮುಖ ನಿರೂಪಣೆಯ 'ಬಿಡಿ' ಕೃತಿಯನ್ನಾಗಿ ಮಾಡಿರುವುದು 'ವೃದ್ಧಿ'ಯ ಅಂಶವಾಗಿದೆ.[೧೧]

### ೪. ಅನುಕ್ತ ಕಥನ

ಮೂಲದಲ್ಲಿ ಹೇಳಿರದ ಅಂಶವನ್ನು ಹೇಳುವ ಮೂಲಕ ಸಾಧಿಸುವ ವೃದ್ಧಿಯನ್ನು ಅನುಕ್ತ ಕಥನವೆನ್ನಬಹುದು. ಸೃಜನಶೀಲ ಕಾವ್ಯಗಳಲ್ಲಾದರೆ ಕವಿಗೆ ಕಲ್ಪನೆಯ ಸ್ವಾತಂತ್ರ್ಯವಿದೆ. ಅಲ್ಲಿ ಕಲ್ಪನೆಯು 'ಯಥಾಸ್ಮೈರೋಚತೇ ವಿಶ್ವಂ ತಥೇದಂ ಪರಿವರ್ತತೇ' ಎಂದು ಮಾನ್ಯವಾಗುತ್ತದೆ. ಧಾರ್ಮಿಕ ಕೃತಿಗಳಲ್ಲಿ

ಸ್ವಕಪೋಲ ಕಲ್ಪಿತ ವಿಷಯಗಳಿಗೆ ಸ್ಥಾನವಿಲ್ಲವಾದರೂ ಶಾಸ್ತ್ರ ವಿರುದ್ಧವಲ್ಲದ, ತತ್ವಕ್ಕೆ ಭಂಗಬಾರದ ರೀತಿಯ (ಮೂಲದಲ್ಲಿ ಅನುಕ್ತವಾದ) ವಿಷಯಗಳನ್ನು ಹೇಳಿರುವುದು ಕಂಡುಬರುತ್ತದೆ.

ಕರಿ ಹರಿ ಯೆನಲಾ ಸುಪ್ತಿಯತಳ್ಳಿ
ಸಿರಿಯ ಸಾರೆನುತ ಉರಗ ಮಂಚದಿಂ ಧುಮುಕಿ
ಕರವಿತ್ತ ವಿರಿಂಚನ ಕೈಲಾಗು ಒಲ್ಲದೆ
ಭರದಿ ಹನುಮನಿತ್ತ ಹಾವಿಗೆಯ ದಾಂಟಿ
ಗರುಡನೊದಗುತಿರೆ ತಿರುಗಿ ನೋಡದೆ ಬಂದ
ಕರುಣವ ತೋರೆನಗೆ ನಮೋ ನಮೋ ಸಿರಿಕೃಷ್ಣ ||

ವ್ಯಾಸರಾಯರ ಈ ಉಗಾಭೋಗವು ಗಜೇಂದ್ರನಿಗೆ ಒಲಿದು ಶ್ರೀಹರಿಯು ಆತುರದಿಂದ ಧಾವಿಸಿ ಬಂದ ಬಗೆಯನ್ನು ನಾಟಕೀಯವಾಗಿ ಚಿತ್ರಿಸುತ್ತದೆ. [ಲಕ್ಷ್ಮಿಯನ್ನೂ ದೂರ ಹೋಗು ಎಂದನಂತೆ. ಮಂಚದಿಂದ ಧುಮುಕಿದನಂತೆ. ಹಸ್ತಲಾಘವ, ಪಾದುಕೆ, ವಾಹನ ಮೊದಲಾದ ಸಾರ್ವಭೌಮತ್ವದ ಗೌರವಗಳನ್ನೆಲ್ಲ ಕಡೆಗಣಿಸಿಬಂದನಂತೆ.] ಮೂಲದಲ್ಲಿಲ್ಲದ ಈ ಅಂಶವನ್ನು ಹೇಳುವ ಮೂಲಕ 'ಶ್ರೀಹರಿಯು ಭಕ್ತರ ಆಪತ್ತಿಗೊದಗುವನು' ಎಂಬ ಪ್ರಮೇಯವನ್ನು ಭಾವಪೂರ್ಣವಾಗಿ ಕಟ್ಟಿಕೊಡುತ್ತದೆ. ಅನುಕ್ತ ಕಥನದ ಮೂಲಕ ದಾಸರು ಸಾಧಿಸುವ ವೃದ್ಧಿಯ ಸ್ವರೂಪವನ್ನು ತಿಳಿಯಲು ಇದೊಂದು ಉತ್ತಮ ನಿದರ್ಶನವೆನ್ನಬಹುದು. ಇಂತಹ ಕಡೆಗಳಲ್ಲಿ ಹರಿದಾಸರು ಭಾಗವತೇತರವಾದ 'ಅನ್ಯಪಠ್ಯ'ಕ್ಕೆ ಋಣಿಗಳಾಗಿರುವ ಸಾಧ್ಯತೆಗಳೂ ಇವೆ.

'ಬವ್ವಬಂದಿತಲ್ಲ' ಎಂಬ ಪುರಂದರದಾಸರ ರಚನೆಯ ಬಗ್ಗೆ ವಿಮರ್ಶಕರ ವಿವರಣೆಯನ್ನು ನೋಡಬಹುದು. "ಇಡೀ ಕವನ ಒಂದು ಕಡೆ ತುಂಟನಾದ ಕೃಷ್ಣನನ್ನು ಮಲಗಿಸುವ ಯಶೋದೆಯ ಹುಸಿ ಬೆದರಿಕೆಯ ಕಥೆಯಾದರೆ, ಮತ್ತೊಂದು ಕಡೆಯಲ್ಲಿ ಈ ಕಥೆಗೆ ಇನ್ನೊಂದೇ ಆಯಾಮ ತೆರೆದುಕೊಳ್ಳುತ್ತದೆ. ವೈಕುಂಠವನ್ನು ಬಿಟ್ಟು ಈ ಲೋಕಕ್ಕೆ ಬಂದ ಭಗವಂತನನ್ನು ಶಿಶುರೂಪದಲ್ಲಿ ನೋಡಿ ಹಿಗ್ಗಲು ಶಿವ ತನ್ನ ಗಣದೊಂದಿಗೆ ಹಿಂಡುಗಟ್ಟಿ ಬರುವ ಸಂಭ್ರಮವನ್ನು ಇದು ಸೂಚಿಸುತ್ತದೆ.

ಹರಿದಾಸರ ಈ ಶಿವನ ವರ್ಣನೆಯ ರೂಪು ಅವರ ಧಾರ್ಮಿಕ ದೃಷ್ಟಿಯ ಮುಕ್ತತೆಯನ್ನು ವ್ಯಂಜಿಸುವ ಹಾಗೆಯೇ ಭಗವಲ್ಲೀಲೆಯನ್ನೂ, ಆ ಲೀಲೆಗೆ ಬೆರಗಾಗಿ ಶಿವನೇ ಕುತೂಹಲಗೊಂಡು ಬರುವುದನ್ನೂ ಆಕರ್ಷಕವಾಗಿ ಮಾಡಿಬಿಡುತ್ತದೆ"(ಸಿದ್ಧಲಿಂಗಯ್ಯ ಜಿ.ಎಸ್., ೧೯೯೭:೫೧) ಈ ಕೀರ್ತನೆಯೂ 'ಅನುಕ್ತಕಥನ' ತಂತ್ರದಿಂದ ಕೂಡಿದೆ.

### ೫. ಕ್ರೋಢೀಕರಣ

ಮೂಲದಲ್ಲಿ ಬಿಡಿಬಿಡಿಯಾಗಿ ಹೇಳಿರುವುದನ್ನು ದಾಸರು ಒಂದೇ ಕಡೆ ಕ್ರೋಢೀಕರಿಸಿ ಹೇಳುವ ಮೂಲಕ ಸಾಧಿಸಿದ ವೃದ್ಧಿಯನ್ನು 'ಕ್ರೋಢೀಕರಣ' ಎಂದು ಕರೆಯುತ್ತವೆ. ಒಂದೇ ತತ್ವ ಅಥವಾ

ಮೌಲ್ಯವನ್ನು ತಿಳಿಸುವ ಅನೇಕ ಪ್ರಸಂಗಗಳು ಭಾಗವತದ ಬೇರೆ ಬೇರೆ ಕಡೆ ಇದ್ದಾಗ ಅವುಗಳನ್ನು ಒಟ್ಟಿಗೆ ತಂದು ಸೂತ್ರೀಕರಿಸಿ ಹೇಳುವ ಈ ವಿಧಾನವು ಹರಿದಾಸ ಸಾಹಿತ್ಯದ 'ಋಣ ಮತ್ತು ವೃದ್ಧಿ'ಯ ಪ್ರಧಾನ ಮಾದರಿಯಾಗಿದೆ.

ಭಾಗವತದಲ್ಲಿ ಬೇರೆ ಬೇರೆ ಕಡೆ ಬಂದಿರುವ ದಶಾವತಾರದ ಕತೆಗಳು ಒಂದು ಅನುಕ್ರಮದಲ್ಲೂ ಇರಲಿಲ್ಲ. ಎಲ್ಲ ಹರಿದಾಸರು ಅವುಗಳನ್ನು ತಮ್ಮ 'ದಶಾವತಾರ ವರ್ಣನೆ'ಯ ಕವನಗಳಲ್ಲಿ ಒಂದೇ ಕಡೆ ಕ್ರೋಢೀಕರಿಸಿ ಹೇಳಿದ್ದಾರೆ. ಕನಕದಾಸರು : 'ನೋಡಯ್ಯ ನಿನ್ನ ದಾಸರ ಮೇಲೆ ಕೃಪೆಗಳನು ಮಾಡಯ್ಯ ಮನ್ಮನಕೆ ಸಂತಸವನು' ಎಂಬ ೧೧ ನುಡಿಗಳ ದೀರ್ಘ ಕೀರ್ತನೆಯಲ್ಲಿ ಒಂದು ನುಡಿಯಲ್ಲಿ ಒಂದು ಅವತಾರವೆಂಬಂತೆ- ದಶಾವತಾರ ಕಥಾ ಸಂದರ್ಭಗಳನ್ನು ಚಿತ್ರಿಸಿ 'ಕ್ರೋಢೀಕರಣ' ಮಾಡಿದ್ದಾರೆ. ಪುರಂದರದಾಸರ 'ಬಗೆ ಬಗೆ ಆಟಗಳೆಲ್ಲಿ ಕಲಿತ್ಯೋರಂಗ' ಎಂಬ ೨೧ ನುಡಿಗಳ ಕೀರ್ತನೆಯಲ್ಲಿ, ಅನೇಕ ಭಗವದ್ಭಕ್ತರಿಗೆ ಭಗವಂತನು ಒಲಿದ ಕತೆಗಳನ್ನು ಏಕತ್ರ ಸಮಾವೇಶಗೊಳಿಸಲಾಗಿದೆ.

ಕೃಷ್ಣಾವತಾರದ ಚರಿತ್ರೆಗಳನ್ನು ಯಶೋದೆಗೆ ಕೃಷ್ಣನ ಮೂಲಕವೇ ಹೇಳಿಸಿದಂತಿರುವ ಈ ಕೆಳಗಿನ ಕೀರ್ತನೆಯಲ್ಲಿ ಕ್ರೋಢೀಕರಣದ ಕಲಾತ್ಮಕ ಬಳಕೆಯನ್ನು ಕಾಣಬಹುದು.

ಆಡ ಹೋದಲ್ಲಿ ಮಕ್ಕಳು-ಎನ್ನನು |
ಆಡಿಕೊಂಬರು ನೋಡಮ್ಮ ‖ ಪ ‖

ನೋಡಿ ನೋಡಿ ಇತ್ತ ಮುಖವ |
ಮಾಡಿ ಕಣ್ಣ ಮೀಟುವರಮ್ಮ ‖ ಅ.ಪ ‖

ದೇವಕಿ ಪೆತ್ತಳಂತೆ-ವಸು-
ದೇವನೆಂಬವ ಪಿತನಂತೆ ‖
ಕಾವಲಿನೊಳು ಪುಟ್ಟಿದೆನಂತೆ |
ಮಾವ ಕಂಸಗಂಜಿ ಬಂದೆನಂತೆ ‖ ೧

ನೀನೆನ್ನ ಪೆತ್ತಿಲ್ಲವಂತೆ-ಅಮ್ಮಾ |
ನಾನಿನ್ನ ಮಗನಲ್ಲವಂತೆ ‖
ಧೇನು ಕಾಯುವರಿಲ್ಲವೆಂದು ನೀನು |
ಸಾನುರಾಗಿದಿ ಸಲಹಿದೆಯಂತೆ ೨

ವತ್ಸಾಸುರನನು ಕೆಡಹಿದೆನಂತೆ |
ಕಿಚ್ಚನೆಲ್ಲವನು ನುಂಗಿದೆನಂತೆ ‖
ಕಚ್ಚಬಂದ ಕಾಳಿಂಗನಾ ಹೆಡೆ |
ಚಚ್ಚಿ ತುಳಿದು ಓಡಿದೆನಂತೆ ‖ ೩

ಒರಳನೆಳೆತಂದು ಮತ್ತಿ |
ಮರವ ಮುರಿದೋಡಿದೆನಂತೆ ||
ತರಳೆಯರ ವಸ್ತ್ರವ ಕದ್ದು |
ತರುವನೇರಿದೆನಂತೆ
* * * *

ದಾಸರು ಮಧುಕರ ವೃತ್ತಿಗಾಗಿ ಒಂದು ಮನೆಯಿಂದ ಮತ್ತೊಂದು ಮನೆಯ ಅಂಗಳ ತುಳಿಯುವಷ್ಟರಲ್ಲಿ ಒಂದು ಕೀರ್ತನೆಯನ್ನು ಹಾಡುತ್ತಿರಬಹುದೆಂದು ಊಹಿಸಿಕೊಂಡರೆ; ಅಲ್ಪ ಕಾಲಮಿತಿಯಲ್ಲಿ, ಭಾಗವತವನ್ನು ಬಣ್ಣಿಸುವ ಸಲುವಾಗಿ 'ಕ್ರೋಢೀಕರಣ' ವಿಧಾನವನ್ನು ಆಯ್ದುಕೊಳ್ಳುವ ಅನಿವಾರ್ಯತೆ ಎದುರಾದಂತೆ ಕಾಣುತ್ತದೆ. ಆಗ ಹರಿದಾಸರು 'ಮಧುಕರ'ನಂತೆ ಭಾಗವತೋದ್ಯಾನದಲ್ಲಿ ವಿಹರಿಸಿ ಅಲ್ಲಿಯ ಸಾರವನ್ನೆಲ್ಲ ಸಂಗ್ರಹಿಸಿ ಕ್ರೋಢೀಕರಿಸಿದ್ದಾರೆನ್ನಬಹುದು. ಈ ಮಾತು ಕಾವ್ಯಾತ್ಮಕವಾಗಿ ಕಂಡರೂ, ಸತ್ಯಕ್ಕೆ ಹತ್ತಿರವಾಗಿದೆ ಎಂಬುದನ್ನು ನಿರಾಕರಿಸುವಂತಿಲ್ಲ.

### ೬. ಶಂಕಾ ಪರಿಹಾರ

ಮೂಲದಲ್ಲಿ ಹೇಳಿದ ವಿಷಯದ ಮೇಲೆ ಹೆಚ್ಚಿನ ಪ್ರಶ್ನೆಗಳನ್ನು ಹಾಕಿಕೊಂಡು ಉತ್ತರಿಸಿ ಮೂಲದ ಅಭಿಪ್ರಾಯವನ್ನು ಸಮರ್ಥಿಸುವ ಮೂಲಕ ವೃದ್ಧಿಸುವುದನ್ನು 'ಶಂಕಾಪರಿಹಾರ' ಎನ್ನಬಹುದು.

ಭಾಗವತ ಸಪ್ತಮಸ್ಕಂಧದಲ್ಲಿ ನಾರದರು ಧರ್ಮರಾಜನಿಗೆ ಹೇಳಿದ ಪಂಚವಿಧ ಭಕ್ತಿ ಪ್ರಕಾರಗಳಲ್ಲಿ 'ದ್ವೇಷವೂ' ಒಂದು. "ದ್ವೇಷದಿಂದಾಗಲಿ, ಭಕ್ತಿಯಿಂದಾಗಲಿ, ಭಯದಿಂದಾಗಲಿ, ಸ್ನೇಹದಿಂದಾಗಲಿ, ಕಾಮದಿಂದಾಗಲಿ, ಬೇರೇ ದೃಷ್ಟಿಯಿಲ್ಲದೆ ಭಗವಂತನಲ್ಲಿ ಮನಸ್ಸನ್ನು ಕೇಂದ್ರೀಕರಿಸಬೇಕು. ಲೋಕದಲ್ಲಿ ಪುರುಷನು ದ್ವೇಷದಿಂದೆಂತು ಭಗವಂತನ ಸಾಯುಜ್ಯವನ್ನು ಪಡೆಯುವನೋ ಅಂತು ಭಕ್ತಿಯೋಗದಿಂದ ಪಡೆಯಲಾರರೆಂಬುದೇ ನನ್ನ ಅಭಿಪ್ರಾಯವು"(ಭಾಗವತ: ೭-೧-೨೬-೨೭) ಹಾಗಾದರೆ ನಾವೂ ಭಗವಂತನನ್ನು ದ್ವೇಷಿಸಬಹುದೆ? ಅಥವಾ ಇದನ್ನು ಅರ್ಥಮಾಡಿಕೊಳ್ಳುವುದಾದರೂ ಹೇಗೆ? ಎಂಬ ಪ್ರಶ್ನೆಗಳು ಎದುರಾಗುತ್ತದೆ. ವಾದಿರಾಜರು ಒಂದು ಸುಳಾದಿಯಲ್ಲಿ ಈ ಪ್ರಶ್ನೆ ಹಾಕಿಕೊಂಡು ಉತ್ತರಿಸಿದ್ದಾರೆ.

ದ್ವೇಷದಿ ಚೈದ್ಯ ಮುಕ್ತನಾದನೆಂಬುಕ್ತಿಬಲು
ದ್ವೇಷವಿದ್ದರೂ ತನ್ನವರ ಬಿಡನೆಂಬುದು
ದ್ವೇಷಿಯ ಪೋಷಿಸೆ ಬಂತೈಸೆ ಭಕ್ತಿಯ ಮಹಿಮೆ
ದ್ವೇಷದಿಂದಲೆ ಮುಕ್ತಿಯೆಂಬುದಾತನ ಮತ
ಶ್ಯಾಶಯದಲ್ಲಿ ನಿತ್ಯರತ ಅಸುರಕೃತ
ದ್ವೇಷವ ತಾಳಿ ಹಯವದನ ಕಾಯಿದನೆಂದು

‘ದ್ವೇಷಿಯಾದ ದೈತ್ಯನ ಜೊತೆಗೆ ಒಂದೇ ದೇಹದಲ್ಲಿದ್ದು ಭಕ್ತಿ ಮಾಡುತ್ತಿದ್ದ (ವೈಕುಂಠ ದ್ವಾರಪಾಲಕನಾದ) ‘ಜಯ’ ಎಂಬ ಜೀವಿಗೆ ಮುಕ್ತಿಯಾಯಿತೇ ಹೊರತು ದ್ವೇಷ ಮಾಡಿದ ರಾಕ್ಷಸನಿಗಲ್ಲ.’ ದ್ವೇಷದಿಂದ ಶಿಶುಪಾಲ ಮುಕ್ತನಾದನೆಂದರೆ, ತನ್ನ ದ್ವೇಷಿಯಾದ ದೈತ್ಯನ ಸಹವಾಸದಲ್ಲಿದ್ದರೂ ಶ್ರೀಹರಿ ಭಕ್ತರನ್ನು ಕೈಬಿಡುವುದಿಲ್ಲ ಎಂದೇ ತಿಳಿಯಬೇಕು’ ಎಂದು ‘ಮೂಲ’ದ ಅಭಿಪ್ರಾಯವನ್ನು ಸಮರ್ಥಿಸಿದ್ದಾರೆ. ಮುಂದುವರಿದು

ದೈತ್ಯಕುಲದಲ್ಲಿ ಜನಿಸಿದ ಪ್ರಹ್ಲಾದನಿಗೆ
ಭಕ್ತಿಯಿದ್ದುದರಿಂದ ಮುಕ್ತಿಯಾಯಿತು ಗಡ
ಚಿತ್ರವೀತನ ಬಲದಿ ಪಾತಕಿ ಪಿತನಿಗೆ
ಮುಕ್ತಿ ಸೇರಿತು ಶುಕಮುನಿಪನೊರೆದ ಗಡ
ಭಕ್ತರಲ್ಲದೆ ಹಯವದನದ್ವೇಷಿ ಕೆಲರು
ಮುಕ್ತಿ ಪಥವೇರಿದರೆ ಸುತನ ಬಲವ್ಯಾತಕೆ

ಎಂದು ಸಪ್ತಮಸ್ಕಂಧದ ಪ್ರಹ್ಲಾದ ಚರಿತ್ರೆಯ ಆಧಾರದಿಂದ ಈ ಅಭಿಪ್ರಾಯವನ್ನು ಎತ್ತಿ ಹಿಡಿದಿದ್ದಾರೆ. ಹರಿದಾಸರ ತತ್ವಪ್ರತಿಪಾದಕ ಕೃತಿಗಳಲ್ಲಿ ಈ ರೀತಿಯ ಋಣ ಮತ್ತು ವೃದ್ಧಿ ಕಂಡುಬರುತ್ತದೆ.

### ೭. ಅಪವ್ಯಾಖ್ಯಾನ ನಿರಾಕರಣ

‘ಮೂಲ’ಕ್ಕೆ ಕಾಲಕ್ರಮದಲ್ಲಿ ಹುಟ್ಟಿಕೊಂಡ ಅಪವ್ಯಾಖ್ಯಾನವನ್ನು ನಿರಾಕರಿಸಿ, ಸೂಕ್ತ ವ್ಯಾಖ್ಯಾನ ನೀಡುವುದು ಒಂದು ರೀತಿಯ ವೃದ್ಧಿಯೇ. ಶಾಸ್ತ್ರವೇತ್ತರಾದ ಹರಿದಾಸರು ತಮ್ಮ ಸರಳ ಕನ್ನಡ ಪದ ಪದ್ಯಗಳಲ್ಲಿ ಇಂತಹ ಕಾರ್ಯವನ್ನು ಮಾಡಿರುವುದು ಸೋಜಿಗವೆನಿಸುತ್ತದೆ.

ವಾದಿರಾಜರ ಲಕ್ಷ್ಮೀಶೋಭಾನೆ ಈ ಮಾದರಿಯ ಉತ್ತಮ ಉದಾಹರಣೆಯಾಗಿದೆ. ಮುಂದಿನ ಅಧ್ಯಾಯಗಳಲ್ಲಿ ಅದರ ವಿವರಣೆ ಬಂದಿದೆ.

### ೮. ಛಂದೋಪ್ರಕಾರದಲ್ಲಿ ಬದಲಾವಣೆ

ಭಾಗವತದ ಸಂಸ್ಕೃತ-ಶ್ಲೋಕ-ವೃತ್ತ-ಗದ್ಯಗಳನ್ನು ದಾಸರು ಕನ್ನಡ ಹಾಡುಗಬ್ಬಗಳನ್ನಾಗಿ ರೂಪಾಂತರಿಸಿ ಹಾಡುವ ಮೂಲಕ ಸಾಧಿಸಿದ ವೃದ್ಧಿಯನ್ನು ಇಲ್ಲಿ ಚರ್ಚಿಸಬಹುದು.

ಶ್ರೀಮದ್ಭಾಗವತ ಹಾಗೂ ಹರಿದಾಸ ಸಾಹಿತ್ಯಕ್ಕೆ ಆಕರವಾದ ಇತರ ಬಹುಪಾಲು ಗ್ರಂಥಗಳೆಲ್ಲ ಸಂಸ್ಕೃತ ಶ್ಲೋಕರೂಪದಲ್ಲಿವೆ. ಅಲ್ಲಲ್ಲಿ ವೈವಿಧ್ಯಕ್ಕಾಗಿ ವಿವಿಧ ವೃತ್ತಗಳನ್ನೂ, ವಿರಳವಾಗಿ ಕೆಲವೇ ಸಂದರ್ಭಗಳಲ್ಲಿ ಗದ್ಯವನ್ನೂ ಒಳಗೊಂಡಿವೆ.[illegible] ದಾಸರು ಅವನ್ನು ಸರಳ ಕನ್ನಡ ಪದ-ಪದ್ಯ-ಸುಳಾದಿ-ಉಗಭೋಗ-ಷಟ್ಪದಿ-ಸುವ್ವಾಲಿಗಳಂತಹ ಅಚ್ಚ ದೇಸೀ ಪ್ರಕಾರಗಳಲ್ಲಿ ವೃದ್ಧಿಪಡಿಸಿದ್ದಾರೆ. ಮತ್ತು ಇಂತಹ ಬದಲಾವಣೆಯು ಅಗತ್ಯವೆಂದು ಪ್ರತಿಪಾದಿಸಿದ್ದಾರೆ.

ಪ್ರೊ.ಜಿ.ಎಸ್.ಸಿದ್ಧಲಿಂಗಯ್ಯ ಅವರು ದಾಸರಲ್ಲಿ ಈ ರೀತಿಯ ಛಂದೋಪ್ರಕಾರದ ಬದಲಾವಣೆಯ ಕಾರಣವನ್ನು ಗುರುತಿಸಿದ್ದಾರೆ. "ಹಾಡುವಾಗ ದಾಸರು ಹರಿನಾಮ ಸಂಕೀರ್ತನವನ್ನೇ ಅಲ್ಲದೆ ಪುರಾಣ ಕಥೆಗಳನ್ನು ಜನರಿಗೆ ಹೇಳಬೇಕಾಗುತ್ತಿತ್ತು. ಜನಪದರಲ್ಲಿರುವ ಕೋಲಾಟ, ಒಗಟು, ಭಜನೆ, ಲಾಲಿ, ಸುವ್ವಾಲಿ, ಶಕುನ, ತ್ರಿಪದಿ, ಚೌಪದಿ, ಕಂದ ಇವುಗಳನ್ನೆಲ್ಲ ಬಳಸಿಕೊಳ್ಳಬೇಕಾಗುತ್ತಿತ್ತು. ಜನರಿಗೆ ಹಾಡುವ ಹಾಡು ಮುಟ್ಟಲೆಂದು ಜನಪದ ಮಟ್ಟುಗಳನ್ನು ಹಾಗೂ ಜೀವನಾನುಭವವನ್ನು ಬಳಸಿಕೊಳ್ಳಬೇಕಾಗುತ್ತಿತ್ತು"(ಸಿದ್ಧಲಿಂಗಯ್ಯ ಜಿ.ಎಸ್., ೧೯೯೭:೧೧). ಹರಿದಾಸರ ಎಲ್ಲ ರಚನೆಗಳು ಈ ವಿಧಾನಕ್ಕೆ ಉದಾಹರಣೆಯಾಗಬಲ್ಲವು. "ಹೊಸಗನ್ನಡ ಕಾವ್ಯದ ನಾಡಿಯಲ್ಲಿ ಕನ್ನಡದ ಲಯ ಮಿಡಿಯುತ್ತದೆ. ಇಂದಿನ ಛಂದೋ ವಿಲಾಸವನ್ನು ನೋಡಿದರೆ ಕೀರ್ತನೆಗಳ ಋಣ ಎದ್ದು ಕಾಣುತ್ತದೆ"(ದಿವಾಣಜಿ, ೧೯೭೨:೧೭೪) ಎಂಬ ಮಾತುಗಳು ಮೇಲಿನ ಅಭಿಪ್ರಾಯಕ್ಕೆ ಪೂರಕವಾಗಿವೆ.

ಅವರ ಭಾಷೆಯ ಬಗ್ಗೆ ಇಲ್ಲೇ ಒಂದೆರಡು ಮಾತನ್ನು ಹೇಳಬೇಕು. "ಹರಿದಾಸರು ಕೈಗೊಂಡ ಕೆಲಸ ನಡೆದದ್ದು ಜನಸಾಮಾನ್ಯರ ನಡುವೆಯೇ ಜನಸಾಮಾನ್ಯರ ಸಲುವಾಗಿಯೇ, ಜನ ಸಾಮಾನ್ಯರ ನೆಲೆಯಲ್ಲಿಯೇ. ಹರಿದಾಸರೂ ಜನಸಾಮಾನ್ಯರೇ ಇದು ಮುಖ್ಯವಾದ ವಿಚಾರ. ಅವರು ಜನಸಾಮಾನ್ಯರ ಅರಿವಿಗೆ ಬರುವಂಥ ಕನ್ನಡ ನುಡಿಯನ್ನೇ ಬಳಸಿಕೊಂಡರು. ಜನರ ದಿನನಿತ್ಯದ ಬದುಕಿನ ವಿಚಾರಗಳನ್ನೇ ಎತ್ತಿಕೊಂಡರು. ನುಡಿಕಟ್ಟಿನಲ್ಲಿಯೂ ಕ್ಲಿಷ್ಟತೆಯನ್ನು ಕೈಬಿಟ್ಟರು. ಸರಳತೆಗೆ ಒಲಿದರು. ತಾವು ಪಂಡಿತರಾದರೂ, ಜನರೆದುರು ತಮ್ಮ ಪಾಂಡಿತ್ಯ ವನ್ನು ಮೆರೆಯಲಿಲ್ಲ. ತಮ್ಮ ಮಾತುಗಳಿಗೆ ಶಾಸ್ತ್ರದ ಒತ್ತಾಸೆಯಿದ್ದರೂ ಶಾಸ್ತ್ರದ ಸೊಲ್ಲನ್ನು ಎತ್ತಿ ಹಿಡಿಯಲಿಲ್ಲ. ಆಧ್ಯಾತ್ಮವು ಜನರಿಗೆ ದಕ್ಕಬೇಕೆಂದೇ ಅವರು ದಾಸರಾದುದು"(ರಾಮಚಂದ್ರರಾವ್ ಸಾ.ಕೃ., ೨೦೦೩:೨೧೦).

ದಾಸರ ಭಾಷೆ ನಡುಗನ್ನಡವಾದರೂ ಬಗೆಬಗೆಯ ವಾಕ್ಯ ವಿನ್ಯಾಸಗಳು ಹೊಸಗನ್ನಡಕ್ಕೆ ಅತ್ಯಂತ ಸಮೀಪದಲ್ಲಿವೆ. ವಿವಿಧ ಪ್ರಾಂತಗಳ, ವರ್ಗಗಳ ಜಗಬಳಕೆಯ ಪರಿಣಾಮವಾಗಿ ಅವುಗಳ ಭಾಷಾ ಸ್ವರೂಪ ಹೊಚ್ಚ ಹೊಸದಾಗಿದೆ. ಪುಟ್ಟ ಪುಟ್ಟ ವಾಕ್ಯಗಳ ರಚನೆ ಅವರ ಒಂದು ಮುಖ್ಯ ಲಕ್ಷಣವಾಗಿದೆ.

ಹೀಗೆ ಹರಿದಾಸರು ಸಂಸ್ಕೃತ ಭಾಗವತದ ಭಾಷೆ ಹಾಗೂ ಬಂಧದಲ್ಲಿ ಮಾಡಿಕೊಂಡ ಬದಲಾವಣೆಯಿಂದ ಆ ಪುರಾಣವು ಕನ್ನಡಿಗರಿಗೆ ತಲುಪಲು ಸಾಧ್ಯವಾಯಿತು. ಹೀಗಾಗಿ ಅವರ ಈ ಮಾರ್ಪಾಡು 'ವೃದ್ಧಿ'ಯ ಮೂಲಭೂತ ಲಕ್ಷಣವೆಂದು ಹೇಳಬಹುದು.

ಋಣ ಮತ್ತು ವೃದ್ಧಿಯ ಈ ಎಂಟು ವಿಧಾನಗಳು ಹರಿದಾಸಸಾಹಿತ್ಯದ ಭಾಗವತ ಪ್ರತಿಪಾದನೆಯ ವಿವಿಧ ಸಂದರ್ಭಗಳಲ್ಲಿ ಹೇಗೆ ಕ್ರಿಯಾಶೀಲವಾಗಿವೆ ಎಂಬುದನ್ನು ಮುಂದಿನ ಮೂರು ಅಧ್ಯಾಯಗಳಲ್ಲಿ ವಿವೇಚಿಸಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಈ ಬಗ್ಗೆ ವಿವರಗಳಿಗಾಗಿ ಡಾ.ಪ್ರಧಾನ್ ಗುರುದತ್ತ ಅವರ 'ಕೃಷ್ಣ ಕಥೆಯ ಉಗಮ ಮತ್ತು ವಿಕಾಸ', ಡಾ.ನಾರಾಯಣಾಚಾರ್ಯ ಧೂಳಖೇಡ ಅವರ 'ಹರಿಕಥಾಮೃತಸಾರ ಮತ್ತು ಭಾಗವತಧರ್ಮ' ಮುಂತಾದ ಗ್ರಂಥಗಳನ್ನು ನೋಡಬಹುದು.

೨. **ಭಾಗವತ ಸಂಬಂಧವಾದ ವಾರ್ಷಿಕ ಆಚರಣೆಗಳು :** ಮತ್ಸ್ಯಜಯಂತಿ (ಚೈತ್ರಶುಕ್ಲ ತದಿಗೆ), ರಾಮನವಮೀ (ಚೈತ್ರ ಶುಕ್ಲ ನವಮಿ), ಗಂಗೋತ್ಪತ್ತಿ (ಜಹ್ನುಋಷಿಯ ಕಿವಿಯಿಂದ; ವೈಶಾಖ ಶುಕ್ಲ ಸಪ್ತಮಿ), ವೇದವ್ಯಾಸ ಜಯಂತಿ (ವೈಶಾಖ ಶುಕ್ಲ ದ್ವಾದಶಿ), ನರಸಿಂಹ ಜಯಂತಿ (ವೈಶಾಖ ಶು.ಚತುರ್ದಶಿ), ಕೂರ್ಮಜಯಂತಿ (ವೈಶಾಖ ಶು.ಪೂರ್ಣಿಮಾ), ಗಂಗಾಜಯಂತೀ : ಭಗೀರಥನಿಗೊಲಿದು ಭೂಮಿಗೆ ಬಂದ ದಿನ (ಜ್ಯೇಷ್ಠ ಶು.ದಶಮಿ), ಸೂತಪುರಾಣಿಕರ ಪುಣ್ಯದಿನ (ಆಷಾಢ. ಶು.ತ್ರಯೋದಶಿ), ಕಲ್ಕಿ ಜಯಂತಿ (ಶ್ರಾವಣ ಶು.ಷಷ್ಠಿ), ಹಯಗ್ರೀವ ಜಯಂತಿ (ಶ್ರಾವಣ ಶು.ಪೂರ್ಣಿಮಾ), ಕೃಷ್ಣ ಜಯಂತಿ (ಶ್ರಾವಣ ಕೃಷ್ಣ ಅಷ್ಟಮೀ), ವರಾಹ ಜಯಂತಿ (ಭಾದ್ರಪದ ಶು.ತದಿಗೆ), ವಾಮನ ಜಯಂತಿ (ಭಾದ್ರಪದ ಶು.ದ್ವಾದಶಿ), ಬುದ್ಧ ಜಯಂತಿ (ಆಶ್ವೀಜ ಶು.ದಶಮಿ), ನರಕ ಚತುರ್ದಶಿ (ಆಶ್ವೀಜ ಕೃ.ಚತುರ್ದಶಿ), ಬಲಿಪ್ರತಿಪದೆ (ಕಾರ್ತೀಕ ಶು.ಪಾಡ್ಯ), ಗೋಪಾಷ್ಟಮಿ (ಕಾರ್ತೀಕ ಶು.ಅಷ್ಟಮಿ), ಧನ್ವಂತರಿ ಜಯಂತಿ (ಕಾರ್ತೀಕ ಕೃ.ದ್ವಾದಶಿ), ಗೀತಾಜಯಂತಿ (ಮಾರ್ಗಶಿರ ಶು.ಏಕಾದಶಿ), ಭೀಷ್ಮಾಷ್ಟಮಿ (ಮಾಘ ಶುಕ್ಲ ಅಷ್ಟಮಿ), ವ್ಯಾಸಪೂರ್ಣಿಮಾ (೪: ವೈಶಾಖ, ಆಷಾಢ, ಕಾರ್ತೀಕ, ಮಾಘ, ಹುಣ್ಣಿಮೆಗಳು) ಏಕಾದಶೀ (ವರ್ಷಕ್ಕೆ ಕನಿಷ್ಠ ೨೪), ಚಾತುರ್ಮಾಸ್ಯ (ಆಷಾಢ ಶುಕ್ಲ ಏಕಾದಶಿಯಿಂದ ಕಾರ್ತಿಕ ಶುಕ್ಲ ಏಕಾದಶಿವರೆಗಿನ ನಾಲ್ಕು ತಿಂಗಳು) ಇತ್ಯಾದಿ.

೩. ವಾದಿರಾಜರ 'ತೀರ್ಥಪ್ರಬಂಧ' ಎಂಬ ಸಂಸ್ಕೃತ ಶ್ಲೋಕರೂಪದ ಪ್ರವಾಸ ಕಥನದಲ್ಲಿ ತೀರ್ಥಕ್ಷೇತ್ರಗಳಲ್ಲಿ ಭಾಗವತೋಕ್ತ ಕಥಾ ಸಂದರ್ಭಗಳನ್ನು ಚಿಂತಿಸಿರುವ ಅನೇಕ ನಿದರ್ಶನಗಳನ್ನು ಕಾಣಬಹುದಾಗಿದೆ.

೪. ಶ್ಲೋಕಾರ್ಧಂ ಶ್ಲೋಕಪಾದಂ ವಾ ನಿತ್ಯಂ ಭಾಗವತೋದ್ಭವಂ |
ಪಠೇತ್ ಶೃಣೋತಿ ಯೋ ಭಕ್ತ್ಯಾ ಗೋಸಹಸ್ರ ಫಲಂ ಲಭೇತ್||
ದುರ್ಲಭೈವ ಕಥಾ ಲೋಕೇ ಶ್ರೀಮದ್ಭಾಗವತೋದ್ಭವಾ|
ಕೋಟಿಜನ್ಮ ಸಮುತ್ಥೇನ ಪುಣ್ಯೇನೈವ ತು ಲಭ್ಯತೇ||

(ಶ್ರೀಮದ್ಭಾಗವತದ ಅರ್ಧಶ್ಲೋಕವನ್ನಾಗಲೀ, ಒಂದು ಪಾದವನ್ನಾಗಲಿ ಪ್ರತಿನಿತ್ಯವೂ ಯಾರು ಹೇಳುತ್ತಾರೋ, ಯಾರು ಕೇಳುತ್ತಾರೋ ಅವರಿಗೆ ಸಾವಿರಾರು ಗೋದಾನಗಳ ಫಲವು ದೊರೆಯುತ್ತದೆ. ಶ್ರೀಮದ್ಭಾಗವತದಲ್ಲಿ ಹೇಳಿರುವ ಕಥೆಯು ಭಗವನ್ಮಹಿಮೆಯು ಸುಲಭವಾಗಿ ದೊರಕುವುದಿಲ್ಲ. ಕೋಟ್ಯಂತರ ಜನ್ಮಗಳ ಪುಣ್ಯಫಲದ ಪರಿಪಾಕದಿಂದ ಮಾತ್ರ ದೊರಕೀತು ಮುಂತಾದ ಮಾತುಗಳು ಜನಜನಿತವಾಗಿವೆ.)

೫. ನಾರಾಯಣ ಪಂಡಿತಾಚಾರ್ಯರು ರಚಿಸಿದ ಈ ಕಾವ್ಯದಿಂದ ಮಧ್ವಾಚಾರ್ಯರ ಭಾಗವತ ವಿನಿಯೋಗದ ಮಾಹಿತಿಗಳನ್ನು ಸಂಗ್ರಹಿಸಿದೆ.

೬. ಯದುಪತಿ ಆಚಾರ್ಯರು ಈ ಗ್ರಂಥದ ಪಾರಾಯಣ ಚಿಂತನ ವ್ಯಾಖ್ಯಾನಗಳನ್ನು ಸತತವಾಗಿ ನಡೆಸಿದ ಮಹನೀಯರು. ಗತಿಸಿದ ನಂತರ ಅವರ ಅಸ್ಥಿಗಳನ್ನು ಪುಣ್ಯ ನದಿಗಳಲ್ಲಿ ವಿಸರ್ಜಿಸಲು ಹೋದ ಬಂಧುಗಳಿಗೆ ಆ ಮೂಳೆಗಳಿಂದಲೂ ಶ್ರೀಮದ್ಭಾಗವತ ಶ್ಲೋಕಗಳ ಧ್ವನಿ ಕೇಳಿ ಬಂತು ಎಂಬ ಐತಿಹ್ಯವಿದೆ. ಈ ಐತಿಹ್ಯವು ಅವರ ಭಾಗವತಪ್ರೇಮವನ್ನು ಸೂಚಿಸುವ ಸಮರ್ಥ ಸಂಕೇತವಾಗಿದೆ.

೭. 'ಪ್ರಕಟ ಗ್ರಂಥಗಳೆಲ್ಲ ಭಾರತದ ಹಿಂದೆ' ಎಂಬ ಪಾಠಾಂತರವೂ ಅಲ್ಲಲ್ಲಿ ಕಂಡುಬರುತ್ತದೆ. ಆದರೆ 'ಭಾಗವತದ ಹಿಂದೆ' ಎಂಬ ಪಾಠವು ಬಹುಪ್ರಚುರವಾಗಿದೆ. "ಇತಿಹಾಸ ಗ್ರಂಥಗಳಲ್ಲಿ ಮಹಾಭಾರತ ಶ್ರೇಷ್ಠವಾದರೆ ಪುರಾಣ ಗ್ರಂಥಗಳಲ್ಲಿ ಭಾಗವತ ಶ್ರೇಷ್ಠ"(ರಾಮಚಂದ್ರ ಆಚಾರ್ಯ, ೧೯೮೮:೧೧) ಎಂಬ ವಿಭಾಗದಿಂದ ನೋಡುವುದೇ ಉಚಿತವೆನಿಸುತ್ತದೆ.

೮. ದ್ವಾದಶಸ್ತೋತ್ರವು ಹರಿದಾಸ ಸಾಹಿತ್ಯದ 'ವಸ್ತು' ಮತ್ತು 'ರೀತಿ'ಗಳನ್ನು ನಿರ್ಧರಿಸುವಲ್ಲಿ ಯಾವ ಪಾತ್ರವಹಿಸಿದೆ ಎಂಬುದನ್ನು ವಿವೇಚಿಸಲು ಈ ವಿವರಣೆ ಸಹಾಯಕವಾಗುತ್ತವೆ.

೯. ಪ್ರೊ.ಎ.ವಿ.ನಾವಡ ಅವರು ಸಂಪಾದಿಸಿದ 'ವಾದಿರಾಜರ ಶ್ರೀಕೃಷ್ಣ ಬಾಲಲೀಲೆ'ಯ ಪ್ರಸ್ತಾವನೆಯಲ್ಲಿ ಈ ಬಗ್ಗೆ ವಿವರಗಳಿವೆ.

೧೦. 'ತದ್ಭಾಗವತ ಮಹಾತ್ಮ್ಯಂ ಭಗವದ್ಭಕ್ತಿ ವರ್ಧನಂ' (ಭಾಗವತ ೭-೧-೪)ಅವನ ಭಕ್ತರ ಮಹಿಮೆಗಳನ್ನು ತಿಳಿದರೆ ಮಹಾತ್ಮ್ಯ ಜ್ಞಾನದಿಂದಾಗಿ ಭಗವದ್ಭಕ್ತಿ ಹೆಚ್ಚುತ್ತದೆ.

೧೧. ಪ್ರಸ್ತುತ ಅಧ್ಯಯನದ ೬.೧.ನೇ ಅಧ್ಯಾಯದಲ್ಲಿ ಯಥಾಗಾತ್ರ ರೂಪಾಂತರಕ್ಕೆ ಕೆಲವು ಉದಾಹರಣೆಗಳನ್ನು ನೋಡಬಹುದು.

೧೨. ಸಂಸ್ಕೃತ ಬಲ್ಲವರಿಗೇ ಅರ್ಥವಾಗದಷ್ಟು ಪ್ರೌಢ ಭಾಗಗಳೂ ಇವೆ. ಹರಿದಾಸರು ಕನ್ನಡ ಕೀರ್ತನೆಗಳಲ್ಲಿ ಅಲ್ಲಿಯ ಸಾರವನ್ನು ತಂದು ವೃದ್ಧಿಸದಿದ್ದರೆ ಕನ್ನಡ ಮಾತ್ರ ಬಲ್ಲ ಕೋಟ್ಯಂತರ ಜನರಿಗೆ ಭಾಗವತ ತಲುಪುತ್ತಿರಲಿಲ್ಲವೆಂಬುದನ್ನು ಗುರುತಿಸಬೇಕು.

೫

# ಕಥನದಲ್ಲಿ ಋಣ ಮತ್ತು ವೃದ್ಧಿ

## ೫.೧. ಕಥನದ ಮಾದರಿಗಳು

ಕಥನಶಾಸ್ತ್ರಜ್ಞರು[೧](Narratologists) ನಾಟಕವನ್ನು ಹೊರತುಪಡಿಸಿ ಉಳಿದೆಲ್ಲ ಸಾಹಿತ್ಯ ಪ್ರಭೇದಗಳನ್ನು 'ಕಥನ'(Narration) ಎಂದು ಪರಿಗಣಿಸುತ್ತಾರೆ. ಅಂದರೆ ಕಥಿಸಲ್ಪಟ್ಟದ್ದೆಲ್ಲ ಕಥನವಾಗುತ್ತದೆ. ಕಥನಕ್ಕೆ 'ಕತೆ', 'ಕಥನಕಾರ' 'ಕಥನಕ್ರಿಯೆ' ಮತ್ತು (ಯಾರಿಗಾಗಿ ಕಥನವೋ ಅಂಥ) 'ಶ್ರೋತೃ' ಎಂಬ ನಾಲ್ಕು ಪರಿಮಾಣಗಳಿವೆ.

ಈ ದೃಷ್ಟಿಯಿಂದ ವಿವೇಚಿಸುವಾಗ 'ಕತೆ' ಭಾಗವತದ್ದು. 'ಕಥನಕಾರ'ರಾದ ದಾಸರು ಸಮಗ್ರ ಭಾಗವತವನ್ನು ಭಾಷಾಂತರಿಸಲು ಹೊರಟವರಲ್ಲ; ಸರಳವಾಗಿ ಪುನಾರಚಿಸಿಲು ಯತ್ನಿಸಿದವರು. ಹರಿದಾಸರ ಕಥನ ಕ್ರಿಯೆಯ ಗುರಿಯಾದ 'ಕೇಳುಗ'ರು ಕನ್ನಡಿಗರಾದ ಸಮಸ್ತ ಭಾಗವತಪ್ರಿಯರು. ಅವರು ಒಂದೊಮ್ಮೆ ಅನಕ್ಷರಸ್ಥರಾಗಿರಬಹುದಾದರೂ ಅವಿದ್ಯಾವಂತರಲ್ಲ. ಭಾಗವತ ವಸ್ತುವನ್ನು ವಿವಿಧ ಮೂಲಗಳಿಂದ (ಪ್ರದರ್ಶನ ಕಲಾ ಪ್ರಕಾರಗಳಾದ ಭಾಗವತರಾಟ, ಹರಿಕಥೆಗಳ ಮೂಲಕ) ಕಂಡು;

(ಪುರಾಣ ವಾಚನ-ಅನುವಾದದ ಮೂಲಕ) ಮತ್ತೆ ಮತ್ತೆ ಕೇಳಿ ಬಲ್ಲವರು. ಅಲ್ಲಿಯ ಸಾರವನ್ನು ಅನುಭವಿಸಬಲ್ಲ 'ರಸಿಕ'ರು-'ಭಾವುಕ'ರು. ತಮ್ಮ ಸಮಯಾವಕಾಶ ಹಾಗೂ ಅಗತ್ಯಗಳಿಗೆ ಅನುಗುಣವಾಗಿ ನಿತ್ಯವೂ ಭಾಗವತವನ್ನು ಮನನ ಮಾಡುವ ಬಯಕೆ ಉಳ್ಳವರು. ಈ ಹಿನ್ನೆಲೆಯಲ್ಲಿ ಹರಿದಾಸರ ಭಾಗವತ ಕಥನವನ್ನು ಅರ್ಥೈಸಬೇಕಾಗುತ್ತದೆ.

ಹರಿದಾಸರ 'ಕಥನಕ್ರಿಯೆ'ಯ ಸ್ವರೂಪದ ಚರ್ಚೆಗೆ ತೊಡಗುವಾಗ ಅವರ ಭಾಗವತಾಧಾರಿತ ಕೃತಿಗಳನ್ನು ವರ್ಗೀಕರಿಸಿಕೊಳ್ಳುವುದು ಅಗತ್ಯವೆನಿಸುತ್ತದೆ.

ಭಾಗವತದಲ್ಲಿ ಕೆಲವು ಕತೆಗಳಿವೆ. ಅವನ್ನು 'ಚರಿತ್ರೆ', 'ಉಪಾಖ್ಯಾನ' ಎಂಬ ಹೆಸರುಗಳಿಂದಲೂ ಕರೆಯಲಾಗಿದೆ. ಅಂತಹ ಒಂದೊಂದು ಕತೆ ಅಥವಾ ಉಪಾಖ್ಯಾನವನ್ನು ಹರಿದಾಸರು ಪೂರ್ಣವಾಗಿ(ಸಮಗ್ರತೆ ಕೆಡದಂತೆ ಸಂಕ್ಷಿಪ್ತವಾಗಿ) ಕನ್ನಡದಲ್ಲಿ ಪುನಾರಚಿಸಿದ್ದಾರೆ. ಈ ರೀತಿಯ ರಚನೆಗಳನ್ನು 'ಉಪಾಖ್ಯಾನ ಕಥನ'[೨] ಎನ್ನಬಹುದು. ಇದೇ ವಿಧಾನವನ್ನು ವಿಸ್ತಾರವಾದ 'ದಶಮಸ್ಕಂಧ ಕಥನಕ್ಕೆ ಅನ್ವಯಿಸಿಕೊಂಡು ಅದರ ಸಮಗ್ರಸಾರವನ್ನು ನಿರೂಪಿಸಿರುವ ವಾದಿರಾಜರ 'ಶ್ರೀಕೃಷ್ಣ ಬಾಲಲೀಲೆ'[೩]ಯನ್ನು ಪ್ರತ್ಯೇಕವಾಗಿಯೇ ಗಮನಿಸಬೇಕಾಗುತ್ತದೆ.

ಹರಿದಾಸರು ಇತರ ಕೆಲವು ಕಡೆ ಇಡಿಯಾದ ಒಂದು ಕತೆಯನ್ನು ಚಿತ್ರಿಸದೆ ಅಲ್ಲಿಯ ಒಂದು ಸನ್ನಿವೇಶವನ್ನು ಮಾತ್ರ ಪುನಾರಚಿಸಿದ್ದಾರೆ. ಈ ಮಾದರಿಯನ್ನು 'ಸನ್ನಿವೇಶ ಕಥನ' ಎನ್ನಬಹುದು. ಈ ಉಪ-ಅಧ್ಯಾಯದಲ್ಲಿ ಈ ಎರಡೂ ರೀತಿಯ ಕಥನ ಕ್ರಿಯೆಗಳನ್ನು ಉದಾಹರಣೆಗಳೊಂದಿಗೆ ಪರಿಚಯಿಸಲಾಗಿದೆ.

### ೫.೧.೧. ಉಪಾಖ್ಯಾನ ಕಥನ

ಪುರಾಣಕತೆ'ಗಳಲ್ಲಿ ಸ್ತೋತ್ರಗಳು, ಉಪದೇಶಗಳು; ಕತೆಯ ಮಧ್ಯೆಯೇ ಯಾವುದಾದರೂ ಒಂದು ವಿಷಯದ ಹಿನ್ನೆಲೆಯನ್ನು ಹೇಳುವುದು ತಾತ್ವಿಕ ವಿಚಾರಗಳನ್ನು ಚರ್ಚಿಸುವುದು ಮುಂತಾದ ವಿಶೇಷ ಸಾಮಗ್ರಿಗಳ ಭಾರವಿರುತ್ತದೆ. ಹರಿದಾಸರು ಇಂತಹ ಪುರಾಣ ವಸ್ತುಗಳ ಕಥನಕ್ಕೆ ತೊಡಗಿದಾಗ ಕಥೆಯಲ್ಲಿ ಸ್ಥಳೈಕ್ಯ, ಕಾಲೈಕ್ಯ, ಕ್ರಿಯೈಕ್ಯಗಳನ್ನು ಸಾಧಿಸಲು ಮೂಲದ ಕಥಾ ಸಂವಿಧಾನವನ್ನು ಬದಲಾಯಿಸಿಕೊಳ್ಳುತ್ತಾರೆ.

ಕಥನ ಶಾಸ್ತ್ರಜ್ಞರ ಪ್ರಕಾರ ಒಂದು ಕಥನದ 'ಕತೆ' ಬೇರೆ; 'ಸಂವಿಧಾನ' ಬೇರೆ. ಕತೆಯಲ್ಲಿ ವಾಸ್ತವ ಜಗತ್ತಿನಲ್ಲಿ ನಡೆಯುವಂತೆ ದೇಶ-ಕಾಲ ಬದ್ಧವಾದ ವಿವಿಧ ಘಟನೆಗಳನ್ನು ಅವು ನಡೆದ ಕಾಲಕ್ರಮದಲ್ಲಿ ಹೊಂದಿಸಿ; ಒಂದು ಬಿಂದುವಿನಿಂದ ಮತ್ತೊಂದು ಬಿಂದುವಿಗೆ ಸರಳರೇಖೆಯಂತೆ ಕ್ರಮಬದ್ಧವಾಗಿ ಸಾಗಬೇಕಾಗುತ್ತದೆ. ಆದರೆ ಕಥನವು ತನ್ನ ಅಗತ್ಯಕ್ಕೆ ತಕ್ಕಂತೆ ಮೂಲಕ 'ಸಂವಿಧಾನ'ವನ್ನು ಬದಲಾಯಿಸುತ್ತದೆ.[೪]

ತನಗೆ ಸದ್ಯಕ್ಕೆ ಅಗತ್ಯವಿಲ್ಲದ ವಿವರಗಳನ್ನು ಕೈಬಿಡುತ್ತದೆ. ಪುರಾಣ ಕತೆಯ ಸತ್ವವನ್ನು ಕೆಡಿಸದೆ ನಿರೂಪಣಾ ಕ್ರಮವನ್ನು ಮಾತ್ರ ಬದಲಾಯಿಸುತ್ತದೆ.

ಕೆಲವು ಕಥೆಗಳಿಗೆ ಆವರಣಗಳಿರುತ್ತವೆ. ಜಾನಪದ ಕತೆಗಳು ಮತ್ತು ಪುರಾಣ ಕತೆಗಳಲ್ಲಿ ಇವು ಸಾಮಾನ್ಯವಾಗಿ ಕಂಡುಬರುತ್ತವೆ. ಇಂತಹ ಆವರಣವು ಕತೆಗೆ ಪೂರಕವಾಗಿರಬಹುದು. ಅಥವಾ ಪ್ರತ್ಯೇಕವಾಗಿರಬಹುದು. ಉದಾಹರಣೆಗೆ ಭಾಗವತದಲ್ಲಿ ಬರುವ ಸೂತ-ಶೌನಕ ಸಂವಾದ, ಶುಕ-ಪರೀಕ್ಷಿತ ಸಂವಾದ, ವಿದುರ-ಮೈತ್ರೇಯ ಸಂವಾದ, ಯುಧ್ಧಿಷ್ಠಿರ-ನಾರದ ಸಂವಾದ ಮುಂತಾದವುಗಳು. ಆದರೆ ದಾಸರು ಇಂತಹ ಆವರಣಗಳನ್ನು ಬಿಟ್ಟು ನೇರವಾಗಿ ಉದ್ದೇಶಿತ ಘಟನೆಗಳಿಂದ ಕತೆಗಳನ್ನು ಆರಂಭಿಸುವುದರಿಂದ ಏಕಸೂತ್ರತೆ ದೊರಕುತ್ತದೆ. ಈ ಹಿನ್ನೆಲೆಯಲ್ಲಿ 'ಉಪಾಖ್ಯಾನ ಕಥನಾತ್ಮಕ' ಕೃತಿಗಳಲ್ಲಿ ಮೂಲದ ಕಥಾಸಂವಿಧಾನವನ್ನು ಹೇಗೆ ಮಾರ್ಪಡಿಸಿರುವರೆಂಬುದನ್ನು ತಿಳಿಯಲು ಹರಿದಾಸರ (ಮೂರು) ನರಸಿಂಹಾವತಾರ ಚರಿತ್ರೆಗಳನ್ನು ವಿವೇಚಿಸಬಹುದು.

**ನರಸಿಂಹಾವತಾರ ಚರಿತ್ರೆಗಳು**

೧. ಶ್ರೀಪಾದರಾಜರ 'ಶ್ರೀಲಕ್ಷ್ಮೀನೃಸಿಂಹ ಪ್ರಾದುರ್ಭಾವ ದಂಡಕ'ವು ನೇರವಾಗಿ ಪ್ರಹ್ಲಾದ-ಹಿರಣ್ಯಕಶ್ಯಪರ ವಾಗ್ವಾದದಿಂದಲೇ ಪ್ರಾರಂಭವಾಗುತ್ತದೆ. ಸಂಭಾಷಣೆ ಮುಂದುವರಿದಂತೆ 'ಅಸುರ'ನ ಕೋಪ ಹೆಚ್ಚುತ್ತದೆ.

* * *

ಹೋಯೆಲೋ ದುರ್ವಿನೀತಾಯೆಲೋ ಮಂದಬುದ್ಧೇಯೆಲೋ
ಇಂತು ನೀ ಸ್ತಬ್ಧನಾದೇತಕೋ ವಂಶಘಾ
ತೀಯೆಲೋ ಪಾಪಜಾತೀಯೆ ನೀ ಹೀಗೆ ಮ
ಚ್ಛಾಸನಾತೀತನಾಗಿಪ್ಪೊಡೇ ನಿನ್ನ ನಿ
ನ್ನಾ ಯಮದ್ವಾರಕೇ ಕಳುಹುವೆಂ ನೋಡೆಲಾ
ನಾನು ಕೋಪಿಷ್ಠನಾಗಿಪ್ಪೊಡೇ ಅಂಜಿ ಮೂ
ಲೋರ್ಕಗಳ್ ಲೋಕಪಾನೀಕಗಳ್ ಕಂಪ ಕಾ
ಣುತ್ತವಿಂಥಾ ಬಲಿಷ್ಠನ್ನ ನೀನೆನ್ನ ಸಂ
ಪದ್ಬಲ ಶ್ರೀಯನಾಶ್ರೈಸದೇ ಬಿಟ್ಟರಿ
ನ್ನಾವನಲ್ ನೀಂ ಬಲಶ್ರೀಯನಾಶ್ರೈಸುವೇ
ಯೋ ಎಲಾ ಏಕೆ ಮಚ್ಛಾಸನಾತೀತನಾ
ಗೂವಿಯೋ ಕಂದ ಪೇಳೆಂದರೇ,

ಹೀಗೆ ಹಿರಣ್ಯಕಶ್ಯಪನು ಕ್ರೋಧದಿಂದ ಆರ್ಭಟಿಸಿದಷ್ಟೂ ಪ್ರಹ್ಲಾದನ ತತ್ವಜ್ಞಾನ ಅಭಿವ್ಯಕ್ತವಾಗಲು ಅವಕಾಶವಾಗುತ್ತದೆ. ಆ ಭಾಗವತೋತ್ತಮನು ಉತ್ತರಿಸುತ್ತಾನೆ.

ತಂದೆಗಾ
ಕಂದಸಂಭಾಷಿಪಂ
ತಂದೆ ಕೇಳಯ್ಯ ಬ್ರ
ಹ್ಮಾದಿ ಆಸ್ತಂಭಪರ್ಯಂತವುಂ ಜಂಗಮ
ಸ್ಥಾವರಾತ್ಮ ಪ್ರಪಂಚೋಚ್ಚ ನೀಚ ಪ್ರಜಾ
ನೀಕ ಯಾವತ್ತದಾವಾತನಾಧೀನದ
ಲ್ಲಿಪ್ಪುದೋ ಆತನೇ ಎನ್ನಗೇ ನಿನ್ನಗೇ
ಇನ್ನು ಮಿಕ್ಕಾದ ಚೈತನ್ಯಕೆಲ್ಲಾ ಬಲ
ಶ್ರೀಯು ತಾನಾದನೇ ಕಾದನೇ ಕಾಲರೂ
ಪೀಶ್ವರೋರುಕ್ರಮಾಕಾರನೆಂಬಾತನೇ
ಆತನೇ ಆತನೇ ತೇಜ ಓಜಸ್ಸಹಾ
ಸತ್ವ ಸಂಪದ್ಬಲ ಶ್ರೀಂದ್ರಿಯಾತ್ಮನ್ ಸ್ವಯಂ
ಶಕ್ತಿಯಿಂದಲ್ ಜಗತ್ಸರ್ವವಂ ಪುಟ್ಟಿಸೂ
ವಂ ಸದಾ ಪುಷ್ಟಿ ಮಾಡೂವನೇ ನಷ್ಟಗೈ
ಸೂವನಾ ದೇವನಂ ಪೊರ್ತು ನಮ್ಮಲ್ ಬಲಾ
ದೀಗಳುಂಟೆಂಬ ನಿನ್ನಾಸುರೀ ಭಾವವಿ
ನ್ನಾದರೂ ನೀ ಬಿಡೋ ನೋಡೊ ಶ್ರೀಕಾಂತನಲ್
ಕಾಂತನಲ್ ಸ್ವಾಂತ ನೀನಿತ್ತು ಸರ್ವತ್ರ ಸಮ
ಚಿತ್ತನಾಗಯ್ಯ ಎನ್ನಯ್ಯನೇ ನಿನ್ನಗಾ
ಮೇಲೆ ವಿದ್ವೇಷ ಮಾಡೂವರಾರಿಲ್ಲವಂ
ತಸ್ಸಿನಲ್ಲಿಪ್ಪ ಕಾಮಾದಿ ಷಡ್ವರ್ಗವೆಂ
ಬಾ ಮಹಾವೈರಿಗಳ್ ಕಳ್ಳರಂತೆಲ್ಲರುಂ
ದೇಹವೆಂಬೋ ಮಹಾರಾಜಧಾನೀ ವೃಥಾ
ಹಾನಿ ಮಾಡೂವರಂಥಾವರಂ ಗೆಲ್ಲದೇ
ಕೆಲ್ವರೀ ದಿಕ್ಕುಗಳ್ ಸರ್ವವಂ ಗೆದ್ದವೆಂ
ತೆಂದು ಹಿಗ್ಗೂವರಂತಸ್ಸಿನಲ್ಲಿಪ್ಪ ಕಾ
ಮಾದಿ ಷಡ್ವರ್ಗ ಗೆದ್ದಾತಗೇ ಜ್ಞಾನಸಂ
ಪೂತಗೇ ಸಾಧು ಸಂಭೂತ ಸರ್ವಸಮಂ
ಚೇತಗಾಮೇಲೆ ತನ್ಮೋಹ ಸಂಜಾತವೆಂ
ತಪ್ಪುದೋ ಶಾತ್ರವವ್ರಾತವೆಲ್ಲಿಪ್ಪುದ
ಯ್ಯಾ ಸದಯ್ಯಾತ್ಮನೇ ತಿಳಿದು ನೋಡೆಂದು ತಾ
ನಿಂದು ಮಾತಾಡಲು.

ಹೀಗೆ ವಾದವನ್ನು ಕಲ್ಪಿಸಿ; ನಂತರ ನೃಸಿಂಹನು ಕಂಬದಿಂದೊಡೆದು ಬಂದು ದೈತ್ಯನನ್ನು ಸಂಹರಿಸಿ ಕೋಪದಿಂದ ಆರ್ಭಟಿಸುವಾಗ

ಬ್ರಹ್ಮರುದ್ರೇಂದ್ರ ಮು
ಖ್ಯಾಮರ ಶ್ರೇಣಿಗಳ್ ಪಿತೃಗಳ ಮನ್ನುಗಳ್
ಸಿದ್ಧ ವಿಧ್ಯಾಧರಾನೀಕಗಳ್ ಅಪ್ಸರಾ
ಕಾಮಿನೇರಾ ಪ್ರಜಾಪಾಲ ಗಂಧರ್ವರಾ
ಯಕ್ಷ ಕಿಂಪುರುಷರಾ ಚಾರಣಾನೀಕವಾ
ಕಿನ್ನರಸ್ತೋಮ ನಂದಾ ಸುನಂದಾದಿ ತ
ತ್ಪಾರ್ಷದಾನೀಕವೆಲ್ಲಾ ಶಿರೋಭಾಗದಲ್
ಪಾಣಿಗಳ್ ಜೋಡಿಸೀತೆಲ್ಲ ಮುನ್ನಾತಿ ದೂ
ರಸ್ಥರಾಗಿದ್ದು ನಿಂತಾಮೃಗೇಂದ್ರಾಸನಾ
ಸೀನನಾಗಿಪ್ಪ ಅತ್ಯುಗ್ರ ತೇಜಸ್ವಿನಂ
ಮೆಲ್ಲನೇ ಬೇರೆ ಬೇರಾಗಿ ಕೊಂಡಾಡುತಾ
ನಿಂತರಾವೇಳೆಯಲ್

ಎಂದು ಆರಂಭಿಸಿ ಆ ಎಲ್ಲಾ ದೇವತೆಗಳು ಪ್ರತ್ಯೇಕ ಪ್ರತ್ಯೇಕವಾಗಿ ಮಾಡಿದ ಸ್ತೋತ್ರದ ಭಾಗಗಳನ್ನು ಮೂಲದಲ್ಲಿ ಇರುವಂತೆಯೇ ಎತ್ತಿ ತಂದು 'ವಾಕ್ಯವೇಷ್ಟನ' ವಿಧಾನದಿಂದ ಹೆಣೆದಿದ್ದಾರೆ.

ಬ್ರಹ್ಮ ತಾ ಭಾಷಿಪಂ
ನಿನಗೆ ವಂದಿಸುವೆಂ ತಂದೆ ನೀನೆ ಅನಂ
ತಂ ದುರಂತ್ಯೋರು ಶಕ್ತ್ಯುಳ್ಳವಂ ಲೋಕಪಾ
ವಿತ್ರ್ಯ ಕರ್ಮ್ಯಂ ಮಹಾಶ್ಚರ್ಯ ವೀರ್ಯಂ ಜಗ
ತ್ಸೃಷ್ಟಿ ಸಂರಕ್ಷ ಸಂಹಾರಗಳ್ ಲೀಲೆಯಿಂ
ದಲ್ ಸದಾ ಮಾಳ್ಪೆಯೋ ಅವ್ಯಾತ್ಮನ್ನೆ ನೀ ನೆಂದನು.

ಇತರ ದೇವತೆಗಳು ಮಾಡಿದ ಸ್ತ್ರೋತ್ರಗಳು ಒಟ್ಟು ಕೃತಿಯ ಅರ್ಧಕ್ಕಿಂತ ಹೆಚ್ಚು ಭಾಗವನ್ನು ಆಕ್ರಮಿಸಿವೆ. ಶ್ರೀಪಾದರಾಜರು 'ಕತೆ' ಹೇಳುವುದನ್ನು ಬಿಟ್ಟು ಸ್ತ್ರೋತ್ರಗಳನ್ನು ಏಕೆ ನಿರೂಪಿಸಿದರು? ಎಂಬ ಪ್ರಶ್ನೆ ಹಾಕಿ ಕೊಳ್ಳಬೇಕಾಗುತ್ತದೆ. ಉತ್ತರವನ್ನೂ ಅವರೇ ಸೂಚಿಸಿದ್ದಾರೆ.

ನಾರಹರ್ಯಕ್ಷನುಂ ಲಕ್ಷ್ಮೀಸ
ಮ್ಮೇತನಾಗಿದ್ದು ಪ್ರಹ್ಲಾದ ಕೈ ಸ್ತೋತ್ರಗಳ್
ಕೇಳುತಾ ಸುಪ್ರಸನ್ನಾತ್ಮ ಇಷ್ಟಾರ್ಥಗಳ್
ಬೀರುತಾ ಬ್ರಹ್ಮರುದ್ರಾದ್ಯರಲ್ ಪೂಜೆಗೊ
ಳ್ಳಿದ್ದನೆಂತೆಂದು ಕೌಂತೇಯಗೇ ನಾರದ
ರ್ಷಿ ಪ್ರಜಾಹರ್ಷಿ ತಾ ನುಡಿದನಾ ರೀತಿ ಶ್ರೀ

ಮತ್ಪರೀಕ್ಷಿನ್ಮಹಾರಾಜಗೇ ವ್ಯಾಸಜಂ
ನುಡಿದನಾ ರೀತಿಯಾ ಸೂತಪೌರಾಣಿಕಂ
ಶೌನಕಾದ್ಯರ್ಷಿ ಸಂದೋಹಕೇ ನುಡಿದನೆಂ
ತೆಂದು ಶ್ರೀನಾರಸಿಂಹಾವತಾರ ಸ್ಫುರ
ಲ್ಲೀಲೆಯಿಂ ನ್ಯಾಪತೀ ಲಕ್ಷ್ಮೀನೃಸಿಂಹನಾ
ನಿಂತು ಕೊಂಡಾಡಿದೆಂ

ಭಾಗವತೋಕ್ತ ಲೀಲೆಗಳಿಂದ 'ನ್ಯಾಪತೀ' ನರಸಿಂಹನನ್ನು ಸ್ತೋತ್ರ ಮಾಡುವುದೇ ತಮ್ಮ ಉದ್ದೇಶವಾಗಿತ್ತೆಂದು ಹೇಳಿಕೊಂಡಿದ್ದಾರೆ. ಈ ಕಥಾದಂಡಕವನ್ನು 'ನಿತ್ಯ ಕೊಂಡಾಡುತ ಪೇಳುತ್ತ ಕೇಳುತ್ತ ಭಕ್ತಿಯಿಂದ ಕೂಡಿದ' ಸಜ್ಜನರಿಗೆ ಶ್ರೇಯಸ್ಸನ್ನು ಕೋರಿದ್ದಾರೆ. ಹೀಗೆ - ದಿನನಿತ್ಯದ ಪಾರಾಯಣಕ್ಕಾಗಿ ಭಾಗವತದ ನರಸಿಂಹಾವತಾರ ಕತೆಯನ್ನು ಸ್ತೋತ್ರ ಪ್ರಧಾನ ಮಾದರಿಯಲ್ಲಿ ರಚಿಸಿದ್ದಾರೆ.

೨. ಕನಕದಾಸರು ಘಂಟಾಪುರಿಯ ನಾರಾಯಣನನ್ನು ಕುರಿತು ರಚಿಸಿದ ಉದಯರಾಗದಲ್ಲಿ ನರಸಿಂಹಾವತಾರದ ಕಥಾವಸ್ತುವನ್ನು ನಾಟಕೀಯವಾಗಿ, ಕಲಾತ್ಮಕವಾಗಿ ಕಂಡರಿಸಿದ್ದಾರೆ.

ಕೃತಯುಗದೊಳೊಬ್ಬನತಿ ಕ್ರೂರ ದೈತ್ಯಾಧಮನು
ಕ್ಷಿತಿಯೊಳುದಿಸಿದನು ಸುತನೆನಿಸಿ ಆತಗೆ ನಾಮ
ಹಿತದೊಳೊಪ್ಪಿತು ಹೇಮ ಕಷ್ಯಪು ತಾನೆನಲವನ ಸತಿ ಸುಶೀಲೆ ಎಂಬಳ
ವ್ರತ ಪುಣ್ಯದಿಂದ ಶ್ರೀಪತಿ ಪದಾಂಬುಜ ಭಕ್ತ
ಚತುರ ಮಾನ ವರ ಪ್ರಹ್ಲಾದ ನಾಮಾಖ್ಯಾತ
ಸುತನೊರ್ವ ಜನಿಸಿದನು ಸತಿಯ ಸುಕೃತವದೇನೊ ಮಿತವಿಲ್ಲ ಮಹಿಯೊಳಗೆ

ಮದಮುಖನು ಮನದಿ ಹಿಗ್ಗಿದನು ಮಗುವನು ನೋಡಿ
ಸುದತಿಯ ತಕ್ಕೈಸಿ ಶುಕ್ರಾದಿ ಗುರುಗಳನು
ವಿಧವಿಧದೊಳರ್ಚಿಸುತ ವಿಭವದಿಂದೊಯ್ದಾಡಿ ಮನಸಿಜ ವೈರಿಯ ಪೂಜಿಸಿ
ಮುದದಿಂದ ಮಗನ ತೆಗೆದಪ್ಪಿ ಮುದ್ದಿಸುತೊಮ್ಮೆ
ಮೃದು ನುಡಿಗಳ ಲಾಲಿಸಿ ಸುತಗೊದಗಲೈದಾರ್ವರುಷ
ಅದರೊಳೊಂದು ದಿನ ತಮ್ಮ ಗುರು ಶುಕ್ರಾಚಾರ್ಯರನು ಕರೆಸಿ ನೇಮವನಿತ್ತನು

ಹಿರಣ್ಯಕಶ್ಯಪುವಿನ ಕೌಟುಂಬಿಕ ಸ್ಥಿತಿಯ ಆಪ್ತವಾತಾವರಣದ 'ಕಥನ'ದಿಂದ ಆರಂಭವಾಗುವ ಉಪಾಖ್ಯಾನವು ಯಥಾಪ್ರಕಾರ ವಾಗ್ವಾದದ ಹಾದಿ ಹಿಡಿಯುತ್ತದೆ.

ಒಡನೆ ಮನ್ನಿಸುತ ತೊಡೆಯ ಮೇಲಿಂಬಿಟ್ಟು
ನುಡಿ ಮಗನೆ ನಿನ್ನ ಪಡೆದವನ ನಾಮವನೆನಲು
ಮೃಡನಾಣೆ ಕಾಮನಯ್ಯನ ಅಡಿಯ ಪೊಗಳದೆಯೆ ಬಿಡೆನು ಘನವೇನೆನ್ನಲೀ
ಒಡೆಯನಹ ವಾಸುದೇವನ ಪೊಗಳ್ವ ಸುಜನರಿಗೆ

ಈಡಾರು ತ್ರಿಜಗದೊಳು ಕಡುದಯಾನಿಧಿ ಎನಲು
ಪಿಡಿದೆತ್ತಿ ಮಂಕು ಮರುಳಿನ ಮಗನೆ ಕಮಲಾಕ್ಷ ಕಡುದ್ರೋಹಿ ನಮಗೆಂದನು

ಮುಂದೆ ಪ್ರಹ್ಲಾದನು ದೈತ್ಯ ಬಾಲಕರಿಗೆ ಉಪದೇಶ ಮಾಡಿದ್ದು, ಅದನ್ನು ಕಂಡು ಕೆರಳಿದ ತಂದೆ ಶಿಕ್ಷೆಗಳನ್ನು ಕೊಡಿಸಿದ್ದನ್ನೂ ಅನಂತರ ತಾಯಿ ಬಂದು ರಾಜಿ ಮಾಡಿಸಲು ಯತ್ನಿಸಿದ್ದನ್ನೂ ಚಿತ್ರಿಸಿದ್ದಾರೆ.

ಬಂದು ಮಠದೊಳಗಿರ್ದ ಕಂದನಾಕೃತಿ ಕೇಳಿ
ಮಂದಿರದೊಳಿರ್ದ ಮಾತೆಯು ಮರುಗಿ ಮಗನೆಡೆಗೆ
ಬಂದಾಗ ಎತ್ತಿ ತಕ್ಕೈಸಿ ಕಣ್ಣಲಿ ನೀರ ತಂದು ಸುತಗಿಂತೆಂದಳು
ಇಂದಿರಾ ಪತಿ ದೈತ್ಯರಿಗೆ ದ್ರೋಹಿಯು ಅವನನು
ವಂದಿಸುವುದುಚಿತವೇ ತಂದೆಯಾಜ್ಞೆಯ ಮೀರ
ಲೆಂದಿಗಂ ನರಕ ತಪ್ಪದು ಎನಲು ವೈಷ್ಣವನು ಅಂದ ಮಾತೆಯ ಮನ್ನಿಸಿ

ತಾಯೆ ಲಾಲಿಪುದೆನ್ನ ಬಾಯ ವಚನದ ನಿನ್ನ
ಪ್ರೀಯನನು ಪೊಗಳಿದೊಡೆ ಹೇಯ ನರಕವು ಮುಂದೆ
ನೋಯಲಾರೆನು ಹೀನ ಜೀವಿಗಳು ಉದ್ಭವಿಸಿ ಆಯಾಸಗಳಲಿ ಸಿಲ್ಕಿ
ಮಾಯದಪವಾದಗಳ ಮಹಿಮ ಭೋಗವ ಸುಡಲಿ
ತಾಯಾರೆನಗೆ ತಂದೆಯಾರೆಂಬ ಕುರುಹೆಲ್ಲಿ
ನೋಯಲೇತಕೆ ನಿನ್ನ ಜೀವವಲ್ಲಭನೆಡೆಗೆ ತಾಯೆ ನೀ ತೆರಳೆನ್ನಲು

ಮರುಗಿದಳು ಮಗನ ಭಾವದ ಪರಿಯ ಬಣ್ಣಿಸುತ
ತೆರಳಿದಳು ಹರಿಯೆ ಕರುಣಿ ಸುಕಂದನನು ನಿನ್ನ
ಚರಣ ನಂಬಿದ ಬಳಿಕ ಪೊರೆವ ಬಿರುದಿನ ಪರಿಯ ಸಿರಿಯರಸ ನಿನ್ನದೆನುತ

ಬರುವಾಗ, 'ಇಂದಿರಾಪತಿಯನ್ನು ವಂದಿಸುವುದು ಉಚಿತವಲ್ಲ'ವೆಂದವಳು ಹೊರಡುವಾಗ 'ಹರಿಯೆ ಕರುಣಿಸು' ಎಂದು ಪ್ರಾರ್ಥಿಸಿ ತನ್ನ ಪತಿಗೇ ಬುದ್ಧಿ ಹೇಳ ಹೊರಡುವ ಚಿತ್ರವನ್ನು ಕಲ್ಪಿಸಿದ್ದಾರೆ. ಇದು 'ಅನುಕ್ತ ಕಥನದ' ಮೂಲಕ ಕನಕದಾಸರು ಸಾಧಿಸಿದ 'ವೃದ್ಧಿ'ಯಾಗಿದೆ. ಹಿರಣ್ಯಕಶ್ಯಪನ ವಧೆಯನ್ನು ಹೇಳುವ ಭಾಗ ಹೀಗಿದೆ

ಸಿಟ್ಟಿನಿಂದಾಗ ಕಡುಕೆಟ್ಟ ದಾನವನ ತಾ
ಕುಟ್ಟಿ ನಿಟ್ಟೆಲುಬುಗಳ ಮುರಿದೊಟ್ಟಿ ಬಾಗಿಲೊಳು
ದಿಟ್ಟವಹ ತೊಡೆಯ ಮೇಲಿಟ್ಟು ನಖ ಶಸ್ತ್ರದಿಂ ಮುಟ್ಟಿ ಹೊಟ್ಟೆಯನು ಬಗೆದ |
ತೊಟ್ಟಿಸುವ ಶೋಣಿತವ ನೆಟ್ಟನಾಪೋಶಿಸುತ
ಇಟ್ಟು ಕರುಳಿನ ಮಾಲೆ ಜಟ್ಟಿಯಾದನು ಜಗದಿ
ಧೃಷ್ಟ ಮೂರುತಿ ಕಂಡು ಸುರರು ಪೊಗಳುತ ಪುಷ್ಪ ವೃಷ್ಟಿಗಳ ಸುರಿದರಾಗ ||

ಸಕಲದೇವತೆಗಳ ಸ್ತುತಿಗೂ ಶಾಂತನಾಗದೆ ಕೋಪದಿಂದ ಜ್ವಲಿಸುತ್ತಿದ್ದ ನರಸಿಂಹನು ಲಕ್ಷ್ಮಿಯನ್ನೂ ಪ್ರಹ್ಲಾದನನ್ನೂ ಕಂಡೊಡನೆ ಶಾಂತನಾಗುತ್ತಾನೆ.

ಒಡನೆ ಬಾಲಕನು ಅಡಿಯಿಡುತ ಲಕ್ಷ್ಮೀ ಸಹಿತ
ನಡೆತರಲು ಕಂಡು ಕೈಪಿಡಿದೆಳೆದು ಮಡದಿಯನು
ತೊಡೆಯ ಮೇಲಿಟ್ಟು ಮೈದಡವಿ ಬಾಲನನೆತ್ತಿ ನುಡಿದ ನರಸಿಂಹನಾಗ |
ಬಿಡು ಮಗನೆ ನಿನ್ನ ಮನದೊಳಗಿರ್ದ ಭಯಗಳನು
ಮಡಿದ ರಾಕ್ಷಸನು ಈ ಪೊಡವಿಯಲಿ ಸುಖಬಾಳು
ನಡೆಯೆನುತ ಮಗುವ ಮುದ್ದಾಡಿ ಮುಗುಳುನಗೆಯಿಂ ತೊಡೆಯಿಳುಹಿ ಕಳುಹಿದಾಗ ||

ಭಾಗವತದಲ್ಲಿ ನರಸಿಂಹನು ಲಕ್ಷ್ಮಿಯನ್ನು ತೊಡೆಯಲ್ಲಿ ಕೂಡಿಸಿಕೊಂಡ ಕತೆಯಿಲ್ಲ. ಆದರೆ ಇಲ್ಲಿ ಕನಕದಾಸರು ಆ ರೀತಿ ಚಿತ್ರಿಸಿದ್ದಾರೆ. ಪುರಂದರ ದಾಸರು 'ನಾಮಗಿರಿನರಸಿಂಹ'ನನ್ನು ವರ್ಣಿಸುವ ಒಂದು ಕೀರ್ತನೆಯಲ್ಲೂ 'ಸಿರಿಯನು ಕರೆತಂದು ತೊಡೆಯಲಿ ಕುಳುಹಲು ಪರಮಶಾಂತನಾದ' ವಿಚಾರವನ್ನು ಹೇಳಿದ್ದಾರೆ. ಈ ಅನುಕ್ತ ಕಥನಕ್ಕೆ ಯಾವುದೋ ಮತ್ತೊಂದು ಪುರಾಣದ ಆಧಾರವಿರಬಹುದೆನಿಸುತ್ತದೆ.

ಕನಕದಾಸರು ಈ ಕೃತಿಯಲ್ಲಿ 'ಮೂಲ'ದ ಭಾವವನ್ನು ಅನುಕ್ತ ಕಥನ ಹಾಗೂ ಭಾವಸೂಕ್ಷ್ಮಗಳ ಸಂಯೋಜನೆಯ ಮೂಲಕ ವೃದ್ಧಿಸಿರುವುದನ್ನು ಕಾಣಬಹುದು.

೩. ಉಪಾಖ್ಯಾನ ಕಥನಕ್ಕೆ ಕೀರ್ತನೆಯನ್ನು ಬಳಸಿದರೆ ಕತೆಯ ವೇಗೆ ಹೆಚ್ಚುವುದೆಂಬುದನ್ನು ತಿಳಿಯಲು ಪುರಂದರದಾಸರ ಈ ಕೃತಿಯನ್ನು ಗಮನಿಸಬಹುದು.

ನಾರಸಿಂಹನೆಂಬೊ ದೇವನು |
ನಂಬಿದಂಥ ನರರಿಗೆಲ್ಲಾ ವರವಕೊಡುವನು ||ಪ||

ಆದಿಯಲ್ಲಿ ಲಕ್ಷ್ಮಿ ಸಹಿತದಿ ಮಲಗಿರಲು |
ಬಂದರಾಗ ಸನತ್ ಕುಮಾರರು |
ಆಗ ದ್ವಾರಪಾಲಕರು ತಡೆಯಲಾಗ ಕೋಪದಿಂದ |
ಮೂರು ಜನ್ಮದಲ್ಲಿ ನೀವು ಅಸುರರಾಗಿ ಪುಟ್ಟಿರೆಂದರು ||೧||

ದಿತಿಯ ಗರ್ಭದಲ್ಲಿ ಜನಿಸಿದ
ಹಿರಣ್ಯಾಕ್ಷ ಹಿರಣ್ಯಕಶಿಪುರೆಂಬ ಭ್ರಾತೃರು |
ಪೃಥ್ವಿಯನ್ನು ಮುಳುಗಿಸಿದ ಕಾರಣಾದಿ ಶ್ರೀಹರಿಯು|
ತೃತೀಯ ರೂಪದಿಂದ ಖಳನ ಕೊಂದು ಧರೆಯನುಳಿಹಿದನು ||೨||

ಅನುಜನಾದ ಹಿರಣ್ಯಾಕ್ಷನ ಮರಣವನ್ನು
ಕೇಳಿ ಆಗ ನಡೆದ ತಪಸಿಗೆ |



ಹರಿಯ ಮೇಲೆ ಸಿಟ್ಟಿನಿಂದ ಉಗ್ರ ತಪಸ್ಸನ್ನು ಮಾಡಿ |
ಬ್ರಹ್ಮನಿಂದ ವರಗಳನ್ನು ಪಡೆದುಕೊಂಡು ಬಂದನಾಗ ||

ಹೀಗೆ ಕತೆ ಸಾಗುತ್ತದೆ. 'ತಾನೆ ದೇವರು' ಎಂಬುದನ್ನು ಒಪ್ಪಿಕೊಂಡು 'ಓಂ ನಮಃ ಶಿವಾಯ' ಎಂಬ ಪಂಚಾಕ್ಷರೀ ಮಂತ್ರದ ಮೂಲಕ ತನ್ನನ್ನು ಬರೆದು ತೋರಿಸಬೇಕೆಂದು ಹಿರಣ್ಯಕಶ್ಯಪನು ಕೇಳುತ್ತಾನಂತೆ

ಓಂ ನಮಃ ಶಿವಾಯ ಎನುತಲಿ |
ಅಸುರ 'ತನ್ನ' ಸುತನ ಬರೆದು ತೋರು ಎನ್ನಲು |
ನರಹರಿಯ ನಾಮವನ್ನು ನಗುನಗುತಲೆ ಬರೆಯುತಿರಲು |
ಎಡದ ತೊಡೆಯ ಮೇಲಿದ್ದ ಶಿಶುವ ಧರೆಗೆ ನೂಕಿದನು ||

ಪ್ರಹ್ಲಾದನ ತತ್ವಜ್ಞಾನವನ್ನು ವಿಸ್ತಾರವಾಗಿ ಪ್ರತಿಪಾದಿಸದೆ ಕತೆಯನ್ನು ಸಂಕ್ಷಿಪ್ತವಾಗಿ ಹೇಳಿದ ಮುಂದಿನ ಸಾಲುಗಳು ಭಾಗವತ ಸಪ್ತಮ ಸ್ಕಂಧದ ಕೆಲವು ಶ್ಲೋಕಗಳನ್ನು ಸರಳವಾಗಿ ಕನ್ನಡೀಕರಿಸುವ ಮೂಲಕ ವೃದ್ಧಿಸಿವೆ.

ಅಂಬುಧಿಯೊಳು ಮಗನ ಮಲಗಿಸಿ |
ಮೇಲೆ ದೊಡ್ಡ ಬೆಟ್ಟವನ್ನು ಇಟ್ಟು ಬನ್ನಿರೊ|
ಹರಿಯ ಕೃಪೆಗೆ ವಶನಾದ ತರಳನೆಂದು ವರುಣದೇವ |
ಮರಣ ಇಲ್ಲದ್ಹಾಂಗೆ ಮಾಡಿ ಮನೆಗೆ ಕೊಟ್ಟು ಕಳುಹಿದನು ||

ಬೆಟ್ಟದಿಂದ ಕಟ್ಟಿ ಉರುಳಿಸಿ |
ಅಸುರ ತನ್ನ ಪಟ್ಟದಾನೆ ಕಾಲಲಿ ಮೆಟ್ಟಿಸಿ |
ಹರಿವ ಒಲೆಯ ಮಾಡಿ ಸುಟ್ಟು ಹುಲಿಯ ಬೋನಿನಲ್ಲಿ ಇಟ್ಟು |
ಯತ್ನವಿಲ್ಲದೆ ಸುತನ ಕೊಲ್ಲಲು ಶಕ್ತನಲ್ಲದೆ ಪೋದನಂತೆ ||

ನಿನ್ನ ದೇವ ಇದ್ದ ಎಡೆಯನು | ತೋರು ಎನುತ ಪಿತನು ತನ್ನ ಸುತನ ಕೋರಲು |
ಎನ್ನ ದೇವ ಇಲ್ಲದಂಥ ಎಡೆಗಳುಂಟೆ ಲೋಕದಲ್ಲಿ |
ಕಂಭದಲ್ಲೂ ಇರುವನೆಂದು ಕೈಯ ಮುಗಿದು ತೋರ್ದನಾಗ ||

ವರಕಂಭವನ್ನು ಒಡೆಯಲು |
ನರಹರಿಯು ಉಗ್ರಕೋಪವನ್ನು ತಾಳಿದ |
ಕಟಕಟೆಂಬ ಧ್ವನಿಯ ಮಾಡಿ ನಖಗಳಿಂದ ಪಿಡಿದು ಒತ್ತಿ |
ಕರುಳ ಬಗೆದು ಮಾಲೆ ಹಾಕಿ ಕಂದ ಭಕ್ತನಪ್ಪಿಕೊಂಡ ||

ಅಂತರಿಕ್ಷದಲ್ಲಿ ಅಮರರು |
ನೋಡಿ ಆಗ ಪುಷ್ಪವೃಷ್ಟಿಯನ್ನೆ ಕರೆದರು |
ಅಜನ ಪಡೆದ ದೇವಿ ಬಂದು ತೊಡೆಯ ಮೇಳೆ ಕುಳಿತಿರಲು |
ಅಮರಪತಿಯರೆಲ್ಲರ ನೋಡಿ ಅಂಜ ಬೇಡೆಂದಭಯ ಕೊಟ್ಟ ||

ಮುಂದೆ ಫಲಸ್ತುತಿಯೊಂದಿಗೆ ಕತೆ ಮುಗಿಯುತ್ತದೆ. ಈ ಹಾಡು ಬಹುಜನರ ನಿತ್ಯ ಬಳಕೆಯಿಂದ ಸವೆದಂತೆ[೫] ಕಾಣುತ್ತದೆ.

**ಸುದಾಮಚರಿತ್ರೆ**

ಪುರಂದರದಾಸರು ರಚಿಸಿದ ಎರಡು ಸುದಾಮ ಚರಿತ್ರೆಗಳಿವೆ.[೬] ಅವುಗಳಲ್ಲಿ ಮೊದಲನೆಯದು ಸ್ವಲ್ಪ ವಿಸ್ತಾರವಾಗಿದೆ.

ಇರುವನೊಬ್ಬ ವಿಪ್ರನಲ್ಲಿ ಪರಮ ದರಿದ್ರನಾಗಿ |
ಹರಿಯನೆನೆದು ಕಾಲವನ್ನೆ ಕಳೆಯುತ್ತಿದ್ದನು ||

ನೆಡೆಯಲರಿಯ ಧರಣಿನೋಯ ನುಡಿಯಲರಿಯ ಗರ್ಜಿಸುತ್ತ |
ಕಡಿಯಲರಿಯ ಮರನ ಕುಡಿಯ ಚಿವುಟಲರಿಯನು ||

ತಡೆಯಲರಿಯ ಸಾಧುಜನರ ಹಿಡಿಯಲರಿಯ ಪರರ ವಸ್ತು|
ಒಡವೆಯನ್ನು ಮುಟ್ಟಲರಿಯ ಬಡವನಾದರೂ ||

ಹೀಗೆ ಸುದಾಮನ ಸಾತ್ವಿಕ ಪಾತ್ರವನ್ನು ಚಿತ್ರಿಸಲು 'ವಸ್ತು ಪ್ರತಿರೂಪ'(objective correlative) ತಂತ್ರವನ್ನು ಬಳಸಲಾಗಿದೆ.

ಭಾಗವತ ದಶಮಸ್ಕಂಧದ ಕುಚೇಲೋಪಾಖ್ಯಾನಕ್ಕಿಂತ ಕೆಲವು ಸಣ್ಣಪುಟ್ಟ ವಿವರಗಳಲ್ಲಿ ಭಿನ್ನವಾಗಿರುವ ಈ ಕೃತಿಯಲ್ಲಿ ಸುದಾಮನು ಮಡದಿಯ ಪ್ರೇರಣೆಯಿಂದ ದ್ವಾರಕೆಗೆ ಬಂದು ಕೃಷ್ಣನಿಂದ ಸತ್ಕೃತನಾಗಿ ತಾನು ಭಕ್ತಿಯಿಂದ ತಂದ ಮುಷ್ಟಿ ಅವಲಕ್ಕಿಯಿಂದಲೇ ಭಗವಂತನನ್ನು ಪ್ರೀತಿಗೊಳಿಸಿ ಅಖಿಲ ಐಶ್ವರ್ಯವನ್ನು ಪಡೆದ ಕಥಾವಸ್ತು ಇಲ್ಲಿದೆ.[೭]

ಇಲ್ಲಿ ಉದ್ದಕ್ಕೂ ಕತೆಗೊಂದು ವೇಗವಿದೆ. ಹೆಚ್ಚಿನ ಕಾವ್ಯಗುಣವಿಲ್ಲದಿದ್ದರೂ ಈ ಕೃತಿಯನ್ನು 'ನಿತ್ಯ ಪಾರಾಯಣ' ಮಾಡುವ ನೂರಾರು ಜನರನ್ನು ಕಾಣುತ್ತೇವೆ. ಪುರಂದರದಾಸರ ಮತ್ತೊಂದು 'ಸುದಾಮನ ಹಾಡು' ಸಾಂಗತ್ಯರೂಪದ್ದು. ಅಲ್ಲಿಯ ಕೆಲವು ಪದ್ಯಗಳು ಹೀಗಿವೆ.

ಬಂದ ಭಕ್ತನ ನೋಡಿ ಆನಂದದಿಂದೆದ್ದು
ವಂದಿಸಿ ಆಸನವ ಹಾಕಿದನು |
ಚಂದದಿಂದಲಿ ಕರವ ಹಿಡಿದು ಮಾತಾಡುತ
ಬಂದ ಕಾರಣವ ಕೇಳಿದನು ||
ಮಂದಗಮನೆ ಸಹಿತ ತಂದ ಉದಕದಿಂದ
ಚಂದದಿಂದಲಿ ಪಾದತೊಳೆದು
ಗಂದ ಕೇಸರ ಹಚ್ಚಿ ಚಂದ ಚಾಮರದಿಂದ
ಅಂದದಿ ಗಾಳಿ ಬೀಸುವರು ||
* * *



ತಂದದ್ದು ಕೊಡಲಿಕ್ಕೆ ಸಂದೇಹವೇತಕೆ
ತಂಡುಲ ಹಿಡಿದು ಜಗ್ಗಿದನು |
ಮುಷ್ಟಿ ತುಂಬವಲಕ್ಕಿ ಮುಕ್ಕಿದ ಬೇಗ
ನಕ್ಕರು ಸತಿಯರು ಎಲ್ಲ ||
ಇಷ್ಟೇ ಸಾಕು ಎಂದು ಗಟ್ಟಾಗಿ ಕೈಹಿಡಿಯೆ
ಕೊಟ್ಟಾನು ಭಕ್ತಗೆ ಐಶ್ವರ್ಯ |
ಹದಿನಾರು ಸಾವಿರ ಚದುರೆಯರ ಕರೆಸಿದ
ಕೊಡಿಸಿದನೆಲ್ಲರಿಗೆ ತಂಡುಲವ ||...ಹೀಗೆ ಮುಂದುವರಿಯುವ ಈ ಕೃತಿ ಸಂಕ್ಷಿಪ್ತವಾಗಿದೆ.

**ಗಜೇಂದ್ರ ಮೋಕ್ಷ**

ಹರಿದಾಸ ಭಾಗವತದಲ್ಲಿ ಉತ್ತಮ ಕಾವ್ಯಗುಣ ಭರಿತ 'ಕಥನ'ಕ್ಕೂ ಕೊರತೆಯಿಲ್ಲವೆಂಬುದಕ್ಕೆ ಪುರಂದರದಾಸರ 'ಗಜೇಂದ್ರಮೋಕ್ಷ'ವೇ ಸಾಕ್ಷಿಯಾಗಿದೆ.

ಪಾಂಡ್ಯದೇಶದೊಳು ಇಂದ್ರದ್ಯುಮ್ನನೆಂಬ ಭೂ |
ಮಂಡಲಾಧಿಪನು ವೈರಾಗ್ಯದಲಿ ಹರಿಪಾದ |
ಪುಂಡರೀಕಧ್ಯಾನಪರನಾಗಿ ತಪದೊಳೆರೆ ಚಂಡತಾಪಸನಗಸ್ತ್ಯ ||
ಹಿಂಡುಶಿಷ್ಯರುವೆರಸಿ ಬರಲು ಸತ್ಕರಿಸದಿರೆ |
ಕಂಡುಗ್ರಕೋಪದಿಂ ಗಜವಾಗಿ ಜನಿಸಲು |
ದ್ದಂಡ ಶಾಪವನಿತ್ತು ಮುನಿ ತಿರುಗಲತ್ತಲೈ ಶುಂಡಾಲನಾದನರಸ ||೧||

ವಾರ್ಧಕ ಷಟ್ಪದಿಯ ಬಂಧದಲ್ಲಿ 'ಮೂಲ'ದ ಸತ್ವ ಕೆಡದಂತೆ ಕಥಿಸುವಾಗ ಅಧ್ಯಾಯಗಟ್ಟಲೆ ಬಂದವನ ವರ್ಣನೆಯನ್ನು ಒಂದೇ ಪದ್ಯದಲ್ಲಿ ಸಂಕ್ಷೇಪಿಸಿದ್ದಾರೆ.

ಕ್ಷೀರಸಾಗರದಲೆರಡೀರೈದು ಯೋಜನದ |
ಮೇರೆಯಲಿ ವರತ್ರಿಕೂಟಾದ್ರಿ ಶೃಂಗತ್ರಯದಿ |
ರಾರಾಜಿಸುವ ತಾಮ್ರ-ರಜತ-ಕಾಂಚನದಿಂದ ನಾರಾಯಣಾಂಶದಿಂದ ||
ಪಾರಿಜಾತಾಂಭೋಜ ಬಕುಳ ಮಲ್ಲಿಗೆ ಜಾಜಿ |
ಸೌರಭದಲಶ್ವತ್ಥ ಪೂಗ ಪುನ್ನಾಗ ಜಂ |
ಬೀರ ತರು ಗುಲ್ಮ ಶಾಖಾಮೃಗಗಳೆಸೆವಲ್ಲಿ ವಾರಣೇಂದ್ರನು ಮೆರೆದನು ||

ಆನೆ ಹೆಣ್ಣಾನೆ ಮರಿಯಾನೆಗಳ ಸಹಿತಲ್ಲಿ |
ಕಾನನದಿ ತೊಳಲುತ್ತ ಬೇಸಗೆಯ ಬಿಸಿಲಲ್ಲಿ |
ತಾನು ನೀರಡಿಸಿ ಬಂದೊಂದು ಸರಸಿಯ ತಟಕೆ ಪಾನಾಭಿಲಾಷೆಯಿಂದ ||
ನಾನಪ್ರಕಾರದಿಂ ಜಲಕ್ರೀಡೆಯಾಡುತಿರ |
ಲೇನಿದೆತ್ತಣ ರಭಸವೆಂದುಗ್ರಕೋಪದಿಂ |
ಆ ನೆಗಳು ಬಾಯ್ದೆರೆದು ನುಂಗಿತೊಂದಂಘ್ರಿಯನು ಏನೆಂಬೆನಾಕ್ಷಣದೊಳು ||

ಸಾವಿರಾರು ವರ್ಷ ಸ್ವಪ್ರಯತ್ನದಿಂದ ಜಗ್ಗಾಡಿದ್ದು ವ್ಯರ್ಥವಾದಾಗ ಗಜೇಂದ್ರನಿಗೆ ಶ್ರೀಹರಿಯ ಸ್ಮರಣೆ ಬಂತು. ಭಗವಂತನನ್ನು ಸ್ತುತಿಸಿದ :

ಬಂದುದಾ ಸಮಯದಲಿ ಹಿಂದೆ ಮಾಡಿದ ಪುಣ್ಯ
ದಿಂದ ದಿವ್ಯಜ್ಞಾನ ಕಣ್ದೆರೆದು ಮನದೊಳರ
ವಿಂದನಾಭಾಚ್ಯುತ ಮುಕುಂದ ಮಾಧವ ಕೃಷ್ಣ ನಿಖಿಲಮುನಿವೃಂದವಂದ್ಯ ||
ಇಂದಿರಾರಮಣ ಗೋವಿಂದ ಕೇಶವ ಭಕ್ತ
ಬಂದು ಕರುಣಾಸಿಂಧು ತಂದೆ ನೀ ಗತಿಯೆನಗೆ |
ಇಂದು ಸಿಲ್ಕಿದೆನು ಬಲು ದಂದುಗದ ಮಾಯಾಪ್ರಬಂಧಕನೆ ನೆಗಳಿನಿಂದ ||

ಪರಮಾತ್ಮ ಪರಮೇಶ ಪರತತ್ತ್ವ ಪರಿಪೂಜ್ಯ |
ಪರತರ ಪರಂಜ್ಯೋತಿ ಪರಮಪಾವನಮೂರ್ತಿ |
ಪರಮೇಷ್ಠಿ ಪರಬ್ರಹ್ಮ ಪರಮ ಪರಮಾಕಾಶ ಪರಿಪೂರ್ಣ ಪರಮಪುರುಷ ||
ನಿರುಪಮ ನಿಜಾನಂದ ನಿರ್ಲಯ ನಿರಾಕಾರ |
ನಿರವಧಿಕ ನಿರ್ಗುಣ ನಿರಂಜನ ನಿರಾಧಾರ |
ನಿರವದ್ಯ ನಿಸ್ಸಂಗ ನಿಶ್ಚಿಂತ ನಿಖಿಲೇಶ
ಇರದೆ ನೀ ಸಲಹೆಂದನು ||

ಭಕ್ತ ಪರಾಧೀನನಾದ ಶ್ರೀಹರಿ ಧಾವಿಸಿ ಬಂದು ಕಾಪಾಡಿದ ಕತೆ ಮುಂದುವರಿಯುತ್ತದೆ.

ನೆಗಳ ಬಾಯನು ಚಕ್ರದಲಿ ಸೀಳಿ ಕರಿವರದ |
ಒಗುವ ಕರುಣದಲಿ ಮೈದಡಹಲ್ಕೆ ಗಜಜನ್ಮ |
ತೆಗೆದುದಾಕ್ಷಣಕೆ ಮಣಿಮುಕುಟ - ಕುಂಡಲದಿಂದ ನಗಧರನ ಓಲೈಸಿದ ||
ವಿಗಡದೇವಲ ಮುನಿಯ ಶಾಪದಲಿ ಧಾರುಣಿಯೊ |
ಳಗೆ ನಕ್ರನಾಗಿ ಹೂಹೂ ಎಂಬ ಗಂಧರ್ವ |
ಮಗುಳಿ ಪುರವನು ಕಂಡು ನಿಜಗತಿಗೆ ಐದಿದನು ಕಮಲಾಕ್ಷಮಿಗೆ ಮೆರೆದನು ||

ಮಣಿಮುಕುಟ ಕುಂಡಲ ಪದಕ ಹಾರ ಕಡಗ ಕಂ |
ಕಣ ಕೌಸ್ತುಭೋಜ್ಜ್ವಲಾಂಗದ ವೈಜಯಂತಿ ಭೂ |
ಷಣ ಶಂಖ-ಚಕ್ರ-ಗದೆ-ಪದ್ಮ ಧರಿಸಿಹ ಹಸ್ತಪಣೆಯ ಕಸ್ತುರಿ ತಿಲಕದಾ ||

ಝಣಝಣಿಪ ನೂಪುರದ ದಂತಪಂಕ್ತಿಯ ಕೃಪೇ |
ಕ್ಷಣದ ಸಿರಿಮೊಗದ ಪೀತಾಂಬರ ಮೂರುತಿಗೆ |
ಮಣಿದು ಜಯ ಜಯ ಜಯಾ ಎಂಬ ಸುರನರರ ಸಂ | ದಣಿಯಿಂದೆ ಹರಿ ಮೆರೆದನು ||

ಹರಿಹರಿ ಎನುತ್ತಂಘ್ರಿಗೆರಗಲಿಭವರನನಾ |
ದರದಿಂದಲೆತ್ತುತಲಿ ಕೇಳ್ಮಗನೆ ನೀನೆನ್ನ |

ವಿರಜ ಶರಪರಿಧಿಯೀ ಸರವನಹಿಪತಿಯನ್ನು ಪರಜನ್ಮನೀ ಲಕುಮಿಯ ||
ಪರಮೇಷ್ಠಿ-ಭವರ ಮನು-ಮುನಿಗಳನು ಧರಣಿಯನು |
ತರಣಿ ಶಶಿ ನವಶಕ್ತಿ ವಿಷ್ಣುಧರ್ಮವತಾರ |
ಪರ ವರಗದಾ ಶಂಖ ಚಕ್ರಾಂಬುಜಂಗಳನು ಸ್ಮರಿಸುವರ ಕಾವೆನೆಂದ ||

ಆವಾವನಿದನುದಯದಲ್ಲೆದ್ದು ಭಕ್ತಿಯಲಿ |
ಭಾವಶುದ್ಧಿಯಲಿ ತಾ ಹೇಳಿಕೊಳುವನೊ ಅವನ |
ಘಾವಳಿಯ ಪರಿಹರಿಸಿ ಸುಜ್ಞಾನವೀವೆ ದೇಹಾವಸಾನದಲೆನುತಲಿ ||
ಶ್ರೀವಾಸುದೇವನಾಜ್ಞಾಪಿಸಿ ಗಜೇಂದ್ರ ಸಹಿ |
ತಾವಿಹಂಗಾಧಿಪನನೇರಿ ವೈಕುಂಠಕ್ಕೆ |
ದೇವ ಬಿಜಯಂಗೈದ ಪುರಂದರವಿಟ್ಠಲನ ಸೇವಕರಿಗಿದುಚಿತ್ರವೆ ||

ಹೀಗೆ 'ಹತ್ತು' ಷಟ್ಪದಿಗಳಲ್ಲಿ ಮೂಲದ ಮೂರು ಅಧ್ಯಾಯಗಳ ಸುವಿಸ್ತೃತ ವಸ್ತುವನ್ನು ಸಾರಸಂಗ್ರಹರೂಪವಾಗಿ ಸಂಕ್ಷೇಪಿಸುವ ಮೂಲಕ ವೃದ್ಧಿಸಿದ್ದಾರೆ. ಪ್ರತಿದಿನ ಪ್ರಾತಃಕಾಲದಲ್ಲಿ ಗಜೇಂದ್ರಮೋಕ್ಷ ಪಾರಾಯಣ ಮಾಡಬೇಕೆಂಬ ಹರಿದಾಸ ಸಂಸ್ಕೃತಿಯ 'ನಿತ್ಯವಿನಿಯೋಗ'ದ ಅಗತ್ಯವನ್ನು ಪೂರೈಸಲು ಈ ಮಾದರಿಯ ಕೃತಿಗಳನ್ನು ರಚಿಸಿರುವುದು ಸ್ಪಷ್ಟವಾಗಿದೆ.

* * * *

ವಾದಿರಾಜರ ಗಜೇಂದ್ರಮೋಕ್ಷ 'ಚೌಪದಿ'ಯಲ್ಲಿ ಕಥನವು ವರ್ಣನೆಗಳಿಂದ ವಿಸ್ತಾರವಾಗಿದೆ. ನಿದರ್ಶನಕ್ಕೆ ಇಂದ್ರದ್ಯುಮ್ನ ಮಹಾರಾಜನ ದೇವಪೂಜಾಕಾಲದಲ್ಲಿ ಅಗಸ್ತ್ಯರು ಬಂದ ಸಂದರ್ಭ ಹೀಗಿದೆ

ಅಂದಾಗ ಆಯೆಡೆಗೆ ಅಗಸ್ತ್ಯ ಮುನಿಬಂದ |
ನಿಂದಿರ್ದು ವಂದನೆಯ ಮಾಡಲಿಲ್ಲೆಂದ ||
ಎಂದೆನುತ ಮನದಿ ಕೋಪಿಸಿದ ಶಾಪಿಸಿದ |
ಕುಂಜರದ ರೂಪಾಗಿ ಜನಿಸು ಹೋಗೆಂದ ||

ಹೀಗೆ ಶಪಿತನಾದಾಗ 'ಆನೆಯಾದನು ನೃಪನು ಆ ಕ್ಷಣದಲ್ಲಿ' ಎಂದಿದ್ದಾರೆ.

ಘಟ್ಟಬೆಟ್ಟಗಳ ಹತ್ತುತಲೆ ಇಳಿಯುತಲೆ |
ಹಿಟ್ಟುಹಿಟ್ಟಾಗಿ ಕಲ್ಮರವ ತುಳಿಯುತಲೆ ||
ದಟ್ಟಡವಿಯೊಳಗೆ ಸಂಚರವ ಮಾಡುತಲೆ |
ಬತ್ತಿದವು ಕೆರೆತೊರೆಯು ಬೇಸಗೆಯು ಬರಲು ||

ಇಂಥ ಬಿರುಬೇಸಗೆಯಲ್ಲಿ ಹಸಿವು ತೃಷೆಯಿಂದ ಬಳಲಿ; ಸಮೃದ್ಧವಾದ ಸ್ವಚ್ಛ ಜಲವಿದ್ದ ಸರೋವರಕ್ಕೆ ಬಂದು ತನ್ನ ಹಿಂಡಿನೊಂದಿಗೆ ನೀರಾಟವಾಡುತ್ತಿದ್ದ ಗಜರಾಜನಿಗೆ ಆಪತ್ತು ಕಾದಿತ್ತು.

ಮುನಿಯ ಶಾಪದಲೊಂದು ಮಕರಿ ಮಡುವಿನೊಳು |
ಕೆಲವು ಕಾಲದಿ ತಪಿಸಿ ಜೀವಿಸುತ್ತಿರಲು ||

ಮದಗಜವು ಪೊಕ್ಕು ಮಡುವನೆ ಕಲಕುತಿರಲು |
ತಡೆಯದಾ ಮಕರಿ ಹಿಡಿಯಿತು ಕರಿಯ ಕಾಲು ||

ಗಜೇಂದ್ರನು ಮಾಡಿದ ಹರಿಸ್ತುತಿಯಲ್ಲಿ ದಶಾವತಾರದ ಅಳವಡಿಕೆ, ಇಲ್ಲಿಯ ವಿಶೇಷತೆಯಾಗಿದೆ.

ಹರಿಯ ಸುದರ್ಶನವು ಮದಗಜಕೆ ಸೋಕುತಲೆ |
ಒದಗಿದವು ಶಂಖ ಚಕ್ರ ನಾಲ್ಕು ಕೈಗಳಲಿ ||
ಉಟ್ಟ ಪೀತಾಂಬರವು ಕಿರೀಟ ಕುಂಡಲವು |
ಎಳೆತುಳಸಿ ಮಾಲೆಗಳು ಕೊರಳೊಳೊಪ್ಪಿದವು ||

ಗಜರಾಜನಿಗೆ ಸಾರೂಪ್ಯ ಮುಕ್ತಿ ದೊರಕಿದುದನ್ನು ಮೇಲಿನ ಪದ್ಯದಲ್ಲಿ ವಿವರಿಸಲಾಗಿದೆ.

**ವಾಮನ ಚರಿತ್ರೆ**

ಅತ್ಯಂತ ಸಂಕ್ಷಿಪ್ತವಾಗಿರುವ ಈ ಪುರಂದರದಾಸರ ರಚನೆಯಲ್ಲಿ ಸಂವಾದ ಕೌಶಲವನ್ನು ಕಾಣಬಹುದು. ವಾಮನನು ಬಲಿಯ ಮನೆಗೆ ಬಂದ ಸಂದರ್ಭ ಹೀಗಿದೆ :

ಮುತ್ತಿನ ಮಣೆಯ ತಂದಿಟ್ಟನೆ ಬಲಿರಾಯ
ಇತ್ತ ಬನ್ನಿರಿ ಕುಳ್ಳಿರೆನುತ |
ಎತ್ತಲಿಂದ ನೀವು ಬಂದಿರೆಂದೆನುತಲಿ
ಹಸ್ತವ ಮುಗಿದು ಕೇಳಿದನು |

ಬಹಳ ದೂರದಿಂದ ಬಂದೆನೊ ಬಲಿ ನಿನ್ನ
ಕೀರುತಿ ವಾರ್ತೆಯ ಕೇಳಿ
ಮೂರು ಪಾದ ಭೂಮಿ ದಾನವ ಕೊಡು ಎಂದು
ಬೇಡಿಕೊಂಡನು ಬ್ರಹ್ಮಚಾರಿ ||

ಯಾಚಕನಿವನಲ್ಲ ಯದುಕುಲ ತಿಲಕನು
ಮಾತಿಲಿ ಮನೆಯಕೊಂಬುವನು |
ಸೂಚನೆ ಮಾಡಲು ಶುಕ್ರಾಚಾರ್ಯರು ಬಂದು
ಜೋಕೆಯು ಎಂದ್ಹೇಳಿದರು ||

ಎಷ್ಟು ಹೇಳಿದರಿವ ಬಿಟ್ಟು ಹೋಗುವವನಲ್ಲ
ಸಿಟ್ಟಲಿಬೈದು ಕೋಪಿಸುವ |
ಕೊಟ್ಟೆನೊ ಯದುಕುಲ ತಿಲಕಗೆ ದಾನವ
ಕೊಟ್ಟ ವಾಕ್ಯವು ತಪ್ಪದೆಂದ ||

ಇಲ್ಲಿ ಕಿರಿದರಲ್ಲಿ ಹಿರಿದನ್ನು ಅಳವಡಿಸುವ 'ಅಡಕಗುಣ' ಕಂಡುಬರುತ್ತದೆ. ಉಪಾಖ್ಯಾನ ಕಥನದ ಎಲ್ಲ ಉತ್ತಮಾಂಶಗಳಿಗೆ ಪ್ರಾತಿನಿಧಿಕವೆಂಬಂತಿರುವ ಈ ಹಾಡು ಬಹುಪ್ರಚುರವಾಗಿದೆ.

ಮೆಚ್ಚಿದೆ ಬಲಿನಿನ್ನ ಭಕ್ತಿಭಾವಗಳಿಗೆ
ಬೇಕಾದ ವರವ ಕೇಳೆಂದ |

ಮುಕ್ತಿದಾಯಕ ಎನ್ನ ಮನೆಮುಂದೆ ಇರು ಎಂದು
ಇಷ್ಟೇವರವು ಸಾಕೆಂದ |
ಬಲವಂತ ರಂಗನು ಬಲಿಯ ಬಾಗಿಲಕಾಯ್ದ
ಪುರಂದರ ವಿಠಲಗೆ ಶರಣು ||

ಎಂಬ ವರ್ಣನೆಯೊಂದಿಗೆ ಈ ಹಾಡು ಮುಗಿಯುತ್ತದೆ.

ಹೀಗೆ ಹರಿದಾಸರು ಕೈಗೊಂಡ ಎಲ್ಲ ಉಪಾಖ್ಯಾನ ಕಥನಗಳಲ್ಲಿ 'ಕಥನ ಕವನ'ದ ರೀತಿಯ 'ಸಂಕ್ಷಿಪ್ತತೆ', 'ಭಾವಸೂಕ್ಷ್ಮಗಳ ಸಂಯೋಜನೆ', 'ಕಥಾ ಸಂವಿಧಾನದ ಮಾರ್ಪಾಡು' ಹಾಗೂ ಕೆಲವು ಕಡೆ (ಬಹುಪಠ್ಯೀಯತೆಯ ಋಣದ ಫಲವಾದ) 'ಅನುಕ್ತ ಕಥನ' ಮುಂತಾದ ತಂತ್ರಗಳನ್ನು ಗುರುತಿಸುತ್ತೇವೆ. ಹೆಚ್ಚಾಗಿ ಮೌಖಿಕ ರೂಪದಲ್ಲಿ ಪ್ರಸಾರದಲ್ಲಿರುವ ಇಂತಹ ರಚನೆಗಳಲ್ಲಿ ಅಲ್ಲಲ್ಲಿ 'ಸವಕಳಿ'ಯೂ ಕಂಡುಬರುತ್ತದೆ.

## ಶ್ರೀಕೃಷ್ಣ ಬಾಲಲೀಲೆ

ಬಹುಕಾಲದ ಮೌಖಿಕ ಪ್ರಸರಣದ ನಂತರ ಲಿಖಿತ ಪರಂಪರೆಗೆ ಬಂದಿರುವ ದೀರ್ಘಕೃತಿ 'ಶ್ರೀಕೃಷ್ಣ ಬಾಲಲೀಲೆ' (ಗೋಪಾಲ ಚರಿತೆ)ಈ ಕೃತಿಯಲ್ಲಿ ಕಂಡುಬರುವ ಪುನರಾವೃತ್ತಿ, 'ಅಚ್ಚದೇಸಿ'ಯ ಸೊಬಗು, ಸ್ತ್ರೀಯರ ಆಚರಣೆಗಳ ಚಿತ್ರಣದ ಕಾರಣಗಳಿಂದ; ವಾದಿರಾಜರಂತಹ ಸರಸ ಪ್ರೌಢ ಕವಿಗಳು ಇದನ್ನು ರಚಿಸಿರುವರೆಂದು ನಂಬುವುದೂ ಕಷ್ಟವಾಗುತ್ತದೆ. ಆದರೆ ಡಾ.ಎಚ್.ಜಿ.ಲೋಕೂರ ಹಾಗೂ ಪ್ರೊ.ಎ.ವಿ.ನಾವಡ ಅವರು ತಮ್ಮ ಪ್ರಸ್ತಾವನೆಯ ಭಾಗಗಳಲ್ಲಿ ಕಾವ್ಯದ ಆಂತರಿಕ ಪುರಾವೆಗಳಿಂದ ಇದು ವಾದಿರಾಜ ವಿರಚಿತವೆಂಬ ನಿರ್ಣಯಕ್ಕೆ ಬಂದಿದ್ದಾರೆ.

ಅಂದಾಜು ೧೪೦೦ ದ್ವಿಪದಿಗಳಿಂದ ಕೂಡಿದ ಈ ಕಾವ್ಯದಲ್ಲಿ ಕೆಲವು ವಿಶೇಷತೆಗಳಿವೆ. "ಸಂಸ್ಕೃತ ಭಾಗವತದ ದಶಮಸ್ಕಂಧದಲ್ಲಿ ಇಲ್ಲದ ಅನೇಕ ಪ್ರಾದೇಶಿಕ ಸಂಸ್ಕೃತಿಯ ಭಾಗಗಳಾದ ಹಬ್ಬ ಹರಿದಿನಗಳು, ವಿಧಿ ಆರಚಣೆಗಳನ್ನು ಪ್ರಾದೇಶಿಕ ನುಡಿಗಟ್ಟುಗಳ ಬಳಕೆಯೊಂದಿಗೆ ಕಾವ್ಯಕ್ಕೆ ದೇಶೀಯತೆಯ ಚೆಲುವನ್ನು ಬೆಸೆದಿದ್ದಾರೆ. 'ರುಕ್ಮಿಣೀಶ ವಿಜಯ'ದಲ್ಲಿ ಶೃಂಗಾರ ರಸದ ಕೋಡಿ ಹರಿಸಿದ ವಾದಿರಾಜರು ಸಾಂಸಾರಿಕ ವಲಯದೊಳಗಿನ ಜೀವನಾವರ್ತನ ಆಚರಣೆಗಳನ್ನು ಕಾವ್ಯದೊಳಗೆ ವಿವರಿಸುವ ಮೂಲಕ ಜನಮಂದಿಗೆ ಕಾವ್ಯವನ್ನು ಆಪ್ತವಾಗಿಸಿದ್ದಾರೆ."(ನಾವಡ.ಎ.ವಿ ೨೦೦೫:xxv) ವಾದಿರಾಜರ ಲಕ್ಷ್ಮೀ ಶೋಭಾನೆಯಲ್ಲಿನ ಹಸೆಕರೆಯುವ, ಆರತಿ ಮಾಡುವ ವರ್ಣನೆಗಳನ್ನೂ, ಅವರ ಇತರ ಕೀರ್ತನೆಗಳಲ್ಲಿ

ಬರುವ ಉರುಟಣೆ, ಮನೆವಾರ್ತೆಗಳ ವಿವರಗಳನ್ನೂ ಗಮನಿಸಿದಾಗ ವಾದಿರಾಜರ 'ವೃದ್ಧಿ' ಕಾರ್ಯದ ವಿಶೇಷತೆಯನ್ನು ತಿಳಿಯಬಹುದಾಗಿದೆ.

ಈ ಕೃತಿಯ ಸತ್ವವನ್ನು ತಿಳಿಯಲು ಸಮಗ್ರವಾಗಿ ಓದಿ ವಿಶ್ಲೇಷಣೆ ನಡೆಸಬೇಕಾಗುತ್ತದೆ. ಇಲ್ಲಿ ಮಾದರಿಗಾಗಿ ಕೆಲವು ಪದ್ಯಗಳನ್ನು ನೋಡಬಹುದು.

ವನಗಳ ಮಧ್ಯದಲ್ಲಿ ತುರುಗಳ ರಕ್ಷಿಸುತ್ತ |
ಮದನ ಗೋಪಾಲ ಕೊಳಲನೂದುತಿದ್ದನು ||
ಕೊಳಲಧ್ವನಿಗೆ ಪಕ್ಷಿ ಜಾತಿಗಳೆಲ್ಲ ಕಣ್ಣು ಮುಚ್ಚಿ |
ಮುನಿಗಳಂತೆ ತಾವು ಕುಳಿತು ಕೇಳುತ್ತಿದ್ದವು ||

ರಂಗನ ಕೊರಳಧ್ವನಿಗೆ ಸಾರಂಗ ಎರಳೆ ಹುಲ್ಲೆ |
ದೇಶಂಗಳ ಬಿಟ್ಟು ಭ್ರಮಿತವಾಗುತ್ತಿದ್ದವು ||
ಗೋವಿಂದನ ಕೊಳಲ ಧ್ವನಿಗೆ ಗೋವಿನ ಹಿಂಡುಗಳು |
ಮೇವು ನೀರು ಬಿಟ್ಟು ಕಿವಿಯಲ್ಯಾಲೈಸಿದುವು ||

ಹರಿಯಕೊಳಲ ಧ್ವನಿಯ ಕೇಳಿ ಹರಿಯುತಿದ್ದ ಯಮುನಾದೇವಿ |
ಸುಳಿಗಳ ನೆವದಿ ನಿಂತು ಕೇಳುತಿದ್ದಳು ||

ಇಲ್ಲಿ ಕತೆಗೆ ವೇಗವಿದೆ. ಸತ್ವವಿದೆ. ವಾದಿರಾಜರು ಶ್ರೀಮದ್ಭಾಗವತದ ವೇಣುಗೀತೆಯನ್ನು ಸುಲಲಿತವಾಗಿ ಚಿತ್ರಿಸಿದ್ದಾರೆ. 'ಶ್ರೀಕೃಷ್ಣ ಬಾಲಲೀಲೆ'ಯ ಕಥನ ವಿಧಾನವನ್ನು ತಿಳಿಯಲು ಈ ಪದ್ಯಗಳು ನೆರವಾಗುತ್ತವೆ.

### ೫.೧.೨. ಸನ್ನಿವೇಶ ಕಥನ

ಇಲ್ಲಿ ಕತೆಯ ಒಂದು ಘಟನೆಯ ಕಥಾಂಶವನ್ನು ಆಯ್ದುಕೊಂಡು ಭಾವಪೂರ್ಣವಾಗಿ ಒಂದು ಸನ್ನಿವೇಶವನ್ನಾಗಿ ವೃದ್ಧಿಸುವ ವಿಧಾನವನ್ನು 'ಸನ್ನಿವೇಶ ಕಥನ' ಎಂದು ಗುರುತಿಸುತ್ತಿದ್ದೇವೆ. ಉದಾ

ಜಯ ಜಯ ಶ್ರೀರಾಮ ನಮೋ ||ಪ||

ಹೊತ್ತು ಹೋಯಿತು ತುರು ಬಿಡಿಯೆನ್ನುತ |
ಸಾತ್ತ್ವತ ನುಡಿದನು ಗೋಪಿಯೊಡನೆ ||
ತುತ್ತುರು ತುತ್ತುರು ತುರುತುರುಯೆನ್ನುತ |
ಒತ್ತಿ ಸ್ವರಗಳನು ಪೊಂಗೊಳಲೂದುತ ||೧||

ವನಿತೆ ಸಟ್ಟುಗದೊಳು ಅಕ್ಕಿಯ ತೊಳಸಿ |
ಒನಕೆಯಿಂದ ಓಗರ ಹದನೋಡಿ ||
ಮಿನುಗುವ ಸೀರೆಯ ತಲೆಗೆ ಸುತ್ತಿಕೊಂಡು |
ವನಕೆ ಹೋಗಲೆಂದು ಹೊರಗೆ ಹೊರಟಳು ||೨||

ಹಸುವಿಗೆ ಇಟ್ಟಳು ಹಾಲು ಓಗರ |
ಬಿಸಿಮಡ್ಡಿಯ ಗಂಡಗೆ ಚಾಚಿ ||
ಸೊಸೆಯನು ಅಟ್ಟಿಸಿ ತೊತ್ತನು ಪಾಲಿಸಿ
ಮೊಸರ ಕಾಸಿ ಹೆಪ್ಪ ಹಾಕಿದಳೊಬ್ಬಳು || ೩ ||
ಗಿಳಿಗೆ ಹಾಸಿದಳು ಹಾಸು ಮಂಚವನು |
ಅಳಿಯನ ಪಂಜರದೊಳಗಿರಿಸಿ ||
ತಳಿಗೆಯಲ್ಲಿ ತಮ್ಮನ ಮಲಗಿಸಿ ತೊಟ್ಟಿ |
ಲೊಳಗೆ ಎಡೆಯನು ಮಾಡಿದಳೊಬ್ಬಳು || ೪ ||

* * *

ಇಲ್ಲಿ ಕೃಷ್ಣನ ಕೊಳಲನಾದವನ್ನು ಕೇಳಿ ಪರವಶೆಯರಾದ ಗೋಪಿಯರ ವರ್ತನೆಯಲ್ಲಿ ಉಂಟಾದ ಪಲ್ಲಟವನ್ನು ಹೃದಯಂಗಮವಾಗಿ ಚಿತ್ರಿಸಲಾಗಿದೆ. ಮೂರನೆಯ ನುಡಿಯ 'ಅಸಂಭಾವ್ಯತೆ'ಯು ಧ್ವನಿ ಪೂರ್ಣವಾಗಿದೆ.

"ಹರಿದಾಸ ಆಂದೋಲನದ ಮುಖ್ಯಶಕ್ತಿ ಭಕ್ತಿ. ಪರಮಾತ್ಮನ ಸಾಕ್ಷಾತ್ಕಾರವನ್ನು, ಭಕ್ತಿಯ ಮೂಲಕ ಕಾಣಹೊರಟ ಸಾಧಕರು ಹರಿದಾಸರು. ಭಕ್ತಿಯ ವಿವಿಧಾನುಭವದ ಆಲಿಂಗನದಲ್ಲಿ ಭಕ್ತ-ಭಗವಂತನ ಸೂಕ್ಷ್ಮ ಸಂಬಂಧ ಹತ್ತೆಂಟು ಭಾವಭಂಗಿಗಳಲ್ಲಿ ದಾಸಸಾಹಿತ್ಯದಲ್ಲಿ ಪ್ರಕಟಗೊಂಡಿವೆ. ಇದು ಕೃಷ್ಣ-ಗೋಪಿಯರ ನಡುವಣ ಶೃಂಗಾರ ಭಾವವಿರಬಹುದು, ಕೃಷ್ಣ-ಯಶೋದೆಯರ ನಡುವಣ ವಾತ್ಸಲ್ಯ ಭಾವವಿರಬಹುದು, ಕೃಷ್ಣ-ಸುಧಾಮರ ನಡುವಣ ಸಖ್ಯಭಾವವಿರಬಹುದು. ಹೀಗೆ ಶ್ರೀಕೃಷ್ಣ; 'ದಾಸರಿಗೆ ಒಡೆಯನಾಗಿ, ಒಡನಾಡಿಯಾಗಿ, ಇನಿಯನಾಗಿ, ತನಯನಾಗಿ, ಕಂಡಿದ್ದಾನೆ ಕಾಡಿದ್ದಾನೆ.

ಹರಿದಾಸರ ಕೃತಿಗಳನ್ನು ಸಾಹಿತ್ಯಕ, ಸಾಂಸ್ಕೃತಿಕ ಅಭಿವ್ಯಕ್ತಿಯೆಂದಷ್ಟೇ ಪರಿಗಣಿಸದೆ ಅವುಗಳನ್ನು ಅವರ ಅಪರೋಕ್ಷಾನುಭವದ ಅಪೂರ್ವಕ್ಷಣಗಳ ಹೊಳಹು ಎಂದು ಪರಿಗಣಿಸಬೇಕಾಗಿದೆ. ಇದನ್ನು ಪರಿಶೀಲಿಸಿದಾಗ ಭಕ್ತಿಯೇ ಅವರ ಹೊಳಹಿನ ಸೆಲೆ ಎಂಬ ಅರಿವಾಗುತ್ತದೆ. ಅವರು ಪರಮಾತ್ಮನ ಬಿಂಬೋಪಾಸಕರು. ಹೀಗಾಗಿ ಅವರದು ಸಾಕಾರಭಕ್ತಿ. ಈ ಸಾಕಾರ ಭಕ್ತಿ ಕೀರ್ತನೆಗಳುದ್ದಕ್ಕೂ ಹರಿದಾಡುವುದನ್ನು ಕಾಣುತ್ತೇವೆ."(ನಾವಡ ಎ.ವಿ.ಗಾಯತ್ರೀ ನಾವಡ, ೨೦೦೨ : ೧೯)

ಶ್ರೀಪಾದರಾಜರು, ವ್ಯಾಸರಾಯರು ಹಾಗೂ ಪುರಂದರದಾಸರು ಈ ಕ್ಷೇತ್ರದಲ್ಲಿ ಅಪಾರ ಸಾಧನೆ ಮಾಡಿದ್ದಾರೆ. ಒಬ್ಬೊಬ್ಬರು ಕೈಗೊಂಡ ಸನ್ನಿವೇಶಕಥನವೂ ಒಂದೊಂದು ಮಹಾಪ್ರಬಂಧಕ್ಕೆ ವಸ್ತುವಾಗಬಲ್ಲಷ್ಟು ಗುಣಗಾತ್ರಗಳಲ್ಲಿ ಸಮೃದ್ಧವಾಗಿದೆ. ಡಾ.ವಾಸುದೇವ ಅಗ್ನಿಹೋತ್ರಿ ಅವರು ತಮ್ಮ ಮಹಾಪ್ರಬಂಧದಲ್ಲಿ ಪುರಂದರದಾಸರ "ಕೃಷ್ಣ ಲೀಲಾ ಸನ್ನಿವೇಶಗಳ ಚಿತ್ರಣವನ್ನು ಸವಿಸ್ತಾರವಾಗಿ ಅಧ್ಯಯನ ಮಾಡಿದ್ದಾರೆ. ಇಲ್ಲಿ ಒಂದೆರಡು ಉದಾಹರಣೆಗಳನ್ನು ಮಾತ್ರ ನೋಡಬಹುದು.

ವ್ಯಾಸರಾಯರು ತಮ್ಮ ಒಂದು ಕೀರ್ತನೆಯಲ್ಲಿ ಗೋಪಿಯರು ಯಶೋದೆಗೆ ಕೃಷ್ಣನ ಚೇಷ್ಟೆಗಳ ಬಗ್ಗೆ ದೂರುವ ಪ್ರಸಂಗವಿದೆ.

ಕೇಳೆ ಯಶೋದೆ ನಿನ್ನ ಮಗನ ಲೂಟಿಯ
ತಾಳಲಾರೆವೆ ನಾವು ತರಳನ ದುಡುಕು ‖ ಪ ‖
ಪೇಳಬಾರದೆ ಗೋಪಾಲಕೃಷ್ಣಗೆ ಬುದ್ಧಿ
ಅಮ್ಮಾ-ಇದು ಚೆನ್ನಾಯಿತು ತಿಳಿದವಲ್ಲವೆ
ನೀ ಕೇಳೆ ಯಶೋದೆ ನಿನ್ನ ಮಗನ ಲೂಟಿಯ ‖ ಅ.ಪ ‖

ಬಾಲಕನೆಂದು ಲಾಲಿಸಿ ಕರೆದರೆ
ಮೂಲೆ ಮನೆಯೊಳಗೆ ಪೊಕ್ಕು
ಪಾಲು ಮೊಸರು ಬೆಣ್ಣೆಗಳ ಮೆದ್ದು
ಕೋಲಲಿ ನೀರ ಕೊಡಗಳೊಡೆದ
ನೀಲವರ್ಣದ ದಿಟ್ಟ ನಿತ್ಯವೀ ಹೋರಾಟ
ಬಾಲೆಯರಲ್ಲಿ ನೋಟ ಬಹಳ ಬಗೆಯಲ್ಲಿ
ತಿಳಿದೆವೆಂದರೆ ಮೇಲೆ ಎಂಜಲುಗುಳಿ ಪೋದ
ಅಮ್ಮಾ ಇದು ಚೆನ್ನಾಯ್ತು ತಿಳಿದವನಲ್ಲವೆ
ನೀ ಕೇಳೆ ಯಶೋದೆ ನಿನ್ನ ಮಗನ ಲೂಟಿಯ ‖ ೧ ‖

ಮತ್ತೆ ಭಾಮಿನಿಯರೆಲ್ಲರು ಕೂಡಿ
ಮಡುವಿನೊಳು ಜಲಕ್ರೀಡೆಯನಾಡಲು
ಚಿತ್ತಚೋರ ನಮ್ಮ ಸೀರೆಗಳೆಲ್ಲವ
ಹೊತ್ತುಕೊಂಡು ಮರವನೇರಿದ
ಬತ್ತಲೆ ಭಾಮೆಯರೆಲ್ಲ ಬೇಡಿದರೆ ಕೊಡನಲ್ಲ
ಯುಕ್ತಿ ಬಹುಬಲ್ಲ ಹತ್ತಿಲಿ ಬಂದು ಕರ
ವೆತ್ತಿ ಮುಗಿದರೆ ವಸ್ತ್ರ ಕೊಡುವೆನೆಂದ
ಅಮ್ಮಾ ಇದು ಚೆನ್ನಾಯ್ತು ತಿಳಿದವನಲ್ಲವೆ
ನೀ ಕೇಳೆ ಯಶೋದೆ ನಿನ್ನ ಮಗನ ಲೂಟಿಯ ‖ ೨ ‖

ಸದ್ದು ಮಾಡದೆ ಸರಿ ಹೊತ್ತಿಲಿ
ನಿದ್ದೆಗಟ್ಟಲಿ ನಾನಿರಲು
ಮುದ್ದು ಕೃಷ್ಣ ನಮ್ಮ ಮನೆಯವರಂತೆ
ಮುದದಿಂದಲೆನ್ನನು ತಾ ಕೂಡಿದ
ಎದ್ದು ನೋಡುವೆನಲ್ಲ ಆಹ ಏನೆಂಬುವರೆಲ್ಲ
ಬುದ್ಧಿ ಮೋಸ ಬಂತಲ್ಲ ಪೊದ್ದಿ ಸಲ್ಲಿಸಿದೆ
ಬುದ್ಧಿವಂತನೆಂದರೆ ಪರಿಹಾಸ್ಯ ಮಾಡಿ ನಗುವ

ಅಮ್ಮಾ ಇದು ಚೆನ್ನಾಯ್ತು ತಿಳಿದವನಲ್ಲವೆ
ನೀ ಕೇಳೆ ಯಶೋದೆ ನಿನ್ನ ಮಗನ ಲೂಟಿಯ

ಕೃಷ್ಣನ ಬಾಲಲೀಲೆಗಳನ್ನು 'ಕಾಮೋಪಸರ್ಜನ ಭಕ್ತಿ'ಯ (ಮಧುರಭಾವ'ದ) ಹಿನ್ನೆಲೆಯಲ್ಲಿ ವರ್ಣಿಸುವ ಇಂಥ ಸನ್ನಿವೇಶಗಳನ್ನು ಎಚ್ಚರಿಕೆಯಿಂದ ಪರಿಭಾವಿಸಬೇಕು. ಭಾಗವತವು ಕಂಡ ದೃಷ್ಟಿಗಿಂತ ಹೊರತಾಗಿ ನೋಡಿದರೆ ಅಪಾರ್ಥವಾಗುವ ಅಪಾಯ ತಪ್ಪಿದ್ದಲ್ಲ.

"ಕೃಷ್ಣ ಸಣ್ಣವನಿದ್ದಾಗ ನಡೆದುವೆಂದು ಪುರಾಣಗಳಲ್ಲಿ ಬರುವ ಪ್ರಸಂಗಗಳನ್ನೆತ್ತಿಕೊಂಡು ದಾಸರು ಹಲವಾರು ಒಳ್ಳೆಯ ಕೀರ್ತನೆಗಳನ್ನು ರಚಿಸಿದ್ದಾರೆ. ನೆರೆಮನೆಯಾಕೆ ಗೋಪಿಯ ಬಳಿ ಬಂದು ಕೃಷ್ಣ ಕೊಡಹಾಲ ಕುಡಿದನೆಂದೂ, ಗಡಿಗೆಯೊಡೆದನೆಂದೂ, ದೊಡ್ಡ ಕೊಡದೊಳಗೆ ಅಡಗಿದ್ದನೆಂದೂ, ಅಳಿಯನ ವೇಷದಿಂದ ಮಗಳ ಕರೆಯ ಬಂದು ಗಿಳಿಯಂಥ ಹೆಣ್ಣಿನ ಕೆಡಸಿದನೆಂದೂ ದೂರು ಹೇಳಿದರೆ, ಗೋಪಿ 'ಪುಟ್ಟಿಸ ಬೇಡಿರೆ ಅನ್ಯಾಯವ' ಎಂದಂದು ತೊಟ್ಟಲಿನೊಳಗಿದ್ದ ಚಿಣ್ಣ ಕೃಷ್ಣನನ್ನು ತೋರಿಸುತ್ತಾಳೆ. 'ಏನು ಪೇಳಲಿ ಗೋಪಿ ನಿನ್ನ ಮಗನ ಜಾಲ' ಎನ್ನುವ ಆನಂದ ಭೈರವಿಯ ಪದವೊಂದು ಈ ಸಂದರ್ಭವನ್ನು ಹೇಳುತ್ತದೆ. 'ಯಾರ ಮಗನಮ್ಮ ರಂಗಯ್ಯ'(ಜಂಝೂಟಿ), 'ಇದೇ ಸಮಯ ರಂಗ ಬಾರೆಲೋ'(ಸೌರಾಷ್ಟ್ರ), 'ಹೇಳಿದರೆ ನಮ್ಮ ಮೇಲೆ ಯಾಕಮ್ಮ ಸಿಟ್ಟು'(ಶಂಕರಾಭರಣ), 'ನೆಂಟನು ಸಣ್ಣವನೆಂದು ನಂಬಿದೆನಮ್ಮ'(ಶಂಕರಾಭರಣ), 'ಎಂಥ ಸಣ್ಣವನೇ ನನ್ನ ಮಗ'(ನಾಟಕುರಂಜಿ) ಗೋಕುಲದಲಿ ನಾನಿರಲಾರೆ(ವಸಂತಭೈರವಿ) ಮುಂತಾದ ಕೃತಿಗಳಲ್ಲಿ ಕೃಷ್ಣಾವತಾರದ ಸ್ವಾರಸ್ಯವಾದ ಇಣುಕು ನೋಟಗಳಿವೆ."(ರಾಮಚಂದ್ರರಾವ್ ಸಾ.ಕೃ., ೨೦೦೩:೨೬) ಇಲ್ಲಿಯ ಸ್ವಾರಸ್ಯವನ್ನು ತಿಳಿಯಲು ಆಯಾರಾಗಗಳಲ್ಲೇ ಹಾಡುವುದು; ಹಾಗೆ ಹಾಡಿದ್ದನ್ನು ಕೇಳಿ, ಅನುಭವಿಸಿ, ಅನಂತರ ವಿಮರ್ಶೆಗೆ ತೊಡಗುವುದು ಮತ್ತೊಂದು ಅಧ್ಯಯನ ವಿಧಾನವಾಗಿದೆ.

ರಂಗ ಕೊಳಲನೂದಲಾಗ |
ಮಂಗಳ ಮಯವಾಯ್ತು ಧರೆ ‖ ಪ ‖

ಬಾಡಿದ ಮಾಮರಗಳು ಗೊನೆಯೊಡೆದವು |
ತೀಡುತ ಮಾರುತ ಮಂದಗತಿಗೊಯ್ಯೆ ‖
ಬಾಡಿದ ಬರಲು ಫಲದ ಗೊಂಚಲು |
ಪಾಡಲೊಲ್ಲವಳಿಕುಲಗಳು ‖

ಹೇಡಿಗೊಂಡವು ಜಕ್ಕವಕ್ಕಿ ಗಿಳಿ ಮಾ |
ತಾಡದೆ ಕಳೆಗುಂದಿದವು ಕೋಗಿಲೆ ‖
ಓಡಾಟ ವೈರಾಟ ಬಿಟ್ಟುವು ಖಗಮೃಗ |
ಗಾಢ ನಿದ್ರಾವಶವಾದವು ‖

ಕೆಳಗಿನುದಕ ಉಬ್ಬೇರಿ ಬಂದುವು |
ತುಳುಕಿ ಚೆಲ್ಲಾಡಿ ನಿಂದಳು ಯಮುನೆ ||
ಮಳೆಯ ಮೋಡೊಡ್ಡಿ ಮೇಘಾಳಿ ಧಾರಿಟ್ಟುವು |
ಕಲು-ಕರಗಿ ಕರಗಿ ನೀರಾದುವು ||

ಕೆಚ್ಚಲು ಬಿಗಿದು ತೊರೆದು ಮೊಲೆಯೊಳು |
ವತ್ಸದೊಡಲಾಸೆ ಜರಿದು ಎಳೆಹುಲ್ಲ ||
ಕಚ್ಚದಲ್ಲಿಗಲ್ಲಿ ನಿಂದುವು ತಮ್ಮಯ |
ಪುಚ್ಚವ ನೆಗಹಿ ನೀಂಟಿಸಿ ||

* * *

ದಾಮ ವನಮಾಲೆ ಶ್ರೀವತ್ಸ ಕೌಸ್ತುಭ |
ಸ್ವಾಮಿ ಪುರಂದರ ವಿಠಲರಾಯನ |
ರಾಮಶ್ರೀ-ಗುಂಡಶ್ರೀ ಮೇಘರಂಜನಿ ಪಾಡಿ |
ಸಾಮಗಾನಪ್ರಿಯ ನಮೊ ಎಂದರು ||

ಭಗವಂತನ ವೇಣುಗಾನದಿಂದ ಆದ ಇಲ್ಲಿಯ ಅದ್ಭುತ ಪರಿವರ್ತನೆಯನ್ನು ಗಮನಿಸಬೇಕು. ನಿಜಕ್ಕೂ ಸಂಗೀತಕ್ಕೆ, ಅಲ್ಲಿಯ ರಾಗಗಳಿಗೆ ಅಂಥ ಪರಿವರ್ತನ ಶೀಲಸಾಮರ್ಥ್ಯವಿದೆ. ಆದ್ದರಿಂದಲೇ ಹರಿದಾಸರು; ರಾಮಶ್ರೀ ಗುಂಡಶ್ರೀ, ಮೇಘರಂಜನಿ ರಾಗಗಳಿಂದ ಸಾಮಗಾನಪ್ರಿಯನನ್ನು ದೇವತೆಗಳೂ ಹಾಡಿದರೆಂದು ಚಿತ್ರಿಸಿದ್ದಾರೆ.

ಹೀಗಾಗಿ ಹರಿದಾಸರ ಬಹುಪಾಲು ಕೃತಿಗಳನ್ನು ಓದಿನ ಅನುಭವದಿಂದ ಮಾತ್ರ ಬೆಲೆಗಟ್ಟುವುದು ಸಮಂಜಸವೆನಿಸುತ್ತಿಲ್ಲ. ಪುರಂದರದಾಸರ ಈ ಸುಂದರ ಕೀರ್ತನೆಯನ್ನು ಗದ್ಯದಂತೆ ಅಥವಾ ಕವನವಾಚನದ ಧಾಟಿಯಿಂದ ಓದುವುದಕ್ಕೂ 'ಹಾಡಾಗಿ' ಕೇಳುವುದಕ್ಕೂ ಸಾಕಷ್ಟು ವ್ಯತ್ಯಾಸವಿದೆ. ಸನ್ನಿವೇಶ ಕಥನಗಳ ಸ್ವಾರಸ್ಯ ಗ್ರಹಣಕ್ಕೆ ಈ ಆಲಿಸುವಿಕೆ ತುಂಬಾ ಮುಖ್ಯವೆನಿಸುತ್ತದೆ. ಈ ಕೆಳಗಿನ

ಆಡಿದನೊ ರಂಗ ಅದ್ಭುತದಿಂದಲಿ |
ಕಾಳಿಂಗನ ಫಣೆಯಲಿ-ಆಡಿದನೊ ||ಪ||

ಅಂಬುರುಹೋದ್ಭವ ಅಖಿಳಸುರರು ಕೂಡಿ |
ಅಂಬರದಲಿ ನಿಂತವರು ಸ್ತುತಿಸೆ |
ರಂಭೆ-ಊರ್ವಸಿ ರಮಣಿಯರೆಲ್ಲರೂ ||
ಚೆಂದದಿಂದ ಭರತನಾಟ್ಯವ ನಟಿಸೆ |
ಝಂಪೆತಾಳದಿ ತುಂಬುರನೊಪ್ಪಿಸೆ |
ಧಾಪಮಪಧಸರಿ ಎಂದು ಧ್ವನಿಯಿಂದ |
ನಾರದ ತುಂಬುರು ಗಾನವ ಮಾಡಲು |



ನಂದಿಯು ಚೆಂದದಿ ಮದ್ದಲೆ ಹಾಕಲು ||೧||

ಫಣೆಯ ಮೆಟ್ಟಿ ಬಾಲವ ಕೈಯಲಿ ಪಿಡಿದು |
ಫಣಿಫಣಿಸುತ ನಾಟ್ಯವನಾಡೆ |
ದಿನಪ ಮಂಡಲದಂತೆ ಪೊಳೆಯುವ ಮುಖದೊಳು ||
ಚಲಿಸುತ ನೀಲ ಕೇಶಗಳಾಡೆ |
ಕಾಲಲಂದಿಗೆ ಗೆಜ್ಜೆ ಘುಲು ಘುಲು ಘುಲು ಘುಲು |
ಘುಲುರೆಂದು ಉಡಿಗೆಜ್ಜೆ ಗಂಟೆಗಳಾಡೆ ||
ದುಷ್ಟ ಕಾಳಿಂಗನ ಮೆಟ್ಟಿ ಭರದಿಂದ |
ಪುಟ್ಟ ಪಾದವನು ಇಟ್ಟ ಶ್ರೀಕೃಷ್ಣನು |
ಮೆಟ್ಟಿದ ತದ್ಧಿಮಿ ತಧಿಗಣತೋ ಎಂದು ||೨||

ಸುರರು ಪುಷ್ಪದ ವೃಷ್ಟಿಯ ಕರೆಯಲು |
ಸುದತಿಯರೆಲ್ಲರು ಪಾಡಲು |
ನಾಗಕನ್ನೆಯರು ನಾಥನ ಬೇಡಲು |
ನಾನಾವಿಧ ಸ್ತುತಿ ಮಾಡಲು |
ರಕ್ಕಸರೆಲ್ಲರು ಕಕ್ಕಸವನೆ ಕಂಡು |
ದಿಕ್ಕಿ ದಿಕ್ಕುಗಳಿಗೋಡಲು ||
ಚಿಕ್ಕವನಿವನಲ್ಲ ಪುರಂದರವಿಠಲ |
ವೆಂಕಟರಮಣನ ಬೇಗ ಯಶೋದೆ |
ಬಿಂಕದೊಳೆತ್ತಿ ಮುದ್ದಾಡೆ ಶ್ರೀಕೃಷ್ಣನ ||೩||

ಎಂಬ ಹಾಡಿನ ಬಗ್ಗೆ ಹೇಳುವಾಗ "ಈ ಕೀರ್ತನೆಯಿಂದ ಭಾಷೆ ಹಾಗೂ ಲಯಗಳ ಮೇಲಿರುವ ಪುರಂದರದಾಸರ ಪ್ರಭುತ್ವದ ಅರಿವಾಗುತ್ತದೆ. ಇಲ್ಲಿ ಬಾಲಕೃಷ್ಣನ ಕಾಳಿಂಗಮರ್ಧನ ಲೀಲೆಯ ವೈಭವ ಚಿತ್ರಿಸಲಾಗಿದೆ. ಪೌರಾಣಿಕ ಪ್ರಸಂಗದ ಸಮಕ್ಷಮ ವೀಕ್ಷಕ ವಿವರಣೆ ನಾವು ಇಲ್ಲಿ ಕಾಣಬಹುದಾಗಿದೆ. ಕೃಷ್ಣನ ಕುಣಿತದ ವೇಗ ಚಾಕಚಕ್ಯತೆಗಳನ್ನು ನಿವೇದಿಸಲು ಉಚಿತವಾದ ಭಾಷೆಯ ನಡಿಗೆ ಹಾಡಿನುದ್ದಕ್ಕೂ ಸಾಂಗೋಪಾಂಗವಾಗಿ ಜೊತೆಗೂಡಿ ನರ್ತನ ವಿನ್ಯಾಸವನ್ನು ಕಣ್ಣು, ಕಿವಿ, ಹೃದಯಗಳಿಗೆ ಏಕ ಕಾಲದಲ್ಲಿ ಅನುಭವ ಗಮ್ಯವಾಗುತ್ತದೆ. "ತಕಧಿಮಿ ತಧಿಗಣತೋ" ಎಂಬಲ್ಲಿ ನುಡಿಗಡಣ ಹಾಗೂ ಉಡಿಗೆಜ್ಜೆಯ ಗಂಟೆಯ ಶಬ್ದಗಳು ಕೇಳಬಹುದು."(ವಾಸುದೇವ ಅಗ್ನಿಹೋತ್ರಿ, ೨೦೦೪:೨೨೨) ಎಂಬ ವಿವರಣೆ ಸಮರ್ಪಕವಾಗಿದೆ.

ಈ ಭಾಗದಲ್ಲಿ ಭಾಷೆ, ಕಲೆಗಾರಿಕೆ, ಭಾವಶ್ರೀಮಂತಿಕೆಗಳತ್ತ ಹೆಚ್ಚು ಗಮನಹರಿಸದೆ ಕೀರ್ತನೆಯಲ್ಲಿ ನಡೆದ "ಋಣ ಮತ್ತು ವೃದ್ಧಿಯನ್ನು" ಬೇರೊಂದು ನಿಟ್ಟಿನಲ್ಲಿ ವ್ಯಾಖ್ಯಾನಿಸಲು ಪ್ರಯತ್ನಿಸಿದೆ.

'ಭಾಗವತ ಮಹಾಪುರಾಣವು ಓದುವ ಹಾಡುವ ಸೀಮಿತ ಚಟುವಟಿಕೆಗಳಲ್ಲಿ ಬಳಕೆಯಾಗುತ್ತಿದ್ದಾಗ ಆ ವಸ್ತುವನ್ನು ಪುನಾರಚಿಸಿ ರಾಗ, ತಾಳಗಳ ವಿನ್ಯಾಸದಲ್ಲಿ ಅಳವಡಿಸುವ ಮೂಲಕ ಹರಿದಾಸರು ಕೈಗೊಂಡ ವೃದ್ಧಿಯನ್ನು ಗುರುತಿಸಬೇಕು.

ಮೇಲ್ಕಂಡ ಕೀರ್ತನೆಯು ಭರತನಾಟ್ಯಕ್ಕೆ ಸೂಕ್ತವಾಗಿ ಒಗ್ಗುತ್ತದೆ. ಇಂಥ ಕೆಲವು ಕೀರ್ತನೆಗಳ ನಾಟ್ಯ ಪ್ರದರ್ಶನವನ್ನು ಆಧರಿಸಿ, ಅಲ್ಲಿಯ ಹೆಜ್ಜೆ, ಗೆಜ್ಜೆ ವಾದ್ಯ, ನಟನೆಗಳ ಸಮ್ಮೇಳದಲ್ಲಿ ನೋಡುತ್ತ ಕೇಳುವಾಗ ಉಂಟಾಗುವ ಪರಿಣಾಮರಮಣೀಯತೆಯನ್ನು ವಿವೇಚಿಸಬಹುದಾಗಿದೆ.

ಸನ್ನಿವೇಶ ಕಥನದ ಈ ಭಾಗದಲ್ಲಿ ಕೀರ್ತನೆಗಳದೇ ಸಿಂಹಪಾಲಾದರೂ ಸುಳಾದಿಗಳ ಪ್ರಯೋಗವನ್ನೂ ನಿರ್ಲಕ್ಷಿಸುವಂತಿಲ್ಲ. ಶ್ರೀಕೃಷ್ಣನು ಶಿಶುವಾಗಿದ್ದಾಗ ಬೆಳೆದು ಬಂದ ಕ್ರಮವನ್ನು ಭಾಗವತದ ಋಣದ ಮಧ್ಯೆಯೂ ಸ್ವಾರಸ್ಯಕರವಾಗಿ ಚಿತ್ರಿಸಲಾಗಿದೆ.

ಧ್ರುವತಾಳ

ಹೊಡೆಮರಳ ಕಲಿತ ಶ್ರೀಕೃಷ್ಣ ನಾಗರ|
ಹೆಡೆಯಂತೆ ತಲೆಯೆತ್ತಲು ಕಲಿತ ಕೃಷ್ಣ |
ಕಡುಮುದ್ದು ಸುರಿವಂತೆ ನಗಲುಕಲಿತ ಕೃಷ್ಣ |
ನುಡಿಯ ಕಲಿತ ಉಗ್ಗು ಉಗ್ಗು ಎಂದು ಕೃಷ್ಣ |
ಉಡಿಗಂಟೆ ಹುಲಿಯುಗುರರಳೆಲೆ ಮಾಗಾಯಿ |
ಕಡಗ ಕಂಕಣದಿಂದ ಮುದ್ದು ಮೆರೆವ ಕೃಷ್ಣ |
ಮಡದಿಯರೆತ್ತಿ ಮುದ್ದಾಡಿಸಲವರ ಓ |
ರುಡೆಯ ಮೇಲೆದ್ದು ಕುಣಿವನು ಕೃಷ್ಣ |
ಹಿಡಿ ಹೊನ್ನು ಗುಬ್ಬಿತಾ ಹೊನ್ನ ಗುಬ್ಬಿಯನಾಡಿ
ಜಡಿದು ಚಪ್ಪಾಳೆಯಿಕ್ಕುವನು ಕೃಷ್ಣ|
ಮೃಡಮುಖ್ಯಸುರರು ಅಂಬರದಲಿ ನೋಡಿ ನೋಡಿ |
ಕಡುವೊಪ್ಪಿ ತುತಿಸಿ ಹಾರೈಸುತಿರೆ |
ಕಡೆಗಣ್ಣಿನಿಂದವರ ನೋಡಿ ನಲಿವ ನಮ್ಮ |
ಒಡನಾಡಿ ಪುರಂದರ ವಿಠ್ಠಲ ಗೋಪಾಲಕೃಷ್ಣ |

ಧ್ರುವತಾಳದ ಗತಿಗೆ ಈ ಸುಳಾದಿಯನ್ನು ಹಾಡಿಕೊಂಡು ಹೋದರೆ ದಾಸರ ಕಾಲದ ಸಹೃದಯರು ಇಂತಹ ರಚನೆಗಳನ್ನು ಹೇಗೆ ಸವಿಯುತ್ತಿದ್ದರೆಂಬುದನ್ನು ಊಹಿಸಲು ಸಾಧ್ಯವಾದೀತು.

"ಕೀರ್ತನ ಪ್ರಕಾರದಲ್ಲಿ ಪುರಂದರದಾಸರ ಪ್ರತಿಭೆ ಪೂರ್ಣವಾಗಿ ಕ್ರಿಯಾಮುಖವಾಗಿದೆ. ಜೊತೆಗೆ ಹರಿದಾಸ ಪರಂಪರೆಯಿಂದ ಬಂದಿದ್ದ ಭಾಗವತ ಕಲ್ಪನೆಗಳನ್ನು ಮತ್ತಷ್ಟು ಹೊಳಪುಗೊಳ್ಳುವಂತೆ ಬಳಸಿ ಕೊಂಡರಿವರು. ಮಧುಕರ ವೃತ್ತಿಯಲ್ಲಿ ಮನೆಮನೆಯ ಮುಂದೆ ನಿಂತು ಹಾಡುವಾಗ ಇವರು

ಕೀರ್ತಿಸುತ್ತಿದ್ದ ಕೃಷ್ಣನ ಬಾಲಲೀಲೆಗಳ ಗಂಧರ್ವಲೋಕ, ಕನ್ನಡದ ಗರತಿಯರ ಹೃದಯವನ್ನು ಸೂರೆಗೊಂಡಿರಬೇಕು. ಒಬ್ಬೊಬ್ಬ ತಾಯಿಯೂ ತನ್ನ ಮಗುವಿನ ಆಟದಲ್ಲಿ ಬಾಲಕೃಷ್ಣನನ್ನೇ ಕಾಣುವಂಥ ಮಾಂತ್ರಿಕತೆ ಈ ಕೀರ್ತನೆಗಳನ್ನು ಜನರ ಹತ್ತಿರ ಮಾಡಿರಬೇಕು" (ಸಿದ್ಧಲಿಂಗಯ್ಯ.ಜಿ.ಎಸ್ ; ೧೯೯೭:೧೮).

ಗುಮ್ಮನ ಕರೆಯದಿರೆ-ಅಮ್ಮ ನೀನು |
ಗುಮ್ಮನ ಕರೆಯದಿರೆ ||ಪ||
ಸುಮ್ಮನೆ ಇರುವೆನು ಅಮ್ಮಿಯ ಬೇಡೆನು |
ಮಮ್ಮು ಉಣ್ಣುತೇನೆ ಅಮ್ಮ ಅಳುವದಿಲ್ಲ ||ಅ.ಪ||

ಹೆಣ್ಣುಗಳಿರುವಲ್ಲಿಗೆ ಹೋಗಿ ಅವರ |
ಕಣ್ಣು ಮುಚ್ಚುವದಿಲ್ಲವೆ |
ಚಿಣ್ಣರ ಬಡಿಯೆನು ಅಣ್ಣನ ಬೈಯೆನು |
ಬೆಣ್ಣೆಯ ಬೇಡೆನು ಮಣ್ಣು ತಿನ್ನುವುದಿಲ್ಲ ||೧||

ಬಾವಿಗೆ ಹೋಗೆ ಕಾಣೆ - ಅಮ್ಮ ನಾನು |
ಹಾವಿನ ಮೇಲಾಡೆ ಕಾಣೆ |
ಆವಿನ ಮಾಲೆಯೊಡೆ ಕರುಗಳನ್ನು ಬಿಡೆ |
ದೇವರಂತೆ ಒಂದು ಠಾವಲಿ ಕೂಡುವೆ ||೨||

ಮಗನ ಮಾತನು ಕೇಳುತ-ಗೋಪಿದೇವಿ |
ಮುಗುಳು ನಗೆಯ ನಗುತ |
ಜಗದ ಒಡೆಯನ ಶ್ರೀಪುರಂದರವಿಠಲನ |
ಬಿಗಿದಪ್ಪಿಕೊಂಡಳು ಮೋಹದಿಂದಾಗ ||೩||

ಎಂಬ ಕೀರ್ತನೆಯಲ್ಲಿ ಕೃಷ್ಣನ ಚೇಷ್ಟೆಗಳಿಗೆ ರೋಸಿ ಹೋದ ಗೋಪಿಯು ಗುಮ್ಮನನ್ನು ಕರೆಯುವುದಾಗಿ ಬೆದರಿಸಿದಾಗ, ತಾನು ಮತ್ತೊಮ್ಮೆ ಹಾಗೆ ಮಾಡುವುದಿಲ್ಲವೆಂದು ಗೋಗರೆದಾಗ ಅವಳು ಬಂದು ಬಾಚಿ ತಬ್ಬಿಕೊಳ್ಳುವ ವಾತ್ಸಲ್ಯಮಯ ಚಿತ್ರಣವಿದೆ. ಇಂತಹ ಭಾವದೀಪ್ತ ಸನ್ನಿವೇಶ ನಿರ್ಮಾಣಗುಣವನ್ನು ಕಂಡ ವಿಮರ್ಶಕರು "ಅವರು ಬಳಸಿಕೊಂಡ ಭಾಗವತದ ಶ್ರೀಕೃಷ್ಣನ ಬಾಲಲೀಲಾ ಪ್ರಸಂಗಗಳು ಕೃಷ್ಣ ಗೋಪಿಯರ ಸಂಬಂಧಗಳು ಒಂದು ರೀತಿಯಲ್ಲಿ ಜೀವಸಂಭ್ರಮದ ಚಿತ್ರಗಳಿಂದ ವಿಜೃಂಭಿಸಿ ಕಾವ್ಯತ್ವವನ್ನು ಪಡೆದುಕೊಂಡವು. ಹೀಗೆ ವಚನಗಳಿಗಿಂತ ಹೆಚ್ಚಿನ ರೀತಿಯ ಜೀವನ ಸಂಭ್ರಮದ ಚಿತ್ರವನ್ನು ಹರಿದಾಸರ ಕೀರ್ತನೆಗಳಲ್ಲಿ ಕಾಣುವುದು ತುಂಬ ಉಲ್ಲೇಖನಾರ್ಹವಾದ ಅಂಶವಾಗಿದೆ."(ಸಿದ್ಧಲಿಂಗಯ್ಯ ಜಿ.ಎಸ್., ೧೯೯೭:೧೩) ಎಂಬ ಹಿನ್ನೆಲೆಯಲ್ಲೂ ಚಿಂತನೆ ನಡೆಸಿದ್ದಾರೆ.

ಸನ್ನಿವೇಶ ಕಥನದಲ್ಲಿ ವಾದಿರಾಜರೂ ಸಿದ್ಧಹಸ್ತರು. ಅವರ ಒಂಬತ್ತು ನುಡಿಯ ಕೀರ್ತನೆಯೊಂದು ರುಕ್ಮಿಣೀ ಕಲ್ಯಾಣದ ಸಂದರ್ಭವನ್ನು ಸೆರೆ ಹಿಡಿದಿದೆ.



ಶೋಭನವೆ ಹರಿ ಶೋಭನವು
ವೈಭವಾಮಲ ಪಾವನ ಮೂರುತಿಗೆ
ಶೋಭನವೆ ಶೋಭನವು ॥ ಪ ॥

ಕುಂಡಲಿ ನಗರದ ರುಕ್ಮಣಿ ಸ್ವಯಂವರ
ಗಂಡಕಿ ಕ್ಷೋಣಿಯ ತೀರದಲಿ ಚಂದ್ರ
ಮಂಡಲ ಕ್ಷೋಣಿಜಾತೆ ಪ್ರಭೆ
ದುಂದುಭೀ ಪಾರಿಜಾತ ಎಸೆಯೆ ॥

* * *

ಭೀಷ್ಮಕ ರುಕ್ಮಿಣಿ ಶಿಶುಪಾಲ(ಗೀವೆ)ನೆಂದು
ಸೇಸೆಯ ತಳೆದು ಧಾರೆನೆರೆಯೆ
ಆ ಸಮಯದಲಿ ದ್ವಾರ(ಕೆ)ಕೃಷ್ಣಗೆ
ಲೇಸಾದ ಓಲೆಯ ಬರೆದಳಾಕೆ ॥

ಬರೆದೋಲೆಯ ಕಾಣಿಸಿ ತೆಗೆದೋದಿ
ಪುರೋಹಿತ ಗರ್ಗ್ಯಾಚಾರ್ಯರು
ನಿರೂಪ ಕೊಡು ನಮಗೆ ನಿಗಮಗೋ-
ಚರನು ಗರುಡವಾಹನ ಗಮ್ಮನೆಬಾಹೋನು ॥

ಗೌರಿಯ ನೋನುವ ಮದುವೆಯ ಸಡಗರ
ಭುವನೇಶ ತಾ ತಡೆದನ್ಯಾಕೆಂದು
ತಾ ಚಿಂತಿಸಿದಳು ತಾವರೆಗಂಗಳೆ
ಹವಣಿಸಿದಳು ವಿಲಕ್ಷಣಗಾಗಿ ॥

ಚಂದದಿ ರುಕ್ಮಿಣಿ ಮುತ್ತೈದೆರಿಗೆಲ್ಲ
ಸಂಭ್ರಮದಿಂದ ಬಾಗಿಣ(ಬೀರೆ ಐ)
ತಂದು ತಾಳಿಯ ಮಂಗಳಸೂತ್ರ ಮು-
ಕುಂದ ಕಟ್ಟಿ ಕಲ್ಯಾಣವಾದ ॥

ಅಂಬಿಕೆಗುಡಿಯಲಿ ಚಂದದಿಂದ ಪೂಜೆಯ ಮಾಡಿ
ರಂಗ(ನ) ಕೂಡಿದ ಸಂಭ್ರಮದಿಂದ
ಮಂದಾರಮಾಲೆಯ ಚಂದದಿಂದಲಿ ತಂದು
ರಂಗನ ಕೊರಳೊಳು ಹಾಕಿದಳು ॥

ಹಿಂದಿಂದ ಬಹ ರುಕುಮನ ಕಂಡು
ಭಂಗಿಸಿ ಕರೆದು ಭಂಗವ ಮಾಡಿ
ಹಿಂದಿಂದ ಕರೆದು ಮುಂದಕೆ ಕಟ್ಟಿ ಮು-
ಕುಂದ ಹಯವದನ ದ್ವಾರಕೆ ಪೊಕ್ಕ ॥

ರುಕ್ಮಿಣಿಕಲ್ಯಾಣದ ಘಟನೆಯ ವಿವರಗಳನ್ನು ಹೇಳುವ ಕೃತಿಯಾಗಿ ಮೂಡಿ ಬಂದ ಈ ಕೀರ್ತನೆಯು ದೀರ್ಘ ಕೃತಿಯೊಂದರ ಭಾಗವಾಗಿರಬೇಕೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

ಕೃಷ್ಣಾವತಾರದ ಅನೇಕ ಸಂದರ್ಭಗಳನ್ನು ಒಟ್ಟಿಗೆ ನೆನೆಯುವ ವಾದಿರಾಜರ ಮತ್ತೊಂದು ದೀರ್ಘ ರಚನೆಯನ್ನೂ ಗಮನಿಸಬೇಕು.

ನೆನೆವೆನನುದಿನ ನೀಲನೀರದವರ್ಣನ ಗುಣರನ್ನನ
ಮುನಿಜಪ್ರಿಯ ಮುದ್ದು ಉಡುಪಿನ ರಂಗನ ದಯಾಪಾಂಗನ ॥ ಪ ॥

ದೇವಕೀ ಜಠರೋದಯಾಂಬುಧಿಚಂದ್ರನ ಸುಖಸಾಂದ್ರನ
ಗೋವ್ರಜಕೆ ಘನ ಯಮುನೆಯನು ದಾಟಿ ಬಂದನ ಅಲ್ಲಿ ನಿಂದನ
ಮಾವ ಕಳುಹಿದ ಮಾಯಶಠವಿಯ ಕೊಂದನ ಚಿದಾನಂದನ
ದೇವರಿಪು ದೈತ್ಯೇಂದ್ರ ಶಕಟನ ಒದ್ದನ ಶ್ರುತಿಸಿದ್ಧನ ॥ ೧ ॥

ಗೋಕುಲದ ಗೋಪಿಯರ ಸಂಚಿತ್ತ ಚೋರನ ಬಹುದೀರನ ಅ-
ನೇಕ ನಾರಿಯರ್ವಸನವನು ಕದ್ದೊಯ್ದನ ಪುರಗಾಯ್ದನ
ನಾಕಿಯರ ನೋಯಿಪಧೇನುಕ ವತ್ಸವಿಘಾತ ವಿಖ್ಯಾತನ
ಕಾಕುಮತಿ ಕಾಳಿಂಗನ ಫಣ ತುಳಿದನ ಅವಗೊಲಿದನ ॥ ೨ ॥

ಶೈಲವನು ಶೇಷಶಯನ ಬೆರಳಲಿ ಆಂತನ ಬಲವಂತನ
ಸೋಳಸಾಸಿರ ಬಾಲೆಯರ ಕರ ಪಿಡಿದನ ಸುಧೆಗುಡಿದನ
ಬಾಲ ಭಾಮೆಯರೊಡನೆ ಜಲಕ್ರೀಡೆಗಿಳಿದನ ಅಲ್ಲಿ ನಲಿದನ
ಲೀಲೆಯಲಿ ಲಲನೆಯರಿಗಿಷ್ಟವ ಕೊಟ್ಟನ ಸಂತುಷ್ಟನ ॥ ೩ ॥

ಕ್ರೂರ ಬಕ ಕೇಶಿಗಳನೆಲ್ಲ ಸೀಳ್ದನ ಸುರರಾಳ್ದನ ಅ
ಕ್ರೂರ ಕರೆಯಲು ಹರುಷದಿಂದಲಿ ಬಂದನ ಸುರವಂದ್ಯನ
ಸಾರಿ ಕುಬ್ಜೆಗೆ ಭೂರಿಸಂತಸವಿತ್ತನ ಅತಿಶಕ್ತನ
ವಾರಣವ ಒದ್ದು ಕೆಡಹಿದಾಪ್ರತಿಮಲ್ಲನ ಅತಿಚೆಲ್ವನ ॥ ೪ ॥

ಸುಲಭದಿಂದಲಿ ಶಿವನ ಧನುವನು ಮುರಿದನ ನೆರೆಮೆರೆದನ
ಮಲೆತ ಮಲ್ಲರ ಮಡುಹಿರಂಗದಿ ನಿಂತನ ಜಯವಂತನ
ಖಳಕುಲಾಗ್ರಣಿ ಕಂಸನೆಂಬನ ಹೊಡೆದನ ಹುಡಿಗೆಡೆದನ
ಬಲದಿ ತಾಯಿತಂದೆ ಬಂಧನ ಕಡಿದನ ಕೀರ್ತಿ ಪಡೆದನ ॥ ೫ ॥

ಭುವನ ಪಟ್ಟವನುಗ್ರಸೇನಗೆ ಕೊಟ್ಟನ ಅತಿ ದಿಟ್ಟನ
ಯುವತಿಯರಿಗುದ್ಧವನ ಕಳುಹಿದ ಜಾಣನ ಸುಪ್ರವೀಣನ
ವಿವಿಧ ವಿದ್ಯಾಕಲೆಗಳನ್ನೆಲ್ಲ ಅರಿತನ ಶುಭಚರಿತನ
ಜವನ ಶಿಕ್ಷಿಸಿ ದ್ವಿಜನ ಕಂದನ ತಂದನ ಆನಂದನ ॥ ೬ ॥



ಕುಮತಿ ಖಳ ಮಾಗಧನ ಯುದ್ಧದಿ ಗೆದ್ದನ ಅನವದ್ಯನ
ದ್ಯುಮಣಿಸಮ ದ್ವಾರಕೆಯ ರಚಿಸಿದುದಾರನ ಗಂಭೀರನ
ಸುಮತಿ ಮುಚುಕುಂದನೊದ್ದ ಯವನನ ಸುಟ್ಟನ ಅತಿದಿಟ್ಟನ
ವಿಮಲ ಸುಚರಿತ್ರಾಷ್ಟಮಹಿಷಿಯರಾಳ್ದನ ನೆರೆಬಾಳ್ದನ || ೭ ||

ಮುರನರಕ ಮುಖ್ಯರನು ಚಕ್ರದಿ ತರಿದನ ಕರಿವರದನ
ಸುರತರುವ ಸತಿಗಾಗಿ ತಂದ ಸಮರ್ಥನ ಜಗತ್ಕರ್ತನ
ದುರುಳ ಶಿಶುಪಾಲಾದಿ ದೈತ್ಯ ಸಂಹಾರನ ಬಹುಶೂರನ
ಕುರುಕುಲಕೆ ಲಯವಿತ್ತ ಪಾಂಡವಪ್ರೀಯನ ಕವಿಗೇಯನ || ೮ ||

ಸಂತತವು ಈ ಸಾರ ಕತೆಯನು ಕೇಳ್ವರ ನೆರೆ ಬಾಳ್ವರ
ಕಂತುಪಿತ ಕಾರುಣ್ಯದಿಂದಲಿ ಪೊರೆವನು ಸುಖಗರೆವನು
ಇಂತು ಇಳೆಯ ಸುಜನರ ಸಲಹುವ ಕಾಂತನ ಸಿರಿವಂತನ
ಪಂಥವುಳ್ಳ ಪ್ರಸನ್ನ ಹಯವದನನ್ನನ ಮುನಿಮಾನ್ಯನ || ೯ ||

ತಾಳ, ಚಪ್ಪಾಳೆ, ಖಂಜರಗಳ ಮೇಳದಲ್ಲಿ ಲಯಬದ್ಧವಾಗಿ ಹಾಡಿಕೊಂಡು ಹೋಗಲು ಅನುಕೂಲವಾಗಿರುವ ಈ ಕೀರ್ತನೆಯಲ್ಲಿ ಕಥನವಿದೆ. ಆದರೆ ಈ ಕಥನವು ಉಪಾಖ್ಯಾನದ ಮಾದರಿಯದಲ್ಲ; ಸನ್ನಿವೇಶ ಕಥನವೂ ಅಲ್ಲ; -ಹೀಗೆ ಕಥನಾಂಶದಿಂದ ಕೂಡಿದ್ದರೂ ಕತೆಗಳನ್ನು ಹೇಳದ ರೀತಿಯ ಕೃತಿಗಳನ್ನು ಬೇರೊಂದು ಪರಿಭಾಷೆಯಿಂದ ಗುರುತಿಸಬೇಕಾಗುತ್ತದೆ.

## ೫.೨. ಸಂಕಥನ ವೈವಿಧ್ಯ

ನಿರ್ದಿಷ್ಟ ಪ್ರಾರಂಭ, ಕ್ರಮಬದ್ಧವಾದ ಬೆಳವಣಿಗೆ ಮತ್ತು ಅರ್ಥಪೂರ್ಣವಾದ ಅಂತ್ಯ-ಹೀಗೆ ಕ್ರಮಾನುಗತವಾಗಿ ಸಾಗುವ ನಿರೂಪಣೆಯನ್ನು 'ಕಥನ'(narrative) ಎಂದು ಕರೆಯುತ್ತೇವೆ. ಆದರೆ **ಸಂಕಥನವು**(discourse) ಕಥನಕ್ಕಿಂತ ಭಿನ್ನವಾದುದು. 'ಕಥಾಂಶ'ಗಳನ್ನು (ಸಂಭಾಷಣೆಯ ರೂಪದಲ್ಲಾಗಲಿ, ಏಕಮುಖ ನಿರೂಪಣೆಯ ವಿಧಾನದಲ್ಲಾಗಲಿ) ವ್ಯಾಖ್ಯಾನಿಸುವ; ಉಪನ್ಯಾಸ, ಪ್ರವಚನ, ಭಾಷಣ ಮಾಡುವ ಚಟುವಟಿಕೆಗಳೆಲ್ಲ ಸಂಕಥನವೇ. ಹರಿದಾಸರು ಭಾಗವತ ಕಥನಕ್ಕಿಂತ ಸಂಕಥನಕ್ಕೆ ಹೆಚ್ಚು ಒತ್ತು ನೀಡಿದ್ದಾರೆ. ಅವರ ನೂರಾರು ಹಾಡುಗಳಲ್ಲಿ ಭಾಗವತ ಕಥಾಂಶಗಳ ಸಂಕಥನವಿದೆ. ಒಂದು ಕಥೆಯನ್ನು ಇಡಿಯಾಗಿ ಹೇಳದಿರುವಾಗಲೂ; ಪೂರ್ವಪರಿಚಿತವಾದ ಅಲ್ಲಿಯ ಪಾತ್ರಗಳು, ಘಟನೆಗಳು ಮತ್ತು ಸಂದೇಶಗಳನ್ನು ಒಂದೋ, ಎರಡೋ ಮಾತುಗಳಲ್ಲಿ ಸಮರ್ಥವಾಗಿ ಸಂವಹನ ಮಾಡುವ ಈ ಬಗೆಯ ರಚನೆಗಳ ಅಧ್ಯಯನ ಕುತೂಹಲಕಾರಿಯಾದುದು.

ಉದಾ : ಹರಿನಾರಾಯಣ ಹರಿನಾರಾಯಣ |
ಹರಿನಾರಾಯಣ ಎನು ಮನವೆ |ಪ|



ನಾರಾಯಣನೆಂಬ ನಾಮದ ಬೀಜವ |
ನಾರದ ಬಿತ್ತಿದ ಧರೆಯೊಳಗೆ ‖ ಅ.ಪ ‖

ತರಳ ಧ್ರುವನಿಂದಲಿ ಅಂಕುರಿಸಿತು ಅದು |
ವರ ಪ್ರಹ್ಲಾದನಿಂದ ಮೊಳಕೆಯಾಯ್ತು ‖
ಧರಣೇಶ ರುಕ್ಮಾಂಗದನಿಂದ ಚಿಗುರಿತು |
ಕುರು ಪಿತಾಮಹನಿಂದ ಹೂವಾಯ್ತು ‖ ೧ ‖

ವಿಜಯನ ಸತಿಯಿಂದ ಫಲವಾಯ್ತು ಅದು |
ಗಜೇಂದ್ರನಿಂದ ದೋರೆ ಹಣ್ಣಾಯ್ತು ‖
ದ್ವಿಜ ಶುಕಮುನಿಯಿಂದೆ ಫಲಪಕ್ವವಾಯಿತು |
ಅಜಾಮಿಳ ತಾನುಂಡು ರಸ ಸವಿದ ‖ ೨ ‖

ಕಾಮಿತ ಫಲವೀವ ನಾಮವೊಂದಿರಲಾಗಿ |
ಹೋಮ ನೇಮ ಜಪ ತಪವೇಕೆ ‖
ಸ್ವಾಮಿ ಶ್ರೀ ಪುರಂದರವಿಠಲ ರಾಯನ |
ನೇಮದಿಂದಲೆ ನೀ ನೆನೆ ಮನವೆ ‖ ೩ ‖

ನಾಮಸ್ಮರಣೆಯ ಮೂಲಕ ಭಕ್ತಿ ತತ್ವ ವಿಕಾಸವಾದ ಬಗೆಯನ್ನು 'ಒಂದು ವೃಕ್ಷ'ದ ಬೆಳವಣಿಗೆಯ ರೂಪಕವನ್ನಾಗಿ ಕಲ್ಪಿಸುವ ಈ ದೇವರ ನಾಮವು ಭಾಗವತದ ವಿವಿಧ ಪಾತ್ರಗಳನ್ನು ನಮ್ಮ ಕಣ್ಣ ಮುಂದೆ ತಂದು ನಿಲ್ಲಿಸುತ್ತದೆ. ಕತೆಯನ್ನು ಹೇಳದೆ ಮೂಲವನ್ನು ನೆನಪಿಸುವ ಇಂತಹ ಪ್ರಯತ್ನವನ್ನೇ ನಾವು ಇಲ್ಲಿ 'ಸಂಕಥನ' ಎಂದು ಗುರುತಿಸುತ್ತಿದ್ದೇವೆ.

ಇದುವರೆಗೆ ಎಲ್ಲೂ ಚರ್ಚಿತವಾಗದ ಹರಿದಾಸರ ಸಂಕಥನ ತಂತ್ರದ ಪ್ರಕಾರಗಳನ್ನು ಗುರುತಿಸಿ, ಅವುಗಳ ಸ್ವರೂಪವನ್ನು ವಿವರಿಸುವುದೇ ಈ ಉಪ ಅಧ್ಯಾಯದ ಉದ್ದೇಶ.

### ೫.೨.೧ ಸಂಕಥನದ 'ವಸ್ತು ಆಧಾರಿತ' ಮಾದರಿಗಳು

ನಾಮಸ್ಮರಣೆ, ರೂಪವರ್ಣನೆ, ಕ್ರಿಯಾಚಿಂತನೆ ಮತ್ತು ಗುಣಚಿಂತನೆಗಳು ವಸ್ತು ಆಧಾರಿತ ಸಂಕಥನದ ನಾಲ್ಕು ಪ್ರಧಾನ ಆಯಾಮಗಳಾಗಿವೆ.

#### ೧. 'ನಾಮಸ್ಮರಣೆ'ಯ ಮೂಲಕ ಸಂಕಥನ

ಹರಿದಾಸರು ವಿಷ್ಣುವಿನ ವಿವಿಧ ನಾಮಗಳನ್ನು ಸ್ಮರಿಸುತ್ತ ಹೋಗುವ ರೀತಿಯ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಹೊರನೋಟಕ್ಕೆ ಭಗವಂತನ ಹೆಸರುಗಳ ಪಟ್ಟಿಯಂತೆ, ವಿಶೇಷಣಗಳ ಗುಡ್ಡೆಯಂತೆ ಕಾಣುವ ಈ ಕೀರ್ತನೆಗಳ ವಸ್ತು ಮತ್ತು ಉದ್ದೇಶವೇನೆಂಬುದೇ ತಟ್ಟನೆ ತಿಳಿಯಲಿಕ್ಕಿಲ್ಲ. ಭಜನೆಯ ಹಾಡುಗಳಂತೆ ಇರುವ ಇಂತಹ ರಚನೆಗಳ ಸಾಹಿತ್ಯಕ ಮೌಲ್ಯವನ್ನು ವಿಚಾರಿಸಿ ತಿಳಿಯಬೇಕಾಗಿದೆ.

ನಂದಗೋಪಕುಮಾರ ನವನೀತಚೋರ|
ಮಂದಕಿನೀಜನಕ ಮೋಹನಾಕಾರ||
ಇಂದುಧರಸತಿವಿನುತ ವಿಶ್ವಸಂಚಾರ|
ನಂದ ಗೋವಿಂದ ಮುಚುಕುಂದನುತಸಾರ||
* * *
ನರಮೃಗಾಕಾರಿ ಹಿರಣ್ಯಕವೈರಿ|
ಕರಿರಾಜರಕ್ಷಕ ಕಾರುಣ್ಯ ಮೂರ್ತಿ||
(ಲಾಲಿ ಪಾವನಚರಣ ಲಾಲಿ ಅಘಹರಣ)

ಕನಕದಾಸರ ಈ ರಚನೆಯಲ್ಲಿ ಬರುವ ಒಂದೊಂದು ಪದವೂ ಭಾಗವತ ಪುರಾಣದಲ್ಲಿ ಬಂದ ವಿಷ್ಣುವಿನ ಮಹಿಮೆಗಳನ್ನು ನೆನಪಿಸುತ್ತದೆ.

'ನಂದಗೋಪಕುಮಾರ' ಎಂಬ ಪದ ಕಿವಿಗೆ ಬಿದ್ದೊಡನೆ ಪುರಾಣಗಳನ್ನು ಈ ಮೊದಲೇ ಚೆನ್ನಾಗಿ ಮನನ ಮಾಡಿದ ಭಾಗವತಪ್ರಿಯರಿಗೆ ಶ್ರೀಕೃಷ್ಣನು ನಂದಗೋಪನಿಗೆ ತೋರಿದ ಅನೇಕ ಲೀಲೆಗಳು, ಅವನನ್ನು ವರುಣ ಲೋಕದಿಂದ ಕರೆ ತಂದದ್ದು; ಅಜಗರದಿಂದ ಬಿಡಿಸಿ ಆನಂದ ನೀಡಿದ್ದು ಮುಂತಾದ ವಿವಿಧ ಘಟನೆಗಳು ನೆನಪಾಗುತ್ತವೆ. ಇದರಂತೆಯೇ 'ನವನೀತ ಚೋರ' ಎಂಬ ಪದವು ಕೃಷ್ಣನು ಗೋಕುಲದಲ್ಲಿ ತೋರಿದ ಲೀಲೆಗಳನ್ನೂ, 'ಮಂದಾಕಿನೀಜನಕ' ಎಂಬ ಸಂಬೋಧನೆಯು ತ್ರಿವಿಕ್ರಮನ ಪಾದದಿಂದ ಗಂಗೆ ಆವಿರ್ಭವಿಸಿದ ದೃಶ್ಯವನ್ನೂ, ಪುನರ್ಮನನ ಮಾಡಿಸುತ್ತವೆ. 'ಮೋಹನಾಕಾರ', 'ಕಾರುಣ್ಯಮೂರ್ತಿ', 'ವಿಶ್ವಸಂಚಾರ' ಇತ್ಯಾದಿ ವಿಶೇಷಣಗಳು ಕಥಾಂಶಗಳಿಗಿಂತ ಭಿನ್ನವಾದ, -ಉಪಾಸಕರು ಮತ್ತೆ ಮತ್ತೆ ಸ್ಮರಿಸುವ ಭಗವನ್ಮಹಿಮೆಗಳನ್ನು ಸ್ಮರಣೆಗೆ ತಂದುಕೊಡುತ್ತವೆ. ಇದೇ ರೀತಿ ಪುರಂದರ ದಾಸರು ಸಹ ಈ ಕೆಳಗಿನ ಕೀರ್ತನೆಯಲ್ಲಿ ತಮ್ಮ ಮನೋಮಂದಿರಕ್ಕೆ ಬಂದ ಪರಮಾತ್ಮನನ್ನು ವರ್ಣಿಸಿದ್ದಾರೆ.

ದೇವ ಬಂದ ನಮ್ಮ ಸ್ವಾಮಿ ಬಂದನೊ|
ದೇವರ ದೇವ ಶಿಖಾಮಣಿ ಬಂದನೊ ||ಪ||

ಉರಗಶಯನ ಬಂದ ಗರುಡಗಮನ ಬಂದ|
ನರಗೊಲಿದವ ಬಂದ ನಾರಾಯಣ ಬಂದ ||೧||

ಮಂದರೋದ್ಧಾರ ಬಂದ ಮಾಮನೋಹರ ಬಂದ |
ವೃಂದಾವನಪತಿ ಗೋವಿಂದ ಬಂದ ||೨||

ನಕ್ರಧಕನು ಬಂದ ಚಕ್ರಧರನು ಬಂದ|
ಅಕ್ರೂರಗೊಲಿದ ತ್ರಿವಿಕ್ರಮ ಬಂದ ||೩||



ನಿಗಮ ಗೋಚರ ಬಂದ ನಿತ್ಯ ತೃಪ್ತನು ಬಂದ|
ನಗೆ ಮುಖ ಪುರಂದರ ವಿಠಲ ಬಂದನೋ ||೪||

ಇಲ್ಲಿಯ ಪ್ರತಿ ಅರ್ಧಪಾದವು ಭಗವಂತನ ಒಂದೊಂದು ವಿಶಿಷ್ಟ ನಾಮವನ್ನು ಹೇಳುವಾಗಲೇ ಅವನ ಒಂದು ಕ್ರಿಯೆ, ಗುಣ, ಸಂಬಂಧ ಅಥವಾ ವೈಭವದ ಸಂಕೀರ್ತನೆ ಮಾಡುತ್ತದೆ. ಭಾಗವತ ಹಾಗೂ ಅದನ್ನನುಸರಿಸಿದ ಹರಿದಾಸ ಪಂಥದಲ್ಲಿ ಭಗವಂತನ ನಾಮಸ್ಮರಣೆಗೆ ಅತಿ ಮಹತ್ವವಿದೆ.

ಹೀಗೆ ಕೇವಲ ಹೆಸರುಗಳನ್ನು ಹೇಳುವ ರೂಪದಲ್ಲಿ ಪ್ರಾಚೀನ ಕತೆಗಳನ್ನು ನೆನಪಿಗೆ ತರುವ ತಂತ್ರವು ರನ್ನನ ಸಿಂಹಾವಲೋಕನ ಕ್ರಮದ ಅಳವಡಿಕೆಯ ರೀತಿಯಲ್ಲಿ ಕಂಡುಬರುತ್ತದೆ. ಆದರೆ ಭಾಗವತದಲ್ಲೇ ಈ ಪದ್ಧತಿ ಬಳಕೆಯಲ್ಲಿದ್ದುದನ್ನು ಮರೆಯುವಂತಿಲ್ಲ.

ಶ್ರೀಪಾದರಾಜರ 'ಪೋಪು ಹೋಗೋಣ ಬಾರೊ ರಂಗಾ' ಎಂಬುದು ಶಿಶುಗೀತೆಯ ರೀತಿಯ ಸಂಕಥನಕ್ಕೆ ಮತ್ತೊಂದು ಉತ್ತಮ ಉದಾಹರಣೆಯಾಗಿದೆ.

ಕುಂಡನೀಯ ನಗರವಂತೆ| ಭೀಷ್ಮಕ ರಾಜನ ಕುವರಿಯಂತೆ|
ಶಿಶುಪಾಲನ ಒಲ್ಲಳಂತೆ| ನಿನಗೆ ಓಲೆ ಬರೆದಳಂತೆ||

ರುಕ್ಮಿಣೀಕಲ್ಯಾಣದ ಸಾರವನ್ನೆಲ್ಲ ಎರಡು ಸಾಲುಗಳಲ್ಲಿ ಭಟ್ಟಿ ಇಳಿಸಿರುವ ಈ ಕ್ರಮವನ್ನು ಋಣ ಮತ್ತು ವೃದ್ಧಿಯ ಒಂದು ಪರಿಣಾಮಕಾರಿ ಮಾದರಿ ಎನ್ನಬಹುದು. ಮಕ್ಕಳನ್ನು ತೂಗುವಾಗ ಆಡಿಸುವಾಗ ಹೇಳುವ ಈ ಹಾಡು ಮಗುವಿಗೆ ಆ ವಯಸ್ಸಿನಿಂದಲೇ ಭಾಗವತ ಕತೆಗಳನ್ನು ಪರಿಚಯಿಸಿಕೊಳ್ಳುವ ಅವಕಾಶವನ್ನು ಕಲ್ಪಿಸುವುದು ಇಲ್ಲಿಯ ಸಾಂಸ್ಕೃತಿಕ ಪ್ರಯೋಜನ. ಆದ್ದರಿಂದ ಇಂತಹ ರಚನೆಗಳು ಮಕ್ಕಳೂ ಬೇಗನೆ ತಿಳಿಯುವಷ್ಟು ಸರಳವಾಗಿರುತ್ತವೆ. ಅಧ್ಯಾಯಗಟ್ಟಲೆ ಕಥೆಯನ್ನು ಒಂದೆರಡು ಪದ ಅಥವಾ ಪಾದಗಳಲ್ಲಿ ಸಂಗ್ರಹಿಸಿ, ಕೇಳಿದೊಡನೆ ಮೂಲವನ್ನೆಲ್ಲ ಸ್ಮೃತಿಗೆ ತಂದುಕೊಡುವಂತೆ ಸಂಕಥಿಸುವುದು ಒಂದು ರೀತಿಯ ವೃದ್ಧಿಯೇ ಸರಿ.

ಚಂದ್ರಶೇಖರ ಗಿರಿಜೆಗೊರೆದ ಸಿರಿಹರಿನಾಮ||
ಬಂದಾ ವಿಭೀಷಣನ ಪಾಲಿಸಿದ ನಾಮ|
ಕಂದ ಮುಚುಕುಂದನಿಗೆ ಕಾಮಿತವನಿತ್ತ ನಾಮ|
ಸಂದ ಪಾಂಡವಪಕ್ಷ ಪಾವನವು ನಾಮ
ವಾರಿಜಾನನೆ ತುಳಸಿಗೊಲಿದ ಹರಿನಾಮ|
(ಭಯನಿವಾರಣವು ಶ್ರೀಹರಿಯನಾಮ)

ಪುರಂದರ ದಾಸರ ಈ ಸಂಯೋಜನೆಯಲ್ಲಿ ನಾಮಸ್ಮರಣೆಯ ಮೂಲಕವೇ ವಿಷ್ಣುವಿನ ರಾಮ-ಕೃಷ್ಣಾವತಾರಗಳ ಕೆಲವು ಪ್ರಸಂಗಗಳನ್ನು ಪರಿಚಯಿಸಿದೆ. ಈ ಸಾಲುಗಳನ್ನು ಕೇಳುವಾಗ ಶಿವ, ಪಾರ್ವತಿ, ವಿಭೀಷಣರ ಚರಿತ್ರೆಗಳು, ಭಕ್ತನಾದ ಮುಚುಕುಂದನು ಗಾಢನಿದ್ರೆಯ ವರ ಪಡೆದು ಮಲಗಿದಾಗ ಅವನನ್ನು ಎಬ್ಬಿಸಿ ಕಾಲಯವನ ಸಂಹಾರ ಮಾಡಿಸಿ ಶ್ರೀಕೃಷ್ಣನು ಅವನಿಗೆ ಅನುಗ್ರಹಿಸಿದ ಕತೆ

ನೆನಪಾಗುತ್ತವೆ. ಪಾಂಡವರಿಗೆ ಹಾಗೂ ತುಳಸೀದೇವಿಗೆ ಯಾವ ರೀತಿಯಲ್ಲಿ ಒಲಿದನೆಂದು ಬೇಗ ತಿಳಿಯದಿದ್ದರೆ ಇತರರನ್ನು ಕೇಳಿಯಾದರೂ ತಿಳಿಯಬಹುದು. ಈ ರೀತಿ ನಮ್ಮನ್ನು ಜಿಜ್ಞಾಸೆಗೆ ಹಚ್ಚುವುದು ಸಂಕಥನದಿಂದಾಗುವ ಪ್ರಯೋಜನವೇ ಆಗಿದೆ.

ಈ ಕೆಳಗಿನ ಕೀರ್ತನೆಯು ನಾಮಸ್ಮರಣೆಯ ಮೂಲಕ ನಡೆಯುವ ಸಂಕಥನದ ಸಂಸ್ಕೃತ ಮಾದರಿಯಂತಿರುವುದನ್ನು ಗಮನಿಸಬೇಕು.

ದೇವಕಿನಂದ ಮುಕುಂದ
ನಿಗಮೋದ್ಧಾರ - ನವನೀತ ಚೋರ |
ಖಗಪತಿವಾಹನ ಜಗದೋದ್ಧಾರ

ಶಂಖ-ಚಕ್ರಧರ - ಶ್ರೀ ಗೋವಿಂದ |
ಪಂಕಜಲೋಚನ ಪರಮಾನಂದ
ಮಕರಕುಂಡಲಧರ - ಮೋಹನವೇಷ |
ರುಕುಮಿಣಿವಲ್ಲಭ ಪಾಂಡವಪೋಷ

ಕಂಸಮರ್ದನ - ಕೌಸ್ತುಭಾಭರಣ |
ಹಂಸವಾಹನ ಪೂಜಿತ ಚರಣ
ವರವೇಲಾಪುರ ಚೆನ್ನಪ್ರಸನ್ನ |
ಪುರಂದರವಿಠಲ ಸಕಲಗುಣಪೂರ್ಣ

ಇಲ್ಲಿಯ ಸಂಬೋಧನೆಗಳು ದೈವದ ನಾಮವಾಗಿರುವಾಗಲೇ 'ರೂಪವರ್ಣನೆ'ಯ ಮೂಲಕವೂ ಸಂಕಥನಕ್ಕೆ ತೊಡಗುವ ವಿಭಿನ್ನ ನೆಲೆಯತ್ತ ಸಾಗುವುದನ್ನು ಗಮನಿಸಬೇಕು.

**೨. 'ರೂಪವರ್ಣನೆ'ಯ ಮೂಲಕ ಸಂಕಥನ**

ಭಗವಂತನ ಸುಂದರ ಅಪ್ರಾಕೃತ ರೂಪವನ್ನು ವರ್ಣಿಸುತ್ತಾ ಹೋಗುವಾಗಲೇ ಭಾಗವತದ ಕಥಾಂಶವನ್ನು ನೆನಪಿಸುವಂತಹ ಸಂಕಥನ ಪ್ರಕಾರವಿದು.

ಹರಿ ಕುಣಿದ-ನಮ್ಮ-ಹರಿ ಕುಣಿದ || ಪ ||
ಅಕಲಂಕಚರಿತ - ಮಕರ ಕುಂಡಲಧರ |
ಸಕಲರ ಪಾಲಿಪ ಹರಿಕುಣಿದ || ಅ.ಪ ||

ಉಟ್ಟ ಪಟ್ಟೆಯದಟ್ಟಿ ತೊಟ್ಟ ಕಾಂಚಿಯ ದಾಮ
ದಿಟ್ಟ ಮಲ್ಲರ ಗಂಡ ಹರಿಕುಣಿದ |
ಅಂದುಗೆ ಅರಳೆಲೆ ಬಿಂದಲಿ ಬಾಪುರಿ
ಚಂದದಿ ನಲಿಯುತ ಹರಿಕುಣಿದ || ೧ ||

ಅರಳೆಲೆಮಾಗಾಯಿ ಕೊರಳ ಮುತ್ತಿನ ಸರ |
ತರಳರ ಕೂಡಿ ತಾ ಹರಿ ಕುಣಿದ ||



ಪರಮ ಭಾಗವತ ಪುರದೊಳಗಾಡುವ |
ಪುರಂದರವಿಠಲ ಹರಿ ಕುಣಿದ ||೨||

ಈ ಕೀರ್ತನೆಯಲ್ಲಿ ವಿಷ್ಣುವಿನ ಅಲಂಕಾರದ ವರ್ಣನೆಯು ಅವನ ಮಹಾತ್ಮೆಯನ್ನು ಸಂಕಥಿಸುತ್ತದೆ. ಪರಮ ಭಾಗವತರ ಅಂತರ್ಯಾಮಿಯಾದ ಅವನು ತರಳರೊಂದಿಗೂ ಆಡಬಲ್ಲಷ್ಟು ಸರಳ.

ದೃಷ್ಟಿ ತಾಕೀತೋ ಬೀದಿ ಮೆಟ್ಟಬ್ಯಾಡವೋ
ಸೃಷ್ಟಿಯ ನಾರಿಯರೆಲ್ಲ ಕಣ್ಣಿಟ್ಟು ಹೀರುವರೋ ನಿನ್ನ ||ಪ||

ಪುಟ್ಟ ಪದಕಮಲದಿ ಮೆಟ್ಟಿ ರತುನ ಪಾದುಕಾ
ಇಟ್ಟ ಕಿರುಗೆಜ್ಜೆ ಪೆಂಡ್ಯೆ ದಿಟ್ಟತನದಿ
ಘಟ್ಟಿ ಸಾಸಿರ ಬಾಳುವ ಪಟ್ಟೆಯನೆ ಬಿಗಿ
ದುಟ್ಟು ಮೇಗಿಲ್ಲದ ಬೆಲೆಯಾದ ಪಟ್ಟದುಡುದಾರವಿಟ್ಟು ||೧||

ಸಿರಿಯಿರುವ ಉರದಲ್ಲಿ ಪರಿಮಳ ಗಂಧವ ಪೂಸಿ
ಪರಿಪರಿ ಪದಕ ಮುತ್ತು ಸರ ವೈಜಯಂತಿ
ಕೊರಳ ಕೌಸ್ತುಭದ ಕಾಂತಿ ನಿರುಪಮ ಶ್ರೀವತ್ಸಲಾಂಛನ
ಸರಿಗೆ ತಾಳಿ ಪದಕವು ಸೇರಿದ ಮುತ್ತಿನ ಜಲ್ಲೆ ||೨||

ಉಗುರ ಗೋರಂಟಿ ಛಾಯಾ ಚಿಗುರು ಪೋಲುವ ಬೆರಳು
ಬಗೆಬಗೆ ರತುನಂಗಳ ನಗಗಳನಿಟ್ಟು
ನಗವನೆತ್ತಿದ ಭುಜಕೆ ಬಿಗಿದ ಬಾಹುಪುರಿ ಕೆಂಪು
ನಿಗಿನಿಗಿಗುಟ್ಟುವ ಕಾಂತಿ ನಗುತಿದೆ ಬಾಲಭಾನುವ ||೩||

ಎಳಮಾವಿನ ಸೊಬಗಿನ ತಳಿರುಪೋಲುವ ಕೆಂದುಟಿ
ಸುಳಿಪಲ್ಲು ಮಂದಹಾಸವು ನಳಿನದಳಾಕ್ಷ
ಥಳಿಥಳಿಪ ಕುಂಡಲವು ಪೊಳೆವ ನಾಸಿಕ ಲಲಾಟ
ಚೆಲುವ ಪುಬ್ಬು ಕಸ್ತೂರಿಯ ತಿಲಕ ಒಪ್ಪುವ ಮುಖದಿ ||೪||

ಕೋಟಿ ಹೊನ್ನು ಬಾಳುವ ಕಿರೀಟವಿಟ್ಟು ಕಡೆಗಣ್ಣ
ನೋಟದಿಂದ ತರುಣೇರ ಪೋಟಿ ಮಾಡುತ
ಚಾಟು ಮಾತುಗಳಾಡುತ ಪೊಟ್ಟನಂತೆ ತಿರುಗಿದರೆ
ನೀಟಲ್ಲವೋ ನಿನಗದು ಪಾಟಲಾಧರನೆ ಕೇಳು ||೫||

ಬಿಂಕದಿಂದ ಎರಡು ಕರದಿ ಶಂಖ ಚಕ್ರವ ಪಿಡಿದು
ಅಂಕಿತ ವೇಣುನೂದುತ ಶಂಕೆ ಇಲ್ಲದೆ
ಮಂಕು ಮಾಡುತ ಬಾಲೇರ ಪಂಕಜಾಕ್ಷ ಸುಳಿದರೆ
ಮಂಕುಗಾರನೆಂದು ನಿನ್ನ ಅಂಕಿತ ಮಾಡುವರಲ್ಲೋ ||೬||

ಮಂಗಳಮೂರುತಿ ಮುಂಚೆ ಶೃಂಗಾರಗಳನೆ ಮಾಡಿ
ಪೊಂಗೊಳಲನೂದುತ ಶ್ರೀರಂಗ ಸುಳಿದರೆ
ಹೆಂಗಳ ರಂಭೇರೊಂದಾಗಿ ಕಂಗಳಿಡಲು ಉನ್ನಂತ
ರಂಗವಿಠಲಗಲದಿರೋ ಹಿಂಗದೆ ನರಸಿಂಗನೇ ॥ ೭ ॥

ಈ ಕೀರ್ತನೆಯಲ್ಲಿ ಶ್ರೀಪಾದರಾಜರು ತಮ್ಮ ಸಂಸ್ಥಾನದ ಪರಂಪರಾಗದ ಆರಾಧ್ಯದೈವನಾದ ಗೋಪೀನಾಥನ ಸೌಂದರ್ಯವನ್ನು ವರ್ಣಿಸುತ್ತಾ ಇರುವಾಗಲೇ ಕೇಳುಗರಿಗೆ ಭಾಗವತದ ನೆನಪು ಮೂಡುವಂತೆ ಮಾಡಿದ್ದಾರೆ. ಇಂತಹ ಎಲ್ಲ ಕೀರ್ತನೆಗಳನ್ನು ಬಾಹ್ಯ ದೃಷ್ಟಿಯಿಂದ 'ಮಧುರಭಕ್ತಿ'ಯ ಅಭಿವ್ಯಕ್ತಿಯೆಂದೂ ಆಂತರಿಕ ಸತ್ವದ ದೃಷ್ಟಿಯಿಂದ 'ಬಿಂಬೋಪಾಸನೆ'ಯ ಪ್ರಕಾರವೆಂದೂ ತಿಳಿಯಬಹುದಾಗಿದೆ.

ಭಾವುಕತೆಯನ್ನು ದೂರವಿರಿಸಿ ವಸ್ತುನಿಷ್ಠವಾಗಿ ಮಾತನಾಡುವಾಗಲೂ ವಿಷ್ಣುವಿನ, ವಿವಿಧ ರೂಪಗಳ, ರಾಮ-ಕೃಷ್ಣಾದಿ ಅವತಾರಗಳ ಸೌಂದರ್ಯ ಆಕರ್ಷಕವಾದುದು ಎಂಬ ಸತ್ಯವನ್ನು ಒಪ್ಪಲೇ ಬೇಕಾಗುತ್ತದೆ. ಸಾಕಾರ ಚಿಂತನೆಯು ಭಕ್ತಿ ತತ್ವವಾಗದೆ ಹೋಗಿದ್ದರೆ, ದಾಸರು ಇಂತಹ ರೂಪವರ್ಣನೆಯ ಮೂಲಕ ಭಾಗವತವನ್ನು ನಿರೂಪಿಸದಿದ್ದರೆ ಕನ್ನಡ ಕಾವ್ಯ ಲೋಕಕ್ಕೆ ಬಹುದೊಡ್ಡ ನಷ್ಟವೇ ಆಗುತ್ತಿತ್ತು. ಶ್ರೀಪಾದರಾಜರ ಇನ್ನೊಂದು ಕೃತಿ ಹೀಗಿದೆ :

ರಂಗಾ ಮನೆಗೆ ಬಾರೋ ಕೃಪಾಂಗ ಶ್ರೀರಂಗ
ಉಂಗುರಗಳನು ನಿನ್ನ ಅಂಗುಳಿಗಿಟ್ಟು | ಕಂಗಳಿಂದಲಿ ನೋಡುವೆ ॥
ಹೆಂಗಳ ಉತ್ತುಂಗದ ಕುಚಂಗಳ | ಆಲಿಂಗಿಸಿದ ಭುಜಂಗಳ|
ಕಮಲಸಮಪಾದಂಗಳ ॥
ಹಿಂಗದೆ ಸ್ಮರಿಸಿದ ಮಾತಂಗನ | ಭಂಗವ ಪರಿಹರಿಸಿ ಬ್ಯಾಗದಿ |
ಮಂಗಳ ಸ್ವರ್ಗವನಿತ್ತ ಉ | ತ್ತುಂಗವಿಕ್ರಮ ರಂಗವಿಠಲನೆ ॥

ಪರಮಾತ್ಮನ ಒಂದೊಂದು ಅಂಗಗಳಿಂದ ನಡೆದ ಕಾರ್ಯವನ್ನು ಹೇಳುವಾಗ ಸಂಕಥನವು ರೂಪಚಿಂತನೆಯ ಹಂತದಿಂದ ಕಾರ್ಯಚಿಂತನೆಯ ಹಂತಕ್ಕೆ ವೃದ್ಧಿಯಾಗುತ್ತದೆ.

**೩. 'ಕ್ರಿಯಾಚಿಂತನೆ'ಯ ಮೂಲಕ ಸಂಕಥನ**

ಶ್ರೀಹರಿಯ ವಿವಿಧ ಅವತಾರಗಳ ಕಥಾಂಶಗಳನ್ನು ಒಟ್ಟಾಗಿ ಮನಸ್ಸಿನಲ್ಲಿಟ್ಟುಕೊಂಡು ಅಲ್ಲಿಯ ವಿವಿಧ ಕ್ರಿಯೆಗಳನ್ನು ಒಂದು ಪದ-ಪಾದದ ಮೂಲಕ ಪ್ರಸ್ತಾಪಿಸಿದೊಡನೆ ಸಮಗ್ರ ಕತೆ ಧ್ವನಿಸುವಂತೆ ಮಾಡುವುದನ್ನು 'ಕ್ರಿಯಾಚಿಂತನೆಯ ಮೂಲಕ ಸಂಕಥನ' ಎಂದು ಕರೆಯಬಹುದು.

ಹೀಗೆ ಭಾಗವತ ಕಥೆಯ ಸಂವಿಧಾನವನ್ನು ಸಮರ್ಪಕವಾಗಿ ಬದಲಿಸಿಕೊಂಡು 'ಶ್ರವಣ', 'ಕೀರ್ತನ', 'ಸ್ಮರಣೆ'ಗಳಿಗೆ ಅನುವಾಗುವಂತೆ ಹೊಸವಿನ್ಯಾಸದಲ್ಲಿ ಅಳವಡಿಸುವ ಈ ತಂತ್ರವನ್ನು ದಾಸರು ಅನೇಕ ಕೀರ್ತನೆಗಳಲ್ಲಿ ಬಳಸಿದ್ದಾರೆ.

ಲಲನೆ ಲಕ್ಷ್ಮಿ ಅಂಕದಲ್ಲಿ ನಲಿವ ಪಾದವ |
ಜಲಜಾಸನನ ಅಭೀಷ್ಟವೆಲ್ಲ ಸಲಿಸುವ ಪಾದವ ||
ಮಲ್ಲರ ಗೆಲಿದು ಕಂಸಾಸುರನ ಕೊಂದ ಪಾದವ ||
ಬಲಿಯ ಮೆಟ್ಟಿ ಭಾಗಿರಥಿಯ ಪಡೆದ ಪಾದವ || ೧ ||
(ಇಕ್ಕೋ ನೋಡೆ ರಂಗನಾಥನ ಚಿಕ್ಕಪಾದವ)

ಇಲ್ಲಿ ಶ್ರೀಪಾದರಾಜರು ದೇವರ ಪಾದದಿಂದ ನಡೆದ ವಿವಿಧ ಕ್ರಿಯೆಗಳನ್ನು ಚಿಂತಿಸುವ ಕ್ರಮದಲ್ಲಿ ಭಾಗವತ ಕಥಾಂಶಗಳನ್ನು ಸಂಯೋಚಿಸಿದ್ದಾರೆ. 'ಭಜಿಸಿ ಬದುಕೆಲೊ ಮಾನವ' ಎಂಬ ಕನಕದಾಸರ ರಚನೆಯೂ ಇದೇ ವಿಷಯವನ್ನೊಳಗೊಂಡಿದೆ. 'ಕೈ'ಯ ಮೂಲಕ ನಡೆದ ಭಗವದ್ವ್ಯಾಪಾರ ವರ್ಣನೆಯನ್ನು ವಿವರಿಸುವ ಪುರಂದರದಾಸರ ಕೃತಿ ಹೀಗಿದೆ :

ಕೈಯ ತೋರೋ ಕರುಣೆಗಳರಸಾ -ಕೈಯ ತೋರೋ |
ಕೈಯಲಿ ಬೆಣ್ಣೆಯ ಮುದ್ದೆಯ ನೀಡುವೆ -ಕೈಯ ತೋರೋ || ಪ ||
ಬಡ ಬ್ರಾಹ್ಮಣನವಲಕ್ಕಿಯ ಬೇಡಿದ ಕೈಯ ತೋರೊ |
ಕೊಡೆ ಮಾಡಿ ಗಿರಿಯೆತ್ತಿ ಗೋಗಳ ಕಾಯ್ದ -ಕೈಯ ತೋರೊ ||
ಕಡು ಹಿರಣ್ಯಾಖ್ಯನ ಒಡಲನು ಬಗೆದ -ಕೈಯ ತೋರೊ |
ದೃಢ ಪ್ರಹ್ಲಾದನ ಮಂಡೆಯೊಳಿಟ್ಟ ಕೈಯ ತೋರೊ ||

ಇಲ್ಲಿ ಅನುಕ್ರಮವಾಗಿ ಸುದಾಮ ಚರಿತ್ರೆ, ಗೋವರ್ಧನೋದ್ಧರಣ, ಹಿರಣ್ಯಕಶಿಪುವಿನ ನಿಗ್ರಹ ಹಾಗೂ ಪ್ರಹ್ಲಾದನಿಗ ಮಾಡಿದ ಅನುಗ್ರಹಗಳನ್ನು ಚಿಕ್ಕದಾಗಿ-ಚೊಕ್ಕವಾಗಿ ಸಂಕಥಿಸಿದ್ದಾರೆ. ಇಲ್ಲಿಯ ಕೊನೆಯ ಸಾಲಿನ ಸಂದರ್ಭ :

"ಸ್ವಪಾದಮೂಲೇ ಪತಿತಂ ತಮರ್ಭಕಂ ವಿಲೋಕ್ಯ ದೇವಃ ಕೃಪಯಾ ಪರಿಪ್ಲುತಃ |
ಉತ್ಥಾಪ್ಯ ತಚ್ಛೀರ್ಷ್ಣ್ಯದಧಾತ್ ಕರಾಂಬುಜಂ ಕಾಲಾಹಿ ನಿರ್ದಷ್ಟ ಧಿಯಾಂ ಕೃತಾಽಭಯಮ್ ||"
(ಭಾಗವತ : ೭-೯-೫)

(ನರಸಿಂಹನು ತನ್ನ ಪಾದಕ್ಕೆ ನಮಸ್ಕರಿಸಿದ ಮಹಾಭಾಗವತನಾದ ಆ ಬಾಲಕನನ್ನು ಕಂಡು ಕರುಣೆಯಿಂದ ಮನಕರಗಿ ಎರಡೂ ತೋಳುಗಳನ್ನು ಹಿಡಿದೆತ್ತಿ; ಮೃತ್ಯುವೆಂಬ ಮಹಾಸರ್ಪದಿಂದ ಭೀತರಾದವರಿಗೆ ಅಭಯವನ್ನು ನೀಡುವ ತನ್ನ ಕರಕಮಲವನ್ನು ಅವನ ಶಿರಸ್ಸಿನಲ್ಲಿರಿಸಿದನು.) ಎಂಬ ಮೂಲದ ನಿರೂಪಣೆಯನ್ನು ಕಥೆಯ ಚೌಕಟ್ಟಿನಿಂದ ಹೊರತಂದು 'ದೃಢ ಪ್ರಹ್ಲಾದನ ಮಂಡೆಯೊಳಿಟ್ಟ ಕೈಯ ತೋರೋ' ಎಂಬ ಒಂದೇ ಪಾದದಲ್ಲಿ ಹೇಳಿದ್ದಾರೆ. ಮುಂದುವರಿದು,

ಅಲ್ಲಿ ಪೂತನಿಯ ಅಸುವನೆ ಹೀರಿದ ಕೈಯ ತೋರೊ |
ಬಲ್ಲಿದ ಮಲ್ಲರ ಮರ್ದಿಸಿ ಬಂದ ಕೈಯ ತೋರೊ ||
ಮೆಲ್ಲನೆ ಕುಬುಜೆಯ ಡೊಂಕನೆ ತಿದ್ದಿದ ಕೈಯ ತೋರೊ |
ಬಿಲ್ಲನು ಎಡಗೈಯಲಿ ಮುರಿದಿಟ್ಟ ಕೈಯ ತೋರೊ ||

ಎಂದು ಕೋರಿದ್ದಾರೆ. ಈ ಭಾಗದಲ್ಲಿ ಬಿಲ್ಲನು... ಎಂಬ ಸಾಲಿನಲ್ಲಿ 'ಮಥುರೆಯಲ್ಲಿ ಕಂಸನು ಬಿಲ್ಲಹಬ್ಬಕ್ಕಾಗಿ ಇಟ್ಟಿದ್ದ ಧನುಸ್ಸನ್ನು ಕೃಷ್ಣನು ಲೀಲಾಜಾಲವಾಗಿ'ಕರೇಣ ವಾಮೇನ ಸಲೀಲ ಮುದ್ಧೃತಂ' (ಭಾಗವತ:೧೦-೪೨) ಮುರಿದದ್ದನ್ನು ಹೇಳಿದ್ದಾರೆ. ಹೀಗೆ 'ಬಿಡಿ' ಘಟಕವೊಂದು 'ಇಡಿ'ಯನ್ನು ನೆನಪಿಸಿಕೊಳ್ಳಲು 'ವಿಭಾವ'ವಾಗುವಂತೆ ದುಡಿಸಿಕೊಂಡಿದ್ದಾರೆ. ಇದರಿಂದ ಪುರಂದರದಾಸರು ಸಂಕಥನದಲ್ಲಿ ಸಾಧಿಸಿದ ವೃದ್ಧಿಯ ಮಹತ್ವವು ತಿಳಿದುಬರುತ್ತದೆ.

ಮಗುವನ್ನಾಡಿಸುವಾಗ ಹರಿದಾಸ ಸಂಪ್ರದಾಯದವರು ಸಾಮಾನ್ಯವಾಗಿ ಹಾಡುವ

'ತೋಳು ತೋಳು ತೋಳು ರಂಗ ತೋಳನ್ನಾಡೈ
ನೀಲವರ್ಣದ ಬಾಲಕೃಷ್ಣನೆ ತೋಳನ್ನಾಡೈ'

ಎಂಬ ಹಾಡು ಶ್ರೀ ಕೃಷ್ಣನ ವಿವಿಧ ಬಾಲಲೀಲೆಗಳನ್ನು ಚಿತ್ರಿಸುತ್ತದೆ. ಅಲ್ಲೆಲ್ಲ ಅವನ ಕೈಗಳಿಂದ ನಡೆದ ಲೋಕೋತ್ತರ ಕಾರ್ಯವನ್ನು ಚಿಂತಿಸಲಾಗಿದೆ.

ಕರ-ಚರಣಗಳ ಲೀಲೆಗಳನ್ನು ಒಟ್ಟಾಗಿ ಹೆಣೆದಿರುವ ವಾದಿರಾಜರ ಒಂದು ಸುಳಾದಿಯ ಭಾಗವು ಹೀಗಿದೆ.

ಒಂದು ಕರವೆ ಮಧುವ ಮರ್ದಿಸಿ ಕೊಂದು ಕೈಟಭನ
ಚೆಂದದ ಪೆರ್ದೊಡೆಯಲಿಟ್ಟು ಪುಡಿಮಾಡಿಕೊಂದಿತು.
ಒಂದು ಕರವೆ ಕಲ್ಪತರುವ ಕಿತ್ತು ಪುರಕೆ ತಂದಿತು
ಒಂದು ಕರವೆ ಸುರಾಸುರರ ವೃಂದಕೆ ನಿರ್ಬಂಧವ ಕೊಟ್ಟಿತು
ಮಂದರವೆತ್ತಿ ಪಕ್ಷೀಂದ್ರನ ಸ್ಕಂಧದ ಮ್ಯಾಲಿರಿಸಿತು ಮ
ತ್ತೊಂದುಕರವೆ ತಾಳೆಮರದಲ್ಲಿ ಖಳರ ಕೊಂದಿತು
ಒಂದು ಪಾದ ಹೆಬ್ಬಾವಮೆಟ್ಟಿ ಗಂಧರ್ವಪುರಕೈಸಿತು
ಒಂದು ಪಾದದುಗುರು ಲಕುಮಿಯ ಭ್ರಮೆಗೊಳಿಸಿತು ಮ
ತ್ತೊಂದು ಪಾದದುಗುರು ಬ್ರಹ್ಮಾಂಡ ಒಡೆದು ತಂದಿತು
ಅಂದು ಸೀತೆಯ ಸ್ತನದ ಮೇಲೆ ಬಂದು ನಿಂತ ಖಳನ ರಾಮ
ಚಂದ್ರನ ಕೈಯಿಂದ ತೃಣದಿಂದ ಕೊಲಿಸಿತು
ಒಂದೊಂದು ರೋಮಕೂಪ ಲೋಕಗಳ ನಡಗಿಸಿಕೊಂಡುವು
ಒಂದು ಕೂದಲು ಭೂಭಾರಕುಂದಿಸಿತು ಹಯವದನನ

ಇಲ್ಲಿಯ ಕ್ರಿಯೆಗಳ ಸ್ಮರಣೆಯು ಭಗವನ್ಮಹಿಮಾಜ್ಞಾನಪೂರ್ವಕ ಶರಣಾಗತಿಗೆ ಅಗತ್ಯವಾದ ಮನಸ್ಥಿತಿಯನ್ನು ಕಲ್ಪಿಸುತ್ತದೆ.

ಈ ಮೇಲಿನ ವಿವೇಚನೆಯಲ್ಲಿ ನಾವು ನೋಡಿದ ಅಂಗಗಳಿಗಿಂತ ಹೊರತಾದ ಇತರ ಅಂಗಗಳಿಂದ ಶ್ರೀಹರಿಯು ಮಾಡಿದ ದುಷ್ಟ ಶಿಕ್ಷಣ-ಶಿಷ್ಟರಕ್ಷಣ ಕಾರ್ಯಗಳನ್ನು ವಾದಿರಾಜರು ಮತ್ತೊಂದು ಭಾಗದಲ್ಲಿ ಸಂಕಥಿಸಿದ್ದಾರೆ.

ಆವನ್ನ **'ಪೊಟ್ಟೆ'** ಲೋಕಮಯನೆಂಬ ಜೀವನ್ನ ಗುಟ್ಟುಕೆಡಿಸಿತು ನೋಡಾ|
ಜೀವನ್ನಟ್ಟಿ ಬಂದ ಭಸುಮಾಸುರನ ಜೀವವ ಕೊಂಡಿತಾವನ ಮುಟ್ಟು ನೋಡಾ| (ಸ್ಪರ್ಶ)
ಆವನ್ನ **ದಾಡೆ** ಧರೆ ಭಾರವನೆತ್ತಿ ತಾನುಂಗುಷ್ಟ ಈ ಕ್ಷಿತಿಯ ತಗ್ಗಿಸಿ
ಜೀವವ ಕಾಯಿತು ಅರ್ಜುನನ, ಗಂಗಾದೇವಿಯಿಂದ ಶಿವನ ಪಾವನ್ನ ಮಾಡಿತು
ಆವನ್ನ **ಕೋಡು** ಭರದಿಂದಿಳೆಗಿಳಿದ ಶಿವನ ರಥವನ್ನೆತ್ತಿ ಕೊಟ್ಟಿತು
ಆವನ್ನ **ಬಾಯಿ** ಕಾಡುಕಿಚ್ಚು ನುಂಗಿತು ಆವನ್ನ **ಕರುಣಾಮೃತ** ಕಪಿಕಟಕವೆಬ್ಬಿಸಿತು
ಆವನ್ನ**ದೆ** ಭಗದತ್ತನ ಆಯುಧವ ತಾಳಿ ತನ್ನವನ ಜೀವ ಕಾಯಿದುಕೊಂಡಿತು
ಆವನ್ನ **ಬೆರಳ್ಗಳು** ಮುನಿಗಿಷ್ಟಾನ್ನವ ಕೊಟ್ಟವು ಆವನಂಗೈ ಸುಧೆಯನಾವಾಗ ಕರೆಯುತಿದೆ
ಆವ ಸಿರಿಹಯವದನನ್ನ ಪುಟ್ಟವದನವೆ ಪೂತನಿಯಕೊಂದಿತು

ಶ್ರೀಮದ್ಭಾಗವತದ ವೃದ್ಧಿಗೆ ಇದಕ್ಕಿಂತ ಅದ್ಭುತವಾದ ನಿದರ್ಶನವನ್ನು ಮತ್ತೆಲ್ಲೂ ಕಾಣಲಾರೆವು. ಕ್ರಿಯಾಚಿಂತನೆಯಲ್ಲಿ ಪ್ರತ್ಯೇಕವಾಗಿ **'ದುಷ್ಟ ಶಿಕ್ಷಣ ಕಾರ್ಯ'**ಗಳನ್ನು ಒಂದೇ ಕಡೆ ಸಂಗ್ರಹಿಸಿ ಕೊಡುವ ವಾದಿರಾಜರ ಇನ್ನೊಂದು ಮಾದರಿ ಹೀಗಿದೆ.

ಹಂಸರ ನೋಯಿಸಿದ ಹಂಸಡಿಭಿಕರ
ಹಿಂಸೆಯ ಮಾಡಿದನಿವ ವೈರಿ ಕೋಲಾಹಲ
ಅಂಶಂಶುವಾಗಿ ಜರಾಸಂಧತಂದ ಸೈನ್ಯ ವಿ
ಧ್ವಂಸ ವಿನೋದಿಯಿವ ಸಮರ ನಿಃಶ್ಶಂಕ
ಹಂಸವಾಹನ ಗುರು ಹಯವದನನೆ ಖಳ
ವಂಶ ಕುಠಾರನೆಂಬ ಬಿರುದ ಮೆರೆದ

ಕನಕದಾಸರು ಕ್ರಿಯಾಚಿಂತನೆಯ ಮೂಲಕ ಭಾಗವತ-ಸಂಕಥನ ಕೈಗೊಂಡ ಕೀರ್ತನೆಯೊಂದು ಹೀಗಿದೆ.

ಬಾಲೇಂದು ಮುಖದ ಮರಿಯಾನೆ - ಕದ್ದು | ಪಾಲನ್ನು ಕುಡಿದ ಮರಿಯಾನೆ ||
ಕೈಲಿ ಗಿರಿಯನೆತ್ತಿದಾನೆ | ಕಾಳ್ಕಿಚ್ಚನ್ನು ನುಂಗಿದ ಪಟ್ಟದಾನೆ || ೧ ||

ಧೇನುಕಾಸುರನ ಕೊಂದಾನೆ | ತನಗೆ ಜೋಡಿಲ್ಲದಿಹ ನಿಜದಾನೆ ||
ಮಾನವರಿಗೆಲ್ಲ ಸಿಲ್ಕಿದಾನೆ | ಶೌನಕಾದಿಗಳೊಂದಿಗಿಪ್ಪಾನೆ || ೨ ||

ಮಲ್ಲರೊಡನೆ ಗೆಲಿದಾನೆ - ಕಡು| ಖುಲ್ಲ ಕಂಸನ ಕೆಡಹಿದ್ದಾನೆ
ವಿದ್ಯೆ ಸಾಂದೀಪರಲಿ ಕಲಿತ ಮರಿಯಾನೆ | ಸಲೆ ಭಕ್ತರ ಕಾವ ಪುಟ್ಟಾನೆ || ೩ ||

ಶ್ರೀಕೃಷ್ಣನನ್ನು ಆನೆಗೆ ಹೋಲಿಸಿ ವರ್ಣಿಸುವ ಈ ಪದ್ಯದಲ್ಲಿ ಕೃಷ್ಣನ ವಿವಿಧ ಕ್ರಿಯೆಗಳನ್ನು ಚಿಂತಿಸುವ ಜೊತೆಗೆ ಜೊತೆಗೆ ಪ್ರತಿಪಾದದ ಕೊನೆಯಲ್ಲೂ 'ಆನೆ' ಎಂಬ ನಾಮಪದವನ್ನು ಕ್ರಿಯಾರ್ಥದಲ್ಲಿ ಬಳಸುವ ವಿನೂತನ ಶಬ್ದಶಿಲ್ಪವನ್ನು ಕನಕದಾಸರು ಪ್ರಯೋಗಿಸಿದ್ದಾರೆ.

ವ್ಯಾಸರಾಯರು ದೇವಾಧಿದೇವನಾದ ಶ್ರೀಕೃಷ್ಣನ ಭಕ್ತವಾತ್ಸಲ್ಯವೆಂಬ ಗುಣವನ್ನು ಉಗ್ರಸೇನ ಪಟ್ಟಾಭಿಷೇಕ ಕಾರ್ಯಚಿಂತನೆಯ ಮೂಲಕ ಸಂಕಥಿಸುವ ಸುಳಾದಿಯ ಒಂದು ಭಾಗ ಹೀಗಿದೆ.

ಶ್ರೀವರ ಪರಾಕು ಚಿತ್ತಾವಧಾನವೆಂದು ನಿ
ನ್ನಾವಾಗವೋಲೈಸುವರಜಭವಾಧಿಕಾರಿಗಳು
ದೇವ ದೇವಸಾರ್ವಭೌಮ ನೀನುಗ್ರಸೇನಂಗೆ
ದೇವ ಜೀಯ ಸಮ್ಮುಖವೆಂಬುದು ಇದಾವಲೀಲೆಯೊ
ಭಕ್ತವತ್ಸಲ ಸಿರಿಕೃಷ್ಣ ॥

ಮುಂದುವರಿದ ಸಾಲುಗಳಲ್ಲಿ ಅವರು... ಇಂತಹದೇ ಇನ್ನೊಂದು ಪದ್ಯದಲ್ಲಿ ಬ್ರಹ್ಮಾಂಡದ ಹೊರ ಆವರಣದಲ್ಲಿರುವ ಬಹಿರಾಕಾಶದಲ್ಲಿ ವ್ಯಾಪ್ತನಾಗಿರುವ ಭಗವಂತನನ್ನು ತತ್ವಮುಖದಿಂದ ದೇವಾಧಿದೇವತೆಗಳು ಸ್ತುತಿಸುತ್ತಿರುವಾಗ ಅಷ್ಟೊಂದು ಬೃಹದ್ವಿಸ್ತಾರ ವ್ಯಾಪಿಯಾದ ಶ್ರೀಕೃಷ್ಣನು ಉತ್ತರೆಯ ಗರ್ಭದಲ್ಲಿ 'ಬಹುಪರಿಚರಿಯಲಿ ಗದೆಯನು ತಿರುಹುತ' ಪರೀಕ್ಷಿತನ ಪ್ರಹರಿಯಾಗಿ ಕಾಯ್ದ ಮಹಾಮಹಿಮೆಯನ್ನು ಸ್ಮರಿಸುತ್ತ 'ಭಕುತರ ಭಾರವ ವಹಿಸುವ ಕಾರ್ಯಕ್ಕೆ ನಮೋ ನಮೋ' ಎಂದಿದ್ದಾರೆ.

ಯಾವುದೇ ವ್ಯಕ್ತಿಯ ಕಾರ್ಯಗಳ ವಿಶ್ಲೇಷಣೆಯಿಂದ ಅವನ ಗುಣಗಳನ್ನು ನಿರ್ಧರಿಸಬಹುದು. ದೈವದ ವಿಷಯದಲ್ಲೂ ಇದೇ ಮಾತು ಸಲ್ಲುತ್ತದೆ.

**೪. 'ಗುಣ ಚಿಂತನೆ'ಯ ಮೂಲಕ ಸಂಕಥನ**

ಭಗವದ್ಗುಣ ಕಥಾಸಕ್ತರಾದ ಹರಿದಾಸರು ಕೆಲವು ಕಡೆಗಳಲ್ಲಿ ಕಥಾಂಶವಿಲ್ಲದೆ ನೇರವಾಗಿ ಗುಣಸಂಕಥನ ಮಾಡಿದ್ದಾರೆ. ಕನಕದಾಸರ ಕೀರ್ತನೆಯೊಂದರಲ್ಲಿ ಇಂತಹ ಸಂಕಥನ ಪ್ರಭೇದವನ್ನು ಕಾಣಬಹುದು.

ನರಬೊಂಬೆಗಳ ಮಾಡಿ ಕುಣಿಸುವ ಗೋವಿಂದ
ನರರ ನೋಡಿ ನೋಡಿ ನಗುತಿರ್ಪ ಗೋವಿಂದ
ಅರಿದೆನೆಂಬರಿಗಂತ್ಯ ತೋರದೊ ಗೋವಿಂದ
ಅರಿಯದಂತಖಿಲದೊಳಗಡಗಿರ್ಪ ಗೋವಿಂದ
ಅರಿಯಾಡಂಬರಗಳಿಗಳವಡದ ಗೋವಿಂದ
ಪರಮ ಪಾವನನೆಂಬ ಬಿರುದುಳ್ಳ ಗೋವಿಂದ
ಪರಮ ಪುರುಷ ಪುರುಷೋತ್ತಮ ಗೋವಿಂದ
ಪರಬ್ರಹ್ಮ ಪರಮ ಪರಾತ್ಪರ ಗೋವಿಂದ
ಮೊರೆ ಹೊಕ್ಕ ಭಕ್ತರ ಸಲಹುವ ಗೋವಿಂದ
ಕರಿರಾಜ ಕರೆಯಲೊದಗಿ ಬಂದೆ ಗೋವಿಂದ
(ಗೋವಿಂದ ಸಲಹೆನ್ನನು)

ಇಲ್ಲಿಯ ಒಂದೊಂದು ಮಾತಿಗೂ ಭಾಗವತದ ಸಾಂಗತ್ಯವಿರುವುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಅಣೋರಣೀಯನ ಮಹತೋ ಮಹೀಯನ
ಅಪ್ರಮೇಯನ ಆಡಿಸಿದಳೆಶೋದೆ
(ಜಗದೋದ್ಧಾರನ)

ಹೀಗೆ ಗುಣಗಳನ್ನು ಎಣಿಸುತ್ತ ಹೋಗುವ ಕ್ರಮವು ದಾಸ ಸಾಹಿತ್ಯದಲ್ಲಿ ಬಹುಪ್ರಚುರವಾಗಿದೆ. ಭಗವಂತನ ಗುಣಗಳ ಅಗಮ್ಯತೆಯನ್ನು ಸಾರುವ ಪುರಂದರ ದಾಸರ ಕೀರ್ತನೆಯಲ್ಲಿ ಭಿನ್ನ ಮಾದರಿಯೊಂದು ಕಾಣುತ್ತದೆ.

ರಂಡೆಯ ಮಕ್ಕಳು ಕುಂಡಗೋಳಕರು ರಾಯರು ನಿನ್ನಿಂದ್ಯೆ ।
ಪಂಡಿತರಾದಾ ದ್ವಿಜರಿಗೆ ಭಿಕ್ಷಾಪಾತ್ರವು ನಿನ್ನಿಂದ್ಯೆ ॥
ಮಂಡೆನೇವರಿಸಿ ಮೊಲೆಯನಿತ್ತವಳಿಗೆ ಮರಣವು ನಿನ್ನಿಂದ್ಯೆ ।
ಭಂಡಾಟದಿ ಮೈಗೊಟ್ಟ ಗೋಪಿಯರು ಪಾವನ ನಿನ್ನಿಂದ್ಯೆ

ತೊತ್ತಿನ ಮಗನಿಗೆ ಒಲಿದು ನಿನ್ನಯ ಗುಣತೋರಿದೆ ಅಹುದಹುದ್ಯೆ ।
ಉತ್ತಮರನು ನೀನಡವಿ ಸೇರಿಸಿದೆ ಉತ್ತಮನಹುದಹುದ್ಯೆ ॥
ಅತ್ತೆಯನುಳುಹಿದೆ ಮಾವನ ಮಡುಹಿದೆ ಏತರ ನ್ಯಾಯವಿದ್ಯೆ ।
ಮತ್ತನಾಗಿ ನಿನ್ನ ಬೈದ ಪಾತಕಿಯ ಮೈಯೊಳಗಿರಿಸಿದೆಯ್ಯೆ

ತಂದೆಯ ಕೊಂದು ಕಂದನ ಸಲಹಿದ ಚಂದವು ನಿನ್ನಿಂದ್ಯೆ ।
ಕಂದನ ಕೊಂದು ತಂದೆಯ ಸಲಹಿದೆ ಏತರ ನ್ಯಾಯವಿದ್ಯೆ ॥
ವಂದಿಸಿ ದಾನವ ಕೊಟ್ಟ ಬಲೀಂದ್ರನ ಬಂಧಿಸಿದಹುದಹುದ್ಯೆ ।
ಮಂದರಧರ ಶ್ರೀ ಪುರಂದರವಿಠಲ ಮಾಡಿದ್ದೇ ಮರಿಯಾದ್ಯೆ ॥

ಲೋಕ ವ್ಯವಾಹಾರದ ದೃಷ್ಟಿಯಿಂದ ನಿಂದಿತರಾದವರಿಗೆ ಉನ್ನತಸ್ಥಾನವನ್ನೂ ವಂದ್ಯರಾದವರಿಗೆ ಅಧೋಗತಿಯನ್ನೂ ಕೊಡುವ ಆತನ ಗುಣಗಳನ್ನು ಇದಮಿಥ್ಥಂ ಎಂದು ನಿರ್ಣಯಿಸಲು ಸಾಧ್ಯವಾಗುವುದಿಲ್ಲ. ಕೊನೆಗೆ ಅವನ ಸತ್ಯಸಂಕಲ್ಪವನ್ನು ಬೇಷರತ್ತಾಗಿ ಒಪ್ಪಿಕೊಳ್ಳುವ ಮೂಲಕ ದಾಸರು 'ನೀ ಮಾಡಿದ್ದೇ ಮರ್ಯಾದೆ' ಎಂದು ಭಗವಂತನ 'ಸರ್ವಸ್ವಾತಂತ್ರ್ಯ' ಗುಣವನ್ನು ಈ ಕೀರ್ತನೆಯಲ್ಲಿ ಪ್ರತಿಪಾದಿಸಿದ್ದಾರೆ.

ಈ ಎಲ್ಲ ಕಡೆಗಳಲ್ಲಿ ಕಾವ್ಯಯೋಗ್ಯ ವರ್ಣನೆಯಲ್ಲೂ ಭಾಗವತ ಪ್ರತಿಪಾದನೆಯಿದೆ. ಕೇಳುಗರಿಗೆ ಒಗ್ಗುವಂತೆ ಕತೆಯನ್ನು ರಾಗ-ಭಾವ-ಪದ ಜೋಡಣೆಗಳ ಮೂಲಕ ಹದಗೊಳಿಸಲಾಗಿದೆ. ಅಲಂಕಾರಗಳ ಆಡಂಬರಕ್ಕಿಂತ ಸ್ವಭಾವೋಕ್ತಿಯ ಸೊಗಸು-ಸೌಂದರ್ಯಗಳು ನಮ್ಮನ್ನು ಸೆಳೆಯುತ್ತವೆ.

### ೫.೨.೨. ಸಂಕಥನದ 'ರೀತಿ-ಆಧಾರಿತ' ಮಾದರಿಗಳು

ಇದುವರೆಗೆ ಹರಿದಾಸರು ಭಾಗವತ ಸಂಕಥನದಲ್ಲಿ ಸಾಧಿಸಿದ ವೃದ್ಧಿಯ ಬಗೆಗಳನ್ನು ವಸ್ತುವಿನ ಆಧಾರದಲ್ಲಿ ವಿಂಗಡಿಸಿ ನೋಡಿದ್ದೇವೆ. ಈಗ ಸಂಕಥನದ ರೀತಿಯನ್ನು ಗಮನದಲ್ಲಿಟ್ಟುಕೊಂಡು, 'ಸ್ವಗತ' 'ನಿವೇದನೆ' 'ಉಪದೇಶ' ಮತ್ತು 'ವಾಕ್ಯಾರ್ಥ'ವೆಂಬ ಬೇರೆ ನಾಲ್ಕು ಪ್ರಭೇದಗಳನ್ನು ವಿವರಿಸಬಹುದು.

೧. **ಸ್ವಗತ :** ನಿರೂಪಕನು ತನಗೆ ತಾನೇ ಹೇಳಿಕೊಂಡಂತಿರುವ ಮಾದರಿಯನ್ನು 'ಸ್ವಗತ' ಎಂದು ಹೆಸರಿಸಬಹುದು. ಉದಾಹರಣೆಗಾಗಿ ಪುರಂದರ ದಾಸರ ಈ ಗೀತೆಯನ್ನು ನೋಡಬಹುದು.

ಎಂದಪ್ಪಿಕೊಂಬೆ ರಂಗಯ್ಯ ನಿನ್ನ ಎಂದಪ್ಪಿಕೊಂಬೆ ‖ಪ‖

ಎಂದಪ್ಪಿಕೊಂಬೆ ನಾನೆಂದು ಮುದ್ದಾಡುವೆ।
ಎಂದಿಗೆ ಸವಿಮಾತನಾಡಿ ನಾ ದಣಿವೆನೊ‖ ‖ಅ.ಪ‖

ಅರಳೆಲೆ ಮಾಗಾಯಿ ಕೊರಳ ಪದಕಸರ।
ತರಳರನೊಡಗೂಡಿ ಬೆಣ್ಣೆಯ ಮೆಲುವನ। ‖೧‖

ಇಂತಹ ಸಂಕಥನದಲ್ಲಿ 'ವಸ್ತು'ವನ್ನು 'ಸಮ್ಮುಖೀಕರಣ'ಗೊಳಿಸಿಕೊಂಡು ಆತ್ಮೀಯವಾಗಿ ಪರಿಭಾವಿಸಲು ಸಾಧ್ಯವಾಗುತ್ತದೆ. ಭಾವತೀವ್ರತೆಯಿಂದಾಗಿ ಕೃತಿ ಆಕರ್ಷಕವಾಗುತ್ತದೆ.

ದಾಸರು 'ನಿರೂಪಕ'ರಾಗಿ ತಮ್ಮ ಮನವನ್ನೇ 'ಸಖಿ' ಎಂದು ಕಲ್ಪಿಸಿ ಹೇಳುವ ರೀತಿಯು ಸ್ವಗತದ ಮತ್ತೊಂದು ಪ್ರಭೇದವೆನ್ನಬಹುದು. 'ಅಮ್ಮ', 'ಅಕ್ಕ', 'ತಂಗಿ' ಎಂದೆಲ್ಲ ಸಂಬೋಧನೆಗಳು ಇರುವ ಕೀರ್ತನೆಗಳು ಸುಂದರ ಭಾವಗೀತಗಳಾಗಿರುವುದನ್ನು ಗುರುತಿಸಬೇಕು. ಉದಾಹರಣೆಯಾಗಿ ವ್ಯಾಸರಾಯರ ಒಂದು ರಚನೆಯನ್ನು ನೋಡಬಹುದು :

ಕೊಳಲನೂದುವ ಚದುರನ್ಯಾರೆ ಪೇಳಮ್ಮಯ್ಯ।
ತಳಿರಂದದಿ ತಾ ಪೊಳೆವ ಕರದಿ ಪಿಡಿದು‖ ‖ಪ‖

ನಾದದಿ ತುಂಬಿತು ಗೋವರ್ಧನಗಿರಿ
ಯಾದವಕುಲ ಘನ ಒರೆದಿತು ಖಗಕುಲ
ಸಾಧಿಸಿ ನೋಡಲು ಕೃಷ್ಣನ ಈಗಲೆ
ಸಾಧ್ಯವೇನೀ ಬೃಂದಾವನದೊಳು ‖೧‖

ಮೇವು ಮರೆತವು ಗೋವುಗಳೆಲ್ಲವು
ಸಾವಕಾಶದಿ ಹರಿದಳು ಯಮುನಾ
ಆವು ಕಾವುತಲಿ ಗೋವಳರೆಲ್ಲರ
ಹಾವ ಭಾವದಲಿ ಬೃಂದಾವನದೊಳು ‖೨‖

ಸುರರು ಸುರಿದರಾಕಾಶದಿ ಸುಮಗಳ
ಸರಿದು ಪೋಗಿ ನೋಡೆ ಬೃಂದಾವನದೊಳು
ಸಾರಿ ಸಾರಿ ಈ ಕೃಷ್ಣನು ಈಗಲೆ
ತುರುಗಳ ಕಾಯ್ವ ಕದಂಬ ವನದೊಳು ‖೩‖

ಕವಿಯಂತೆಯೇ ಸಹೃದಯನಿಗೂ 'ಮನಸ್ಸು' ಇರುವುದರಿಂದ ಒಂದು ಮನದ ಮಾತಾದ ಸ್ವಗತವು ಇನ್ನೊಂದು ಮನಕ್ಕೆ ತಟ್ಟನೆ ಸಂವಹನಗೊಳ್ಳುತ್ತದೆ. ಭಾವಗಳು ಅನುರಣನಗೊಳ್ಳುತ್ತವೆ.

'ವೇಣುಗೀತೆ'ಯಾಗಿರುವ ಮೇಲಿನ ಕೀರ್ತನೆಯನ್ನು ಕೊಳಲು ಮೃದಂಗ ಘಟಗಳ ಸಹಚರ್ಯದೊಂದಿಗೆ ಹಾಡಿದಾಗ ಒಬ್ಬರೇ ಕುಳಿತು ಏಕಾಗ್ರತೆಯಿಂದ ಕೇಳಿದಾಗ ಹೆಚ್ಚು ಪರಿಣಾಮ ರಮಣೀಯತೆಯನ್ನು ಅನುಭವಿಸಬಹುದು.

ಇಂತಹ 'ಸ್ವಗತ' ಮಾದರಿಯ ಸಂಕಥನದಲ್ಲಿ ಕ್ಲಿಷ್ಟ-ಶಾಸ್ತ್ರಜಟಿಲ-ಸಂಸ್ಕೃತ ಪದಗಳನ್ನು ಬಳಸುವುದಿಲ್ಲ ವೆಂಬುದನ್ನು ಗಮನಿಸಬೇಕು. ಇಲ್ಲಿಯ ಭಾಷೆ ಅಚ್ಚಕನ್ನಡದ ಆಡುಮಾತಿನ ರೂಪದ್ದು. ಆದ್ದರಿಂದಲೇ ಇಂತಹ ಕೃತಿಗಳು ಹೆಚ್ಚು ಸಂವಹನಶೀಲವಾಗಿರುತ್ತವೆ.

೨. **ನಿವೇದನೆ :** ಇಷ್ಟದೈವವನ್ನು ಕುರಿತು ಮಾತನಾಡುವ, ಬೇಡುವ ಧಾಟಿಯ ಸಂಕಥನವನ್ನು 'ಈ ವಿಭಾಗದಲ್ಲಿ ಪರಿಗಣಿಸಬಹುದು. ದಾಸರು ಕೆಲವು ಕೀರ್ತನೆಗಳಲ್ಲಿ 'ಏಕಾಂತದಲ್ಲಿ ತಮ್ಮ ಬಿಂಬರೂಪಿಗೆ ಮೊರೆ ಇಟ್ಟಂತೆ ಇದ್ದರೆ ಮತ್ತೆ ಕೆಲವು ಕಡೆ ಕ್ಷೇತ್ರ ಮೂರ್ತಿಗಳನ್ನು ಕುರಿತ ಸ್ತೋತ್ರ ರೂಪದಲ್ಲೂ ನಿವೇದನೆಯ ಧಾಟಿಯನ್ನು ಬಳಸಿದ್ದಾರೆ.

ಹರಿದಾಸ ಪರಂಪರೆಯ 'ಉಪಲಬ್ಧ ಕನ್ನಡ ಕೀರ್ತನೆಗಳ ಪ್ರಥಮ ಪ್ರವರ್ತಕ'ರಾದ ನರಹರಿತೀರ್ಥರ ರಚನೆ ನಿವೇದನ ಮಾದರಿಗೆ ಒಂದು ಉತ್ತಮ ಉದಾಹರಣೆಯಾಗಿದೆ.

ಹರಿಯೇ ಇದು ಸರಿಯೆ |
ಚರಣ ಸೇವಕನಲ್ಲಿ ಕರುಣಬಾರದ್ಯಾಕೆ ||
* * *
ದಗಿಲಿಲ್ಲದೆ ಒದ್ದ ಭೃಗುವ ಪಾಲಿಸಿದೆ |
ನಗಧರ ಎನ್ನ ಬಿಡುವ ಬಗೆ ಏನಿದು ||
* * *
ಉಂಟು ಹಿರಣ್ಯಕನ ಕಂಟಕ ಬಿಡಿಸಿದ್ದು |
ನೆಂಟನೆ ನಿನಗೆ ಭಂಟನಾನಲ್ಲವೆ ||

ಇತರ ಭಕ್ತರಿಗೆಲ್ಲ ಒಲಿದು ತನಗೆ ಮಾತ್ರ ಕರುಣೆ ತೋರದ ನಡತೆಯನ್ನು ನಯವಾಗಿ ಪ್ರಶ್ನಿಸುವ ತಂತ್ರವು ಇಲ್ಲಿದೆ. ಕೃಷ್ಣನ ಮಹಿಮೆಯನ್ನು ಕೃಷ್ಣನಿಗೇ ತಿಳಿಸಿ ಹೇಳುವ ಹೊಸಪರಿಯನ್ನು ವ್ಯಾಸರಾಯರು ಪ್ರಯೋಗಿಸಿದ್ದಾರೆ.

ಬಿಡದೆ ನಿಮ್ಮನು ಪೂಜಿಸುವ ದಾಸರಿಗೆ || ಪ ||
ತಡೆಯದೆ ವೈಕುಂಠವಹುದು ಸೋಜಿಗವೆ || ಅ.ಪ ||

ಬಡತನವಾಗೆ ಬಾಲತ್ವದ ಸಖನೆಂದು |
ಮಡದಿ ಪೋಗೆನ್ನೆ ಕುಚೇಲ ಬಂದು ||
ಪಿಡಿತುಂಬ ಅವಲಕ್ಕಿಯ ತಂದು ಕೊಡಲಾಗ |
ಕಡುಮೆಚ್ಚಿ ಅವನಿಗೆ ಸೌಭಾಗ್ಯವನಿತ್ತೆ || ೧ ||
* * *



ಕಡಲಶಯನನೆ ಕುಬುಜೆ ತಂದ ಗಂಧಕೆ ಮೆಚ್ಚಿ।
ಒಡನೆ ಅವಳನು ಸುರೂಪಿಯ ಮಾಡಿದೆ॥
ಸಡಗರದಿ ಅನವರತ ಬಿಡದೆ ಪೂಜಿಸುವಂಥ।
ದೃಢಭಕ್ತರಿಗೇನುಂಟು ಏನಿಲ್ಲ ಸಿರಿಕೃಷ್ಣ ॥ ೨ ॥

ಕೇಳುಗರಿಗೆ ಭಾಗವತವನ್ನು ಅನ್ಯೋಕ್ತಿಯ ಮೂಲಕ ತಿಳಿಸುವ ಉದ್ದೇಶದಿಂದ ಇಂತಹ ಸಂಕಥನ ನಡೆದಿರಬಹುದು ಅಥವಾ 'ಕೇಳುಗರಲ್ಲಿದ್ದು ತಮ್ಮ ಸಂಕೀರ್ತನೆಗೆ ಪ್ರೀತನಾಗಿ ಅನುಗ್ರಹಿಸಬೇಕಾದವನು. ಸರ್ವಾಂತರ್ಯಾಮಿಯಾದ ಶ್ರೀಕೃಷ್ಣನೇ' ಎಂಬ ಶ್ರದ್ಧೆಯು ಈ 'ನಿವೇದನ' ಪ್ರಕಾರದ ಆಯ್ಕೆಗೆ ಕಾರಣವಾಗಿಬಹುದು.

ಸುಳಾದಿಯೊಂದರಲ್ಲಿ ಕೃಷ್ಣನು ಮಥುರಾ ನಗರದಲ್ಲಿ ಮಲ್ಲಮರ್ದನನಾಗಿ ಮೆರೆಯಲು ಮಾಡಬೇಕಾದ ಕಾರ್ಯಗಳನ್ನು ಮುಂದು ಮುಂದಾಗಿ ತಿಳಿಸಿ ಹೇಳುವ ನಿರ್ದೇಶಕನ ಸ್ಥಾನದಲ್ಲಿ ನಿಂತು ನಿವೇದಿಸಿಕೊಳ್ಳುವ ಪುರಂದರದಾಸರ ರಚನೆ ಹೀಗಿದೆ.

ಬಿಲ್ಲು ಮುರಿಯೊ ದನುಜರ ಹೊಯ್ಯೊ, ಕೃಷ್ಣ ।
ಮಲ್ಲ ಬಂದನು ಕಾಣೊ ಮಧುರಿಗೆ ॥
ಹುಲ್ಲು ಮಲ್ಲರ ತಿವಿಯೊ ।
ಖಿಲ್ಲ ಮಾನವರ ಕೊಲ್ಲೊ, ರಂಗ ॥
ಮಲ್ಲ ಬಂದನು ಕಾಣೊ ಮಧುರಿಗೆ ।
ಬಲ್ಲಿದ ನಮ್ಮ ಪುರಂದರ ವಿಠಲ ॥
ಬಲ್ಲಿದ ಕಾಣೊ, ಊರ್ಜಿತ ಕಾಣೊ ಮಲ್ಲ ಕೃಷ್ಣ ।

ಶ್ರೀಹರಿಯ ದರ್ಶನಕ್ಕೆ ಹಂಬಲಿಸುವ ನಿರೂಪಕನು ಸಮಯಾಸಮಯವನ್ನು ನೋಡದೆ ಭಕ್ತರ ಅವಸರಕ್ಕೆ ಒದಗಿಬರುವ ಪ್ರಭುವಿನ ಕರುಣೆಯನ್ನು ಭಕ್ತರ ಚರಿತ್ರೆಯ ಮೂಲಕ ಚಿತ್ರಿಸುವ ಕನಕದಾಸರ ಈ ಕೆಳಗಿನ ಕೀರ್ತನೆಯನ್ನು ಸಂಕಥನದ ಮೂಲಕ ನಿವೇದಿಸಿಕೊಳ್ಳುವ 'ಸಾರ್ವತ್ರಿಕ ಮಾದರಿ' ಎನ್ನಬಹುದು.

ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ
ಕೂಗಿದರು ಧ್ವನಿ ಕೇಳಲಿಲ್ಲವೇ ನರಹರಿಯೇ ॥ ಪ ॥

ಪರಮಪದದೊಳಗೆ ವಿಷಧರನ ತಲ್ಪದಲಿ ನೀ ।
ಸಿರಿಸಹಿತ ಕ್ಷೀರವಾರಿಧಿಯೊಳಿರಲು ॥
ಕರಿರಾಜ ಕಷ್ಟದಲಿ ಆದಿಮೂಲಾ ಎಂದು ।
ಕರೆಯಲಾಕ್ಷಣ ಬಂದು ಒದಗಿದೆಯೊ ನರಹರಿಯೆ ॥ ೧

ದೀನಾವಸ್ಥೆ ಯಾರಿಗೂ ಬರಬಾರದು. ಅದು ಮನುಷ್ಯನ ಆತ್ಮಾಭಿಮಾನವನ್ನು ಕುಗ್ಗಿಸುತ್ತದೆ. ಹೊಟ್ಟೆಪಾಡಿಗಾಗಿ ಮತ್ತೊಬ್ಬ ಮನುಷ್ಯನ ಮುಂದೆ 'ದೇಹಿ' ಎನ್ನುವ ಸ್ಥಿತಿ ಎಂತಹವರಿಗೂ ಕಷ್ಟಕರ. ಇದನ್ನು ನಿವೇದಿಸುವ ಸಂದರ್ಭದಲ್ಲಿ ಪುರಂದರದಾಸರು ರಚಿಸಿದ ಉಗಾಭೋಗವನ್ನು ನೋಡಬಹುದು.

ಬೇಡುವ ಕಷ್ಟಕ್ಕಿಂತ ಸಾವುದೇ ಕರಲೇಸು ।
ಬೇಡುವವರಿಗೆ ಒಬ್ಬರೊಡೆಯರುಂಟೆ ದೇವ ॥
ಗೂಡ ಕಿರಿದುಮಾಡಿ ಬಲಿಯ ದಾನವ ಬೇಡಿ ।
ನಾಡೊಳು ಸ್ಥೂಲ ಸೂಕ್ಷ್ಮ ರೂಪವಾದೆ ॥
ಬೇಡುವ ಕಷ್ಟವನು ನೀನೆ ಬಲ್ಲೆಯೋ ಸ್ವಾಮಿ ।
ಎನ್ನ ಬೇಡದಂತೆ ಮಾಡಯ್ಯ ಪುರಂದರ ವಿಠಲ ॥

ತನ್ನಲ್ಲೇ ತ್ರಿಲೋಕವನ್ನು ವ್ಯಾಪಿಸುವ ಸಾಮರ್ಥ್ಯವಿದ್ದರೂ ಬಲಿಯನ್ನು ಬೇಡುವ ಹೊತ್ತಿಗೆ ದೈನ್ಯದಿಂದ ಕುಗ್ಗಿ ಕುಬ್ಜ ವಾಮನನಾಗಿ ಬಲ್ಲ ಶ್ರೀಹರಿಗೆ ಬೇಡುವ ಕಷ್ಟದ ಪ್ರತ್ಯಕ್ಷ ಅನುಭವವಿದೆ. ಆದ್ದರಿಂದ, ತಮಗೆ ಬೇಡುವ ಕಷ್ಟವನ್ನು ನೀಡಬಾರದೆಂದು ಪ್ರಾರ್ಥಿಸಿದ್ದಾರೆ. ಕಥೆಯ ತುಣುಕನ್ನು ಹೊಸರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ.

ಹೀಗೆ ಸ್ವಗತ ಮತ್ತು ನಿವೇದನಗಳು ಒಂದೊಮ್ಮೆ ಆತ್ಮತೃಪ್ತಿಗೂ, ಬಹುಪಾಲು ಸಂದರ್ಭಗಳಲ್ಲಿ ಪರೋಕ್ಷ ಉಪದೇಶಕ್ಕೂ ಕಾರಣವಾದರೆ ಮುಂದಿನ ಮಾದರಿಯನ್ನು ಸಂಪೂರ್ಣವಾಗಿ ಕೇಳುಗರನ್ನು ದೃಷ್ಟಿಯಲ್ಲಿಟ್ಟುಕೊಂಡೇ ಬಳಸಲಾಗಿದೆ.

೩. **ಉಪದೇಶ :** ದೈನಂದಿನ ಬದುಕಿನ ದಾರುಣತೆಯಿಂದ ನೊಂದ ಜನರಿಗೆ ಬದುಕಿನಲ್ಲಿ ಭರವಸೆ ಮೂಡಿಸುವುದು ದಾಸರ ಉದ್ದೇಶವಾಗಿತ್ತು ಅಂತೆಯೇ ಉಪದೇಶಾತ್ಮಕ ಕೀರ್ತನೆಗಳಲ್ಲಿ ಭಗವಂತನ ಅಪಾರ ಕರುಣೆಯನ್ನು ಭಕ್ತರಕ್ಷಣ ದೀಕ್ಷೆಯನ್ನು ಹತ್ತಾರು ಬಗೆಗಳಲ್ಲಿ ಉಪದೇಶಿಸಿದ್ದಾರೆ.

'ನಂಬಿಕೆಟ್ಟವರಿಲ್ಲವೊ ರಂಗಯ್ಯನ'

ಎಂದು ಸಾರಲು ವ್ಯಾಸರಾಯರು ಅವನನ್ನು ನಂಬಿ ಉದ್ಧೃತರಾದ ಭಾಗವತರ ಕಥೆಯನ್ನು ಪ್ರಸ್ತಾಪಿಸಿದ್ದಾರೆ. ಮೂರು ಲೋಕದಲ್ಲೂ ಹರಿಭಜಕರಿಗೆ ಆದರ್ಶರಾಗಬಲ್ಲ ಭಾಗವತೋತ್ತಮರು ಇರುವುದನ್ನು ಹೇಳುವ ವಾದಿರಾಜರ ಉಪದೇಶದ ರೀತಿ ಹೀಗಿದೆ

ಧ್ರುವನ ನೋಡು ಸುರಲೋಕದಿ
ಭುವಿಯೊಳು ವಿಭೀಷಣನ್ನ ನೋಡಿರೋ
ಅವನಿಯ ಕೆಳಗೆ ಬಲಿಯ ಉತ್ಸಹವ ನೋಡಿ ಮನುಜರೆಲ್ಲರು
ಭುಜನ ತೃತೀಯದವರೆ ಸಾಕ್ಷಿ ಹಯವದನನ ಭಜಕರಿಗೆ॥

ಕಾಕು ಜನರನ್ನು ತರಿದು ಏಕಾಂತ ಭಕ್ತರನ್ನು ಸಲಹುವ ಕೃಷ್ಣನ 'ಅನೇಕ ಚರಿತ್ರೆ'ಗಳನ್ನು ವಾದಿರಾಜರು

ಜ್ಞಾನ ಶೂನ್ಯನಾಗಿ ಸೊಕ್ಕಿ ತಾನೆ ವಾಸುದೇವನೆನಲು।
ಹೀನ ಪೌಂಡ್ರಕನ ಶಿರವ ಜಾಣರಾಯ ತರಿದನಾಗ॥

ಎಂದು ನಿದರ್ಶನ ಸಹಿತವಾಗಿಯೇ ತಿಳಿಸಿಕೊಡುತ್ತಾರೆ. ಪುರಂದರದಾಸರು ಭಗವಂತನನ್ನು ನಂಬಿ ನೆಲೆಗಂಡ ಭಾಗವತರ ಯಾದಿಯನ್ನೇ ಕಣ್ಣಮುಂದೆ ತರಲು ಯತ್ನಿಸುವ ಸಾಲುಗಳು ಇಲ್ಲಿವೆ.

ಅಕ್ರೂರ ಪ್ರಹ್ಲಾದ ಅಂಬರೀಷ ಅಜಮಿಳ।
ನಕ್ರಪಿಡಿದ ಗಜೇಂದ್ರ ಕುಚೇಲ ಯಾವತ್ಪರಿವಾರ।
ಚಕ್ರಧಾರಿ ಕೃಷ್ಣನ ನಂಬಿದವರ।
ಅಕ್ಕರಿಂದಲಿ ಸಲಹಿದ ಪುರಂದರ ವಿಠಲ

ಹೀಗೆ ಹಾಡಿದ್ದನ್ನೇ ಹಾಡುವಾಗಲೂ ಭಾಗವತ ಸಂಕಥನವು ಬೇಸರ ತರಿಸುವುದಿಲ್ಲ. ಬೇರೆ ಬೇರೆ ದೇಶ ಕಾಲ ಪರಿಸ್ಥಿತಿ ಮನಸ್ಥಿತಿಗಳಲ್ಲಿ ವಿವಿಧ ರಾಗ ತಾಳ ಲಯಗಳಲ್ಲಿ ಸಾಗುವ ಸಂಕಥನವು ಏಕತಾನವೆನಿಸದೆ ಹೊಸ ರೂಪುಗಳನ್ನು ತಾಳುತ್ತಲೇ ಹೋಗುವುದನ್ನು ಗುರುತಿಸಿದಾಗ ಈ ವೃದ್ಧಿ ಮಾದರಿಗಳ ಅಗತ್ಯವನ್ನು ತಿಳಿಯಬಹುದಾಗಿದೆ.

**೪. ವಾಕ್ಯಾರ್ಥ :** ವಿದ್ವಾಂಸರು ಸಭೆಗಳಲ್ಲಿ ವಾಕ್ಯಗಳ ಅಂತರಾರ್ಥವನ್ನು, ಅದರ ಸಾಧಕ-ಬಾಧಕ ಮುಖಗಳನ್ನು ಚರ್ಚಿಸಿ ಕೊನೆಗೊಂದು ತೀರ್ಮಾನಕ್ಕೆ ಬರುವ ವಿಧಾನವನ್ನು 'ವಾಕ್ಯಾರ್ಥ' ಎನ್ನುತ್ತಾರೆ. ಹರಿದಾಸರು ಭಾಗವತ ಸಂಕಥನ ಸಂದರ್ಭದಲ್ಲಿ ಕತೆಯ ಎಳೆಯೊಂದನ್ನು ಆಧರಿಸಿ ವಿವಿಧ ಕಥಾಂಶಗಳ ವಿಶ್ಲೇಷಣೆಯ ಮೂಲಕ ಒಂದು ಪ್ರಮೇಯವನ್ನು ಸ್ಥಾಪಿಸುವ ಮಾದರಿಯನ್ನು ಇಲ್ಲಿ ವಾಕ್ಯಾರ್ಥ' ಎಂಬ ಹೆಸರಿನಿಂದ ಗುರುತಿಸಲಾಗಿದೆ.

ಭಾಗವತ ಅಷ್ಟಮಸ್ಕಂಧದ 'ಸಮುದ್ರಮಥನ'ದ ಲಕ್ಷ್ಮೀಕಲ್ಯಾಣ ಸಂದರ್ಭದ ಕತೆ ಹೀಗಿದೆ : ಆಕೆ ಸಕಲ ದೇವಾಸುರರನ್ನು ನೋಡಿ, ಅವರ ದೋಷಗಳನ್ನು ಗುರುತಿಸಿ ವಿಷ್ಣುವೇ ದೋಷ ದೂರನೆಂಬ ನಿಶ್ಚಯಕ್ಕೆ ಬರುತ್ತಾಳೆ. ಈ ವಸ್ತುವನ್ನು ವಾದಿರಾಜರು 'ಲಕ್ಷ್ಮೀಶೋಭಾನ'ದಲ್ಲಿ ಕನ್ನಡೀಕರಿಸಿದ್ದಾರೆ.

ಕ್ಷೀರ ಸಾಗರವನ್ನು ಲೀಲೆಯಲಿ ಕಡೆದಾಗ ಉದಿಸಿದ ಬಾಲ ಲಕ್ಷ್ಮಿಯು ಸರ್ವಾಭರಣಾಲಂಕೃತಳಾಗಿ ಕನ್ಯೆಯಾಗಿ ಸ್ವಯಂವರಕ್ಕೆ ನಡೆತಂದು ಸಾಲಾಗಿ ಕುಳಿತಿದ್ದ ಸುರರ ಸಭೆಯನ್ನು ಕಂಡು ಅವರ ಗುಣಾವಗುಣಗಳನ್ನು ಸಮೀಕ್ಷಿಸುತ್ತಾಳೆ. ಇಲ್ಲಿ ದೇವತೆಗಳ ಹೆಸರುಗಳನ್ನು ಹೇಳದೆ ಅವರ ದೋಷಗಳನ್ನು ಮಾತ್ರ ಹೇಳಿರುವುದಕ್ಕೆ ಕವಿಕುಲತಿಲಕರಾದ ವಾದಿರಾಜರು ಒಂದು ಕಾರಣವನ್ನು ಕಲ್ಪಿಸುತ್ತಾರೆ.

ತನ್ನ ಮಕ್ಕಳ ಕುಂದ ತಾನೆ ಪೇಳುವದಕ್ಕೆ ।
ಮನ್ನದಿ ನಾಚಿ ಮಹಲಕ್ಷುಮಿ ॥
ತನ್ನಾಮದಿಂದಲಿ ಕರೆಯದೆ ಒಬ್ಬೊಬ್ಬರ ।
ಉನ್ನಂತ ದೋಷಗಳನೆಣಿಸಿದಳು ॥



ಆ ದೇವತೆಗಳಿಗೆಲ್ಲ ತಾಯಿಯಾದ ಆಕೆ ತನ್ನ ಮಕ್ಕಳ ಕುಂದನ್ನು ತಾನೇ ಹೇಳಿಕೊಳ್ಳಲು ಸಂಕೋಚಗೊಂಡು, ಹೆಸರನ್ನು ಹೇಳದೆ ಸಣ್ಣ ದೋಷಗಳನ್ನು ಉಪೇಕ್ಷಿಸಿ, ಉನ್ನಂತ ದೋಷಗಳನ್ನು ಮಾತ್ರ ಹೇಳಿದಳೆಂದು ಕಾರಣನೀಡಿ ವಾಕ್ಯಾರ್ಥ ಮಾಡಿ 'ಮೂಲ'ವನ್ನು ಸಂಕಥಿಸಿದ್ದಾರೆ. ಮುಂದುವರಿದು

ಕಾಮ ನಿರ್ಜಿತನೊಬ್ಬ ಕಾಮಿನಿಗೆ ಸೋತೊಬ್ಬ।
ಭಾಮಿನಿಯ ಹಿಂದೆ ಹಾರಿದವ॥
ಕಾಮಾಂಧನಾಗಿ ಮುನಿಯ ಕಾಮಿನಿಗೈದಿದನೊಬ್ಬ।
ಕಾಮದಿಂ ಗುರುತಲ್ಪಗಾಮಿಯೊಬ್ಬ॥

ಎಂಬ ಈ ಪದ್ಯದಲ್ಲಿ ಹೇಳಿರುವ ವಿಶೇಷಣಗಳು ಶಿವ, ಬ್ರಹ್ಮ, ಇಂದ್ರ, ಚಂದ್ರ, ಮುಂತಾದವರನ್ನು ತಿಳಿಸುವ ಒಗಟಿನಂತಿವೆ. ಇತರ ದೇವತೆಗಳ ದೋಷಾವಿಷ್ಕಾರ ಸುದೀರ್ಘವಾಗಿ ಸಾಗಿದೆ. ಕೊನೆಗೆ

ಒಂದೊಂದು ಗುಣಗಳು ಇದ್ದವು ಇವರಲ್ಲಿ।
ಸಂದಣಿಸಿವೆ ಬಲುದೋಷ॥
ಕುಂದೆಳ್ಳಿಷ್ಟಿಲ್ಲದ ಮುಕುಂದನೆ ತನಗೆಂದು।
ಇಂದಿರೆ ಪತಿಯ ನೆನೆದಳು॥

ಇಲ್ಲಿಗೆ ಭಾಗವತದಲ್ಲಿ ಸ್ವಯಂವರಘಟ್ಟ ಮುಗಿದು ಲಕ್ಷ್ಮೀನಾರಾಯಣರ ವಿವಾಹಮಹೋತ್ಸವ ನೆರವೇರುತ್ತದೆ. ಇಲ್ಲಿಯವರೆಗಿನ ವಿಷಯಕ್ಕೆ ವಾದಿರಾಜರು ಭಾಗವತಕ್ಕೆ ಋಣಿಯಾಗಿದ್ದಾರೆ.

ಆದರೆ ಲಕ್ಷ್ಮೀ ಶೋಭಾನೆಯಲ್ಲಿ ವಾದಿರಾಜರು ಅನ್ಯದೇವತೆಗಳ ಕುಂದುಗಳನ್ನು ಹೇಳಿದ ಮಾತ್ರಕ್ಕೆ ವಿಷ್ಣುವಿನ ದೋಷದೂರತ್ವ, ಗುಣಪೂರ್ಣತ್ವಗಳು ನಿಶ್ಚಯವಾಗಲಾರವೆಂದು ನಿರ್ಧರಿಸಿ ಶ್ರೀಕೃಷ್ಣ 'ನಿರನಿಷ್ಟ' ಮತ್ತು 'ನಿರವದ್ಯ' ಎಂಬ ತತ್ವದ ಸ್ಥಾಪನೆಗಾಗಿ ವಾಕ್ಯಾರ್ಥವನ್ನು ಆರಂಭಿಸುತ್ತಾರೆ. ಎಲ್ಲ ದೇವತೆಗಳೂ ಅಲ್ಪಾಯುಗಳು, ಇಂದಲ್ಲ ನಾಳೆ ಸಾಯುವವರಾದ್ದರಿಂದ ನಿತ್ಯಮುತ್ತೈದೆಯಾದ ತಾನು ಸರ್ವರ ಆಯುಷ್ಯ ನಿಯಾಮಕನಾದ ಶಿಂಶುಮಾರ ರೂಪನಾದ ಶ್ರೀಹರಿಯನ್ನೇ ಆಯ್ಕೆ ಮಾಡಿಕೊಳ್ಳುವುದಾಗಿ ಲಕ್ಷ್ಮಿಯು ನಿರ್ಧರಿಸಿದಳೆಂದು ಚಿತ್ರಿಸಿದ್ದಾರೆ. ದುಃಖದೂರಳಾದ ಆಕೆಗೆ ಪ್ರಕೃತಿಯ ಬಂಧನಕ್ಕೆ ಒಳಗಾದ ಬ್ರಹ್ಮ ರುದ್ರಾದಿ ಜೀವರು ಜೋಡಾಗಲಾರರು. ಹರಿಯ ಮಗನಾದ ಬ್ರಹ್ಮ, ಮೊಮ್ಮಗನಾದ ರುದ್ರ, ಅಂಜಿ ನಡೆವ ಸೂರ್ಯ-ಚಂದ್ರರು, ಹಾಸಿಗೆಯಾದ ಶೇಷ, ವಾಹನನಾದ ಗರುಡ-ಯಾರೂ ಸಮನಾಗಲಾರರು' ಎಂಬಲ್ಲಿ ಹರಿಯ ಸರ್ವೋತ್ತಮತ್ವವನ್ನು ಸಕಾರಣವಾಗಿ ನಿರ್ಧರಿಸಿದ್ದಾರೆ.

'ಬೊಮ್ಮನ ಲಯದಲ್ಲಿ ಇದ್ದವಗೆ ಲಯ ಉಂಟೆ?' ಎಂದು ಪ್ರಶ್ನಿಸಿ ಜನನ ಮರಣಗಳಿಲ್ಲದ ಇವನು ಯಶೋದೆಯ ಮೊಲೆ ಉಂಡದ್ದು ಲೀಲೆಯೇ ಹೊರತು 'ನಿತ್ಯ ತೃಪ್ತ'ನಾದ ಇವನಿಗೆ ಹಸಿವು-ತೃಷೆಗಳಿಲ್ಲವೆನ್ನುತ್ತಾರೆ.

ಒಂದೊಮ್ಮೆ ದೇವರಿಗೆ ಹಸಿವೆ ಇದೆ ಎಂದಾದರೆ ಪ್ರಳಯ ಕಾಲದಲ್ಲಿ ಧನ-ಧಾನ್ಯಗಳಿಲ್ಲ, ಅಡಿಗೆ ಮಾಡುವವರಿಲ್ಲ, ಬೇಯಿಸಲು ಅಗ್ನಿಯಿಲ್ಲ, ಆಹಾರವೇ ಇಲ್ಲ. ಇಂಥ ಸ್ಥಿತಿಯಲ್ಲೂ ಏಕಪ್ರಕಾರನಾಗಿ ಇರುವ ಶ್ರೀಹರಿಗೆ ಹಸಿವು ಉಂಟೆಂದು ಹೇಳಬಹುದೆ?- ಎಂಬ ಜಿಜ್ಞಾಸೆಯನ್ನು ಮುಂದಿಟ್ಟಿದ್ದಾರೆ. ಲಕ್ಷ್ಮೀಶೋಭಾನೆಯ ಬಹುಪದ್ಯಗಳಲ್ಲಿ ಈ ವಾಕ್ಯಾರ್ಥವು ವಿಸ್ತಾರವಾಗಿ ಚರ್ಚಿತವಾಗಿದೆ. ಅಲ್ಲಿಯ ಎಲ್ಲ ವಿವರಗಳನ್ನು ಹೇಳದೆ ಒಂದೆರಡನ್ನು ನೆನಪಿಸಬಹುದು. ನರಸಿಂಹನಾಗಿ ಕಂಬದಿಂದ ಬಂದವನು ಅದೇ ರೀತಿ ಕೃಷ್ಣನಾಗಿ ದೇವಕಿಯಿಂದಲೂ ಬಂದ. ಆದ್ದರಿಂದ ಕೃಷ್ಣನಿಗೆ ಲೋಕದ ರೀತಿಯ ಜನನವನ್ನು ದೋಷವೆಂದು ಒಪ್ಪುವಂತಿಲ್ಲ.

ಆವಳಿಸುವಾಗ ಯಶೋದಾದೇವಿಗೆ ।
ದೇವ ತನ್ನೊಳಗೆ ಹುದುಗಿದ್ದ ॥
ಭುವನವೆಲ್ಲವ ತೋರಿದುದಿಲ್ಲವೆ ।
ಆ ವಿಷ್ಣು ಗರ್ಭದೊಳಡಗುವನೆ ॥

ಆನೆಯನ್ನು ಅಳತೆ ಸೇರಿನಲ್ಲಿ ಕೂಡಿಸಲು ಸಾಧ್ಯವಿಲ್ಲ. ಅದರಂತೆಯೇ ಅನೇಕ ಕೋಟಿ ಬ್ರಹ್ಮಾಂಡಗಳನ್ನು ಸಣ್ಣ ಅಣುಗಳಂತೆ ತನ್ನ ರೋಮಕೂಪದಲ್ಲಿ ಧರಿಸಿದ ವಿರಾಟ್ ರೂಪಿ ಶ್ರೀಹರಿಯನ್ನು ತಾಯಿಯ ಗರ್ಭವು ಒಳಗೊಳ್ಳಲಾರದು.

ಮನ್ಮಥನೇ ಇವನ ಮಗನಾದ್ದರಿಂದ ಇವನಿಗೆ ಕಾಮವಿಕಾರ ದೋಷವಿಲ್ಲ. ಕೃಷ್ಣನಿಗೆ ಪರನಾರೀಸಂಗವನ್ನು ಹೇಳಿದರೆ ಅದು ವೇದ ವಿರುದ್ಧ. ಶ್ರೀಕೃಷ್ಣ ಗೋಕುಲದಲ್ಲಿ ಗೋಪಿಯರೊಂದಿಗೆ ಕ್ರೀಡಿಸಿದಾಗ ಅವನ ವಯಸ್ಸು ಇನ್ನೂ ಹತ್ತು ವರ್ಷದಾಟಿರಲಿಲ್ಲ.

ಹತ್ತು ವರುಷದ ಕೆಳಗೆ ಮಕ್ಕಳಾಟಿಕೆಯಲ್ಲಿ ।
ಚಿತ್ತ ಸ್ತ್ರೀಯರಿಗೆ ಎರಗುವುದೆ ॥

ಭಕ್ತಿಯಿಂದ ಪೂಜಿಸಿದ ಗೋಕುಲದ ಕನ್ಯೆಯರಿಗೆ ತನ್ನ ಮಹಾಮಹಿಮೆಯಿಂದ ಆನಂದ ನೀಡಿದನೆ ಹೊರತು ಲೋಕದಂತಲ್ಲ. ಅವನು ಸ್ತ್ರೀಲಂಪಟನಾಗಿದ್ದರೆ ಅವನ ಪಾದಜಲವಾದ ಗಂಗೆಗೆ ಪಾವಿತ್ರ್ಯ ಹೇಗೆ ಬಂತು? ಕೃಷ್ಣನು ದೋಷಿಯಾಗಿದ್ದರೆ ಸರ್ವರಾಜರ ಸಭೆಯೊಳಗೆ ಧರ್ಮರಾಯನು ಅಗ್ರಪೂಜೆಯನ್ನು ಏಕೆ ಸಲ್ಲಿಸುತ್ತಿದ್ದ-ಇತ್ಯಾದಿ ಭಾಗವತ ಕಥಾಂಶಗಳ ಪ್ರಬಲ ಪ್ರಮಾಣಗಳನ್ನು ಯುಕ್ತಿಯುಕ್ತವಾಗಿ ಮಂಡಿಸಿ ವಾಕ್ಯಾರ್ಥ ಮಾಡಿದ್ದಾರೆ.

ಎಂದ ಭಾಗವತದ ಚಂದದ ಮಾತನು ।
ಮಂದ ಮಾನವ ಮನಸಿಗೆ ॥
ತಂದುಕೊ ಜಗಕೆ ಕೈವಲ್ಯವೀವ ಮು ।
ಕುಂದಗೆ ಕುಂದು ಕೊರತೆ ಸಲ್ಲದು ॥



ಇಂತಹ ಶಾಸ್ತ್ರಾನುಸಾರಿ ಸಂಕಥನವು ಮೂಲವನ್ನು ವೃದ್ಧಿಸಿದೆ. ಇಲ್ಲಿಯ ಸೊಗಸಿಗಾಗಿ ಸಂಸ್ಕೃತದ ಘನವಿದ್ವಾಂಸರೂ ವಾದಿರಾಜರ ಈ ಕನ್ನಡ ಕೃತಿಯನ್ನು ಓದುತ್ತಾರೆ, ಪ್ರವಚನ ಮಾಡುತ್ತಾರೆ ಎಂಬುದನ್ನು ಗಮನಿಸಿದಾಗ ಇಲ್ಲಿಯ ವೃದ್ಧಿಯ ಮಹತ್ವವನ್ನು ತಿಳಿಯಬಹುದು.

ಪುರಂದರದಾಸರು ಈ ಕೆಳಗಿನ ಉಗಾಭೋಗದಲ್ಲಿ ಲಕ್ಷ್ಮೀ ಶೋಭಾನೆಯ ವಾಕ್ಯಾರ್ಥದ ವಸ್ತುವನ್ನು ಅಲ್ಲಿಯ ಸನ್ನಿವೇಶದಿಂದ ಹೊರತುಪಡಿಸಿ ಇತರ ದೇವತೆಗಳ ಕುಂದುಗಳನ್ನು ವಾಚ್ಯವಾಗಿ ಸಂಕ್ಷೇಪವಾಗಿ ಹೇಳುವ ಮೂಲಕ ವೃದ್ಧಿಸಿದ್ದಾರೆ.

ಬೆನಕನನೊಲ್ಲೆನವ್ವ । ತುಲಕಿ ಆಡುವನ ।
ಷಣ್ಮುಖನನೊಲ್ಲನವ್ವ । ಬಹು ಬಾಯಿಯವನ ।

ಇಂದ್ರನನೊಲ್ಲೆನವ್ವ । ಮೈಯಲ್ಲಿ ಕಣ್ಣಿನವನ ।
ಚಂದ್ರನನೊಲ್ಲೆನವ್ವ । ಕಳೆಗುಂದುವವನ ।

ರವಿಯನೊಲ್ಲೆನವ್ವ । ಉರಿದು ಮೂಡುವನ ।
ಹರನನೊಲ್ಲನವ್ವ । ಮರುಳಗೊಂಬುವನ ।

ಚೆನ್ನರಾಯ ಚೆಲುವ । ಜಗಕೆಲ್ಲ ಒಡೆಯನ ಕರೆದು ।
ತಾರೆ ಎನಗೆ ಪುರಂದರ ವಿಠಲನ ।

ಇಲ್ಲಿ ದಾಸರ ಪ್ರತಿಭೆ ಮಿಂಚಿದೆ. ಭಾಗವತದಲ್ಲಿ ದೇವತೆಗಳ 'ನಡತೆಯ ದೋಷ'ವನ್ನು ಹೇಳಿದ್ದರೆ, ಇಲ್ಲಿ ಹೊರರೂಪದ 'ದೈಹಿಕ ದೋಷ'ಗಳನ್ನು ಅಚ್ಚಗನ್ನಡದಲ್ಲಿ ಕಲಾತ್ಮಕವಾಗಿ ನಿರೂಪಿಸುವ ಮೂಲಕ ಹರಿಸರ್ವೋತ್ತಮತ್ವದ ಪ್ರಮೇಯವನ್ನು ವಾಕ್ಯಾರ್ಥದ ಮೂಲಕ ಮಂಡಿಸಿದ್ದಾರೆ.

ಇದುವರೆಗೆ ಸಂಕಥನದ 'ರೀತಿ ಆಧಾರಿತ' ಮಾದರಿಗಳನ್ನು ಗುರುತಿಸಿ ಚರ್ಚಿಸಿದ್ದಾಯಿತು. ಈಗ ಸಂಕಥನದ 'ಪ್ರವೃತ್ತಿ ಆಧಾರಿತ' ಮಾದರಿಗಳೆಂಬ ಮತ್ತೊಂದು ವಿಭಾಗವನ್ನು ಪರಿಚಯಿಸಿಕೊಳ್ಳಬಹುದು.

**೫.೨.೩. ಸಂಕಥನದ 'ಪ್ರವೃತ್ತಿ ಆಧಾರಿತ' ಮಾದರಿಗಳು**

ವರ್ಣನಾ ಪ್ರಕಾರಗಳಾದ 'ನಿಂದಾಸ್ತುತಿ' ಹಾಗೂ 'ಮುಂಡಿಗೆ'ಗಳು ಹರಿದಾಸ ಸಾಹಿತ್ಯದ ಎರಡು ಪ್ರಧಾನ ಪ್ರವೃತ್ತಿಯನ್ನು ಸೂಚಿಸುತ್ತವೆ. ಈವರೆಗೆ ನಡೆದ ಹರಿದಾಸ ಸಾಹಿತ್ಯಾಧ್ಯಯನದಲ್ಲಿ ವಿದ್ವಾಂಸರು ಈ ಎರಡು ಮಾದರಿಗಳನ್ನು ಸಾಕಷ್ಟು ವಿವರಿಸಿದ್ದಾರೆ. ಆದ್ದರಿಂದ ಇಲ್ಲಿ ಅವುಗಳ ಸ್ವರೂಪವನ್ನು ಸಂಕ್ಷಿಪ್ತವಾಗಿ ವಿವೇಚಿಸಲಾಗಿದೆ.

**೧. ನಿಂದಾಸ್ತುತಿ :** ಸಖ್ಯ ರೂಪದ ಹರಿಭಕ್ತಿಯಲ್ಲಿ ಭಗವಂತನೊಂದಿಗೆ ಆತ್ಮೀಯ ಸಲುಗೆಯನ್ನು ವಹಿಸಿ ಮಾತನಾಡಲು ಅವಕಾಶವಿದೆ. ಸಲುಗೆ ಇರುವಲ್ಲಿ, ಅಭಿವ್ಯಕ್ತಿಯ ಭಿನ್ನತೆಗಾಗಿ-ಮಹಿಮೆಗಳನ್ನು 'ದೋಷ'ವೆಂಬಂತೆ ವರ್ಣಿಸುವ, 'ಸಭ್ಯ' ಬೈಗುಳದ ರೂಪದಲ್ಲಿ ಸ್ತೋತ್ರ ಮಾಡುವ ಪ್ರವೃತ್ತಿ ದಾಸ ಸಾಹಿತ್ಯದಲ್ಲಿ ಕಂಡುಬರುತ್ತದೆ. ಇಂತಹ ಕಡೆಗಳಲ್ಲಿ 'ಮಹಿಮಾ ಸಂಕಥನ'ವೇ ಮುಖ್ಯ ಉದ್ದೇಶವಾಗಿರುತ್ತದೆ.

ಈ ಪ್ರಕಾರದ ರಚನೆಗಳನ್ನು(ಅವುಗಳ ಛಂದೋಪ್ರಕಾರ ಯಾವುದೇ ಆಗಿದ್ದರೂ) 'ನಿಂದಾಸ್ತುತಿ'[೧೦] ಅಥವಾ 'ವ್ಯಾಜಸ್ತುತಿ' ಎಂಬ ಹೆಸರಿನಿಂದ ಗುರುತಿಸುತ್ತಾರೆ. ಈ ತಂತ್ರವನ್ನು, ದಾಸರು ಭಾಗವತ ಸಂಕಥನಕ್ಕೆ ಬಳಸಿಕೊಂಡ ವಿಧಾನವನ್ನು ಶ್ರೀಪಾದರಾಜರ ಈ ಕೆಳಗಿನ ಕೀರ್ತನೆಯಲ್ಲಿ ನೋಡಬಹುದು.

ವಾಸುದೇವ ನಿನ್ನ ಮರ್ಮಕರ್ಮಗಳ । ದೇಶದೇಶದಲ್ಲಿ ಪ್ರಕಟಿಸಲೋ ।
ಬೇಸರದೆ ಎನ್ನ ಹೃದಯ ಕಮಲದಲ್ಲಿ । ವಾಸವಾಗಿ ಸುಮ್ಮನಿದ್ದೀಯೋ ॥
ತರಳತನದಲಿದ್ದು ದುರುಳನಾಗಿ ಬಂದು ಒರಳಿಗೆ ಕಟ್ಟಿಸಿಕೊಂಡುದನು ।
ತುರುವ ಕಾಯಲಿ ಹೋಗಿ ಕಲ್ಲಿಯೋಗರವನು। ಗೊಲ್ಲರ ಕೂಡೆ ನೀ ಉಂಡುವನು ।
ನೆರೆಮನೆ ಹೊರಮನೆಗಳ ಪೊಕ್ಕು ಬೆಣ್ಣೆಯ। ಅರಿಯದಂತೆ ಕದ್ದು ಮೆದ್ದುವನು ।
ಕೇಳಿಸಿದೆಯಾದರೆ ಒದರುವೆ ಎಲೊ ನರಹರಿಯೆನ್ನ ಬಾಯಿಗೆ ಬಂದುದನು ॥

ಸದಾ ಹೃತ್ಕಮಲವಾಸಿಯಾದ, ಆದ್ದರಿಂದಲೇ ವಾಸುದೇವನೆಂದು ಹೆಸರು ಪಡೆದ ಸ್ವಾಮಿಯ ಮಹಿಮೆಯನ್ನು ವಿವಿಧ ಪ್ರದೇಶಗಳಲ್ಲಿ ಪ್ರಕಟಿಸಲು ಅವನ ಅಪ್ಪಣೆಯನ್ನು ಬೇಡುವುದು ಈ ಕೀರ್ತನೆಯ 'ಪಲ್ಲವಿ' 'ಅನುಪಲ್ಲವಿ'ಗಳಲ್ಲಿ ಬಂದ ವಸ್ತುವಿನ ಮುಖ್ಯ ಉದ್ದೇಶ. ಆದರೆ 'ನೀನು ತೆಪ್ಪಗೆ ನನ್ನಲ್ಲಿ ಅಡಗಿ ಕುಳಿತುಕೊಳ್ಳುವೆಯೋ ಅಥವಾ ನಿನ್ನ ನಡೆ-ನುಡಿಗಳ ಗುಟ್ಟನ್ನು ರಟ್ಟು ಮಾಡಬೇಕೊ' ಎಂದು ಕೇಳುವ ರೀತಿಯಲ್ಲಿ ಸಂಯೋಜಿಸಿರುವುದೇ ನಿಂದಾಸ್ತುತಿಯ ಸತ್ವವಾಗಿದೆ. 'ನೀನು ಒರಳಿಗೆ ಕಟ್ಟಿಸಿಕೊಂಡ, ಗೊಲ್ಲರ ಕೂಡ ಉಂಡ, ಬೆಣ್ಣೆಯನ್ನು ಕದ್ದ, ವಿಷಯಗಳು ನನ್ನ ಕಿವಿಗೆ ಬಿದ್ದರೆ ನಾನು ಬಾಯಿಗೆ ಬಂದಂತೆ ಒದರಿಬಿಡುತ್ತೇನೆ' ಎಂಬ ಮಾತುಗಳಿಗೆ 'ನಿನ್ನ ಕೃಷ್ಣಾವತಾರದ ಮಹಿಮೆಗಳನ್ನು ಶ್ರವಣ ಮಾಡುವ ಭಾಗ್ಯವನ್ನು ಕರುಣಿಸಿದರೆ ನಾನು ಅವುಗಳನ್ನು ಯಥಾಶಕ್ತಿ-ಯಥಾಮತಿ ಕೀರ್ತಿಸುತ್ತೇನೆ' ಎಂಬ ನಿವೇದನೆಯೇ ತಾತ್ಪರ್ಯವಾಗಿದೆ. ಮುಂದುವರಿದು

ಪಿಡಿಯವಲಿಗೆ ಮೆಚ್ಚಿ ಸಂಪದವನು ಕೊಟ್ಟ
ಬೆಡಗತನವನಿಲ್ಲಿ ಹೇಳಲೋ। (ಸುಧಾಮಚರಿತ್ರೆ)
ಹಿಡಿಯ ಬಂದ ಕಾಲಯವನನಿಗಂಜಿ ಕಲ್ಲ
ಪಡೆಯ ಹೊದ್ದುದ ಹೇಳಲೋ । (ಕಾಲಯವನ ಸಂಹಾರ)
ಮಡಿದ ಮಗನ ಗುರುವಿಗೆ ಕೊಡಬೇಕೆಂಬ
ಸಡಗರತನವಿಲ್ಲಿ ಹೇಳಲೋ (ಸಾಂದೀಪಿನಿಗೆ)
ಮಡದಿ ಮಾತಿಗೆ ಪೋಗಿ ನೀ ಪಾರಿಜಾತವ
ತಡೆಯದೆ ತಂದಿದ್ದು ಹೇಳಲೋ ॥ (ಪಾರಿಜಾತಾ ಹರಣ)

ಧರಣಿ ಮಗನ ಕೊಂದು ತರುಣಿಯರನು ತಂದ
ದುರುಳತನವನಿಲ್ಲಿ ಹೇಳಲೋ ॥ (ನರಕಾಸುರವಧೆ)
ಜರೆಯುಮಗನಿಗಂಜಿ ಪುರವ ಬಿಟ್ಟು ಹೋಗಿ
ಶರಧಿಯ ಪೊಕ್ಕದ್ದು ಹೇಳಲೋ (ದ್ವಾರಕಾ ನಿರ್ಮಾಣ)

ಹೀಗೆ ಕೃಷ್ಣಾವತಾರದ ಕೆಲವು ಪ್ರಸಂಗಗಳನ್ನು ಉಲ್ಲೇಖಿಸುವ ಕ್ರಮ ಸ್ವಾರಸ್ಯಕರವಾಗಿದೆ.



ಇದರಂತೆಯೇ 'ನಿನ್ನಿಂದ ನಿನ್ನ ದಾಸರೆ ಮಿಗಿಲೋ ಕೃಷ್ಣ' ಎಂಬ ಕೀರ್ತನೆಯಲ್ಲಿ ವ್ಯಾಸರಾಯರು 'ಭಕ್ತರನ್ನು ಏರಿಸಿ, ಭಗವಂತನನ್ನು ಇಳಿಸುವ' ರೀತಿಯನ್ನು ಪ್ರಯೋಗಿಸಿದ್ದಾರೆ.

ತನ್ನ ಸತ್ಯಕ್ಕಾಗಿ ಸತ್ಯಕಾಮನೆಂಬ ನಿನ್ನ ಪ್ರತಿಜ್ಞೆಯ ಬಿಡಸದೆ ಭೀಷ್ಮನು ॥
ಮೂಲೋಕಪತಿಯೆಂಬ ನಿನ್ನ ಧರ್ಮರಾಯ ಕಾಲುತೊಳೆವ ಕೀಳು ಊಳಿಗಕಿಕ್ಕನೆ ॥
ಶ್ರೀಪತಿ ಭೂಪತಿ ಈ ಪೆಸರಿಸಲು ಗೋಪಾಂಗನೇಯರ ನೀ ಕೂಡಿದೆಯೋ ಕೃಷ್ಣ ॥

'ಭೀಷ್ಮನು ತನ್ನ ಸತ್ಯವ್ರತಕ್ಕಾಗಿ ಕೃಷ್ಣನ ಪ್ರತಿಜ್ಞೆಯನ್ನು ಮುರಿದದ್ದು, ಯುಧಿಷ್ಠಿರನು ರಾಜಸೂಯ ಯಾಗದಲ್ಲಿ ಕೃಷ್ಣನನ್ನು ಋಷಿಪುಂಗವರ ಪಾದಪ್ರಕ್ಷಾಳನೆಯ ಕೆಲಸಕ್ಕೆ ನೇಮಿಸಿದ್ದು, ಕೃಷ್ಣನು ತನಗೆ ಶ್ರೀದೇವಿ-ಭೂದೇವಿಯರೇ ಪತ್ನಿಯರಾಗಿದ್ದರೂ ಗೊಲ್ಲರ ಹೆಣ್ಣನ್ನು ಕೂಡಿದ್ದು-ಇವುಗಳನ್ನು ಕಂಡಾಗ 'ನಿನಗಿಂತ ನಿನ್ನ ದಾಸರೇ ದೊಡ್ಡವರು' ಎನಿಸುತ್ತದೆ ಎಂಬುದು ಇಲ್ಲಿನ ವಾಚ್ಯಾರ್ಥ. ಸೂಕ್ಷ್ಮವಾಗಿ ಗಮನಿಸಿದರೆ 'ನಿನ್ನ ಅನುಗ್ರಹದಿಂದಲೇ ನಿನ್ನ ದಾಸರು ದೊಡ್ಡವರಾಗಿದ್ದಾರೆ' ಎಂಬ 'ಧ್ವನಿ' ಕಂಡುಬರುತ್ತದೆ. 'ಸತ್ಯ-ಕಾಮ', 'ಮೂಲೋಕಪತಿ' ಮತ್ತು 'ಶ್ರೀಪತಿ-ಭೂಪತಿ' ಎಂಬ ಪದಗಳು ಪ್ರತೀಯಮಾನಾರ್ಥವನ್ನು ವ್ಯಂಜಿಸುತ್ತವೆ.

'ನಿನ್ನ ಅನುಗ್ರಹದಿಂದ ನಿನ್ನ ದಾಸರು ದೊಡ್ಡವರಾದರೇ ಹೊರತು, ಅವರ ಸ್ವಯಂ ಸಾಮರ್ಥ್ಯದಿಂದಲ್ಲ ಎಂಬುದು ಇಲ್ಲಿಯ ಪ್ರಮೇಯವಾಗಿದೆ.

ಪುರಂದರ ದಾಸರ ಈ ಕೆಳಗಿನ ಕೃತಿಗಳಲ್ಲಿ ನಿಂದಾಸ್ತುತಿಯು ತರಾಟೆಯ ತಾರಕಕ್ಕೇರಿದೆ.

ಆನೆಯನು ಕಾಯುವಾಗ ಜ್ಞಾನವಿದ್ದುದು ಏನು ।
ನಾನೀಗ ಕೂಗಲು ಕೇಳದಿದ್ದುದು ಏನು ।
ದಾನವಾಂತಕ ಹರಿ ದೀನರಕ್ಷಕನೆಂಬ ।
ಮಾನ ಉಳಿಸಿಕೊಳ್ಳೋ ಪುರಂದರ ವಿಠಲ ।

ಎಂಬ ಉಗಾಭೋಗದಲ್ಲಿ, ದೇವರು ನಿಷ್ಪಕ್ಷಪಾತಿಯಾದರೆ ದೀನ ರಕ್ಷಕನೆಂಬ ಬಿರುದನ್ನು ಉಳಿಸಿಕೊಳ್ಳಬೇಕಾದರೆ ತನ್ನನ್ನು ರಕ್ಷಿಸಬೇಕು ಎಂಬ ಆಗ್ರಹದ ಧೋರಣೆಯಿದೆ. ಅವರೇ

ತಾಯಿ ಗೋಪಿಯಂತೆ ನಿನ್ನ ಒರಳನೆಳಸಲಿಲ್ಲ
ವಾಲಿಯಂತೆ ಎದುರು ವಾದಿಸುತಿರಲಿಲ್ಲ
ಭೃಗುಮುನಿಯಂತೆ ನಿನ್ನ ಎದೆಯ ತುಳಿಯಲಿಲ್ಲ
ಭೀಷ್ಮನಂತೆ ನಿನ್ನ ಹಣೆ ಒಡೆಯಲಿಲ್ಲ
ಕೊಂಕಣದ ಎಮ್ಮೆಗೆ ಕೊಡತಿಯೇ ಮದ್ದೆಂದು
ಅವರೆ ಮದ್ದು ನಿನಗೆ ಪುರಂದರ ವಿಠಲ

ಎಂಬ ಮತ್ತೊಂದು ಉಗಾಭೋಗದಲ್ಲಿ ಭಕ್ತರು ಮತ್ತು ಭಗವಂತನ ಒಟ್ಟಾರೆ ಕ್ರಿಯೆಗಳನ್ನು 'ಅಪವ್ಯಾಖ್ಯಾನಿಸುತ್ತಿರುವರೋ' ಎನಿಸಬಹುದಾದ ಮಾದರಿಯಲ್ಲಿ ಭಾಗವತವನ್ನು ಸಂಕಥಿಸುವ ಮೂಲಕ ನಿಂದಾಸ್ತುತಿ ಗೈದಿದ್ದಾರೆ.

ಇದೇ ಭಾವವನ್ನು ಮತ್ತಷ್ಟು ವೃದ್ಧಿಸಿದ ಕೀರ್ತನೆಯು ಅರ್ಥಾಂತರ ಸಂಕ್ರಮಿತ ವಾಚ್ಯಧ್ವನಿಯ ಮೂಲಕ ಬಹುಕಾಲ ನೆನಪಿನಲ್ಲಿ ಉಳಿಯುವಂತಿದೆ. ಅಲ್ಲಿಯ ಕೆಲವು ಸಾಲುಗಳು ಹೀಗಿವೆ :

ಏನೆಂತೊಲಿದೆ ನಿನ್ನವರಂತೆ ಕೆಡುಬುದ್ಧಿ - ಎನ್ನೊಳಿಲ್ಲ ಗುಣ ।
ಹೀನರಲ್ಲದ ದೀನ ಜನರ ಪಾಲಿಪ ಬುದ್ಧಿ ನಿನ್ನೊಳಿಲ್ಲ ॥ಪ॥

ನಾರದನಂತೆ ಕಂಡವರ ಕೊಂಡೆಯವ ನಾ ಪೇಳಲಿಲ್ಲ ।
ಪರಾಶರನಂತೆ ನದಿಯೊಳಂಬಿಗರ ಹೆಣ್ಣ ಕೊಡಲಿಲ್ಲ ॥
ಆ ರುಕುಮಾಂಗದನಂತೆ ಸುತನ ಕೊಲ್ಲಲು ಧೃಢ ಮಾಡಲಿಲ್ಲ ।
ಮಾರುತನಂತೆ ನೀನುಣುತಿದ್ದ ಎಡೆಯ ಕೊಂಡೋಡಲಿಲ್ಲ ।
ವರ ಶೌನಕನಂತೆ ನಿತ್ಯ ಸೂತನ ಕಥೆ ಕೇಳಿಲಿಲ್ಲ ॥

ಭೃಗುಮುನಿಯಂತೆ ಗರ್ವದಿ ನಿನ್ನ ಎದೆಯನು ಒದೆಯಲಿಲ್ಲ ।
ಅಗಣಿತ ಮಹಿಮ ನೀನಹುದೆಂದು ಧ್ರುವನಂತೆ ಪೊಗಳಲಿಲ್ಲ ॥
ಖಗರಾಜನಂತೆ ನಿನ್ನನು ಪೊತ್ತು ಗಗನದಿ ತಿರುಗಲಿಲ್ಲ ।
ಅಗಜೆಯರಸನಂತೆ ಮಸಣದಿ ರಾಮನ ಸ್ಮರಿಸಲಿಲ್ಲ ॥

ವಿದುರನಂತೆ ನನ್ನ ಸದನವ ಮುರಿದು ನಾ ಕುಣಿಯಲಿಲ್ಲ ।
ಇವರಂತೆ ಪುರಂದರ ವಿಠಲ ನಿನ್ನಯ ಕೃಪೆಯೆನ್ನೊಳಿಲ್ಲ ॥

ವಾದಿರಾಜರು ಮತ್ತು ಕನಕದಾಸರು ನಿಂದಾಸ್ತುತಿಯ ಸಾಧ್ಯತೆಯನ್ನು ಸಾಕಷ್ಟು ದುಡಿಸಿಕೊಂಡಿದ್ದಾರೆ. ದಶವತಾರ ವರ್ಣನೆಯ ಈ ಭಾಗಗಳು ಅವರ ಚಿತ್ರಕಶಕ್ತಿಯನ್ನು ಮನವರಿಕೆ ಮಾಡಿಕೊಡುತ್ತವೆ.

ಗುಪ್ಪುನಾರುವ ಮೈಯ್ಯಿ ಬಿಟ್ಟಿದ್ದ ಬಿರುಗಣ್ಣು । (ಮತ್ಸ್ಯ)
ಮುಟ್ಟಿ ನೋಡಿದರೆ ಮೈಯ್ಯತಿ ಕಠಿಣವು ॥ (ಕೂರ್ಮ)
ಸೊಟ್ಟ ಮೋರೆಯು ಇವಗೆ ಎಷ್ಟುದ್ದ ಹಲ್ಲುಗಳು । (ವರಾಹ)
ಇಷ್ಟು ಘೋರಮುಖದಳಿಯನೆಲ್ಲಿ ದೊರಕಿದನೊ ॥ (ನರಸಿಂಹ)
ಹ್ಯಾಂಗೆ ಕೊಟ್ಟನು ಹೆಣ್ಣ ಸಾಗರನು ಈವರಗೆ ।

- (ವಾದಿರಾಜರು)

ಇಲ್ಲಿಯ ಅಭಿವ್ಯಕ್ತಿ ಕೌಶಲವನ್ನು ಕಂಡಾಗ 'ಕನ್ನಡ ಭಾಷೆಯ ಸತ್ವವನ್ನು ದುಡಿಸಿಕೊಂಡ ಕೀರ್ತನಕಾರರಲ್ಲಿ ವಾದಿರಾಜರ ಸಾಧನೆ ಗಣನೀಯವಾದುದು' ಎನಿಸುತ್ತದೆ. 'ಹರಿದಾಸ ಸಾಹಿತ್ಯ ಸಾರ' ಗ್ರಂಥದಲ್ಲಿ ಈ ಅಂಶವನ್ನು ಗುರುತಿಸಲಾಗಿದೆ:

"ಶ್ರೀವಾದಿರಾಜರ ಕೀರ್ತನ ಸಾಮ್ರಾಜ್ಯ ಸಾಕಷ್ಟು ವಿಶಾಲವಾದದ್ದು. ಅವರು ಶ್ರೀವಿಷ್ಣುವಿನ ದಶಾವತಾರಗಳನ್ನು ವಿವಿಧ ರೀತಿಯಾಗಿ ವರ್ಣಿಸಿರುತ್ತಾರೆ. ಪ್ರತಿಯೊಂದು ರಚನೆಯಲ್ಲಿಯೂ ವಾದಿರಾಜರ ವಾಗ್ವಿಲಾಸವನ್ನು ಮನಗಾಣಬಹುದು"(ವರದರಾಜರಾವ್ ಜಿ., ೧೯೮೭:೨೦).

ಕನಕದಾಸರ ಕೀರ್ತನೆಯಲ್ಲಿ ನಿಂದಾಸ್ತುತಿ ರೂಪದ ದಶಾವತಾರ ವರ್ಣನೆಯ ಕೆಲವು ಸಾಲುಗಳು ಹೀಗಿವೆ :

ಧರೆಯ ದಾನವ ಬೇಡಿ ನೆಲನ ಈರಡಿ ಮಾಡಿ । (ವಾಮನ)
ಪರಶು ಪಿಡಿದು ಕ್ಷತ್ರಿಯರ ಸವರಿ ॥ (ಪರಶುರಾಮ)
ಚರಣದಿ ಪಾಷಾಣ ಪೆಣ್ಣು ಮಾಡಿದ ಪುಣ್ಯ । (ರಾಮ)
ಚರಿತ ಯಾದವ ಪತಿ ಶರಣೆಂದೆನಲ್ಲದೆ ॥ (ಕೃಷ್ಣ)
ತಿರುಕ ಹಾರುವನೆಂದೆನೆ - ಹೆತ್ತ ತಾಯ । (ವಾಮನ)
ಶಿರವ ಕಡಿದವನೆಂದೆನೆ - ವನವಾಸಕೆ ॥ (ಪರಶುರಾಮ)
ಭರದಿ ಚರಿಸಿದನೆಂದೆನೆ - ಪೂತನಿಯನು । (ರಾಮ)
ಸರಕು ಮಾಡದೆ ಕೊಂದ ಹರಿಯೆಂದೆನಲ್ಲದೆ ॥ (ಕೃಷ್ಣ)

ಚಿತ್ತಜ ಕೋಟಿ ಲಾವಣ್ಯ ಮುಪ್ಪುರದ । (ಬುದ್ಧ)
ಉತ್ತಮ ಸ್ತ್ರೀಯರ ವ್ರತವಳಿದು ॥
ಮತ್ತೆ ಕಲ್ಕಿಯಾಗಿ ಮಧುಪರ ಮುಡುಹಿದ ॥ (ಕಲ್ಕಿ)
ಹತ್ತವತಾರದ ಹರಿಯೆಂದೆನಲ್ಲದೆ ॥
ಬತ್ತಲೆ ನಿಂದವನೆಂದೆನೆ - ತೇಜಿಯನೇರಿ । (ಬುದ್ಧ)
ಒತ್ತಿ ನಡೆದವನೆಂದೆನೆ - ಬಾರಿ ಬಾರಿಗೆ ।
ಸತ್ತು ಹುಟ್ಟುವನೆಂದೆನೆ - ಆದಿಕೇಶವ । (ಕಲ್ಕಿ)
ಭಕ್ತವತ್ಸಲನೆಂದು ಪೊಗಳಿದೆನಲ್ಲದೆ ॥
(ನಿನ್ನನಾನೇನೆಂದೆನೋ - ರಂಗಯ್ಯರಂಗ)

ಇಲ್ಲಿ ಕನಕದಾಸರು 'ಏನೂ ಅಂದಿಲ್ಲ' ಎನ್ನುತ್ತಲೇ 'ಅನ್ನಬಾರದಿತ್ತೆನೋ' ಎನಿಸುವ ರೀತಿಯಲ್ಲಿ 'ಅನ್ನಬಹುದಾದ' ನಿಂದಾಸ್ತುತಿಯನ್ನು ಕೈಗೊಂಡಿದ್ದಾರೆ. ದಶಾವತಾರಗಳು ಮನುಷ್ಯರ ಜನ್ಮಾಂತರದಂತೆ ಬಾರಬಾರಿಗೆ ಸತ್ತುಹುಟ್ಟುವ ಕ್ರಿಯೆಗಳಲ್ಲ, ಭಕ್ತವಾತ್ಸಲ್ಯಕ್ಕಾಗಿ ಭಗವಂತನು ಪ್ರಕಟಗೊಳ್ಳುವ ರೂಪಗಳವು ಎಂಬ 'ದರ್ಶನ'ವನ್ನು ಇಲ್ಲಿ ಕಾಣಬಹುದು.

ಸ್ತುತಿಗಿಂತ ನಿಂದೆಯನ್ನು ಕೇಳುವುದೆಂದರೆ ಎಂತಹವರ ಕಿವಿಗಳೂ ನೆಟ್ಟಗಾಗುತ್ತವೆ. ಮಾನವ ಸ್ವಭಾವದ ಈ ಸಹಜ ದೌರ್ಬಲ್ಯವನ್ನು ಹರಿದಾಸರ ನಿಂದಾಸ್ತುತಿಗಳು ಸದುಪಯೋಗ ಮಾಡಿಕೊಂಡಿವೆ. ಇದೊಂದು ಅತ್ಯಂತ ಜನಪ್ರಿಯ ಪ್ರಕಾರವಾಗಿದೆ.

**೨. ಮುಂಡಿಗೆ :** 'ಒಗಟು' ಒಂದು ಅನಾದಿಯಾದ ಜಾನಪದ ಪ್ರಕಾರವಾಗಿದೆ. ಶಿಷ್ಟ ಸಾಹಿತ್ಯವು ಜನಪದರ ಅಭಿವ್ಯಕ್ತಿ ತಂತ್ರಗಳನ್ನು ಋಣ-ವೃದ್ಧಿ ಕ್ರಮದಲ್ಲಿ ದುಡಿಸಿಕೊಂಡಿರುವುದನ್ನು ಎಲ್ಲೆಲ್ಲೂ ಗುರುತಿಸಬಹುದು. ಅಲ್ಲಮನ ಬೆಡಗಿನ ವಚನಗಳಲ್ಲಿ, ದಾಸರ ಮುಂಡಿಗೆಗಳಲ್ಲಿ ಇರುವುದು ಒಗಟೇ ಹೊರತು ಬೇರೇನಲ್ಲ. ಬುದ್ಧಿಗೆ ಸ್ವಲ್ಪ ಕೆಲಸ ಕೊಡುವ, ಆ ಮೂಲಕ ರೋಚಕವೆನಿಸುವ ನಿರೂಪಣಾ ವಿಧಾನವನ್ನು (ಛಂದೋ ಪ್ರಕಾರದ ಭೇದವಿಲ್ಲದೆ) 'ಮುಂಡಿಗೆ'ಗಳು ಎಂದು ಕರೆಯುತ್ತೇವೆ. ಕನಕ-ಪುರಂದರರಲ್ಲಿ ಇವುಗಳ ಬಳಕೆಯನ್ನು ಗುರುತಿಸಬಹುದು.

'ಬೊಮ್ಮ ಮೂರುತಿಗೆಲ್ಲಿ ಬಂಧು ಬಳಗ?' ಎಂದು ಪ್ರಶ್ನಿಸಿಕೊಂಡು 'ಭಗವಂತನಿಗೆ ಮಾನವ ಸಂಬಂಧಗಳ ವಾವೆ-ವರಸೆಗಳು ಅನ್ವಯಿಸುವುದಿಲ್ಲ'ವೆಂದು ಹೇಳುವಾಗ ಪುರಂದರದಾಸರು ರಚಿಸಿದ ಮುಂಡಿಗೆ ಹೀಗಿದೆ:

ವಾವೆಯೆಲ್ಲಿಹುದಯ್ಯ ವೈಕುಂಠಪತಿಗೆ ।
ದೇವ ಭಾರ್ಗವನಾಗಿ ಮಾತೆಯ ಶಿರವ ಕಡಿದ ‖ ಪ ‖
ಒಬ್ಬ ಮಾವನ ಕೊಂದ, ಒಬ್ಬ ಮಾವನನೆಸೆದ ।
ಒಬ್ಬ ಮಾವನ ಕೂಡೆ ಕಡಿದಾಡಿದ ‖
ಒಬ್ಬ ಭಾವನ ಹಿಡಿದು ಹೆಡಗೈಯ ಕಟ್ಟಿದನು ।
ಒಬ್ಬ ಭಾವಗೆ ಬಂಡಿ ಬೋವನಾದ ‖

ಪರಶುರಾಮಾವತಾರದಲ್ಲಿ ತಾಯಿಯ ಚಂಡಾಡಿದ ಇವನಿಗೆ ಮಾನವ ರೀತಿಯ ಸಂಬಂಧಗಳ ನಿರ್ಬಂಧವಿಲ್ಲ. 'ಕಂಸ'ನನ್ನು ಕೊಂದ, ಸಮುದ್ರರಾಜನಿಗೆ ಬಾಣವನ್ನು ಎಸೆದ, ಜಾಂಬವಂತನ ಕೂಡ ಯುದ್ಧ ಮಾಡಿದ. ಆದರೆ ಅವರೆಲ್ಲರು ಮಾವಂದಿರಾಗಬೇಕಲ್ಲವೆ? ರುಕ್ಮಿಣಿಯ ಅಣ್ಣನಾದ ರುಕ್ಮಿಯನ್ನು ಸೆರೆಹಿಡಿದ ಅರ್ಜುನನಿಗೆ ಸಾರಥಿಯಾದ-ಈ ಇಬ್ಬರೂ ಅವನಿಗೆ ಭಾವಂದಿರಾಗಬೇಕು. ಆದರೆ ಮಾವ-ಭಾವ ಎಂಬ ವಾವೆಯನ್ನು ನೋಡದೆ ದುಷ್ಟಶಿಕ್ಷಕ - ಭಕ್ತಪರಿಪಾಲಕನಾಗಿರುವುದೇ ಶ್ರೀಹರಿಯ ವೈಶಿಷ್ಟ್ಯವಾಗಿದೆ ಎಂಬುದನ್ನು ಚಮತ್ಕಾರವಾಗಿ ಹೇಳಿದ್ದಾರೆ. ಅದರಂತೆಯೇ

ಕುಂಭಿನಿಗೆ ಪತಿಯಾದ ಕುಂಭಿನಿಗಳಿಯನಾದ ।
ಕುಂಭಿನೀಪತಿಯ ಸಂಹಾರ ಮಾಡಿದ ‖
ಅಂಬುಧಿಗೆ ಪಿತನಾದ ಅಂಬುಜೆಗೆ ಪತಿಯಾದ ।
ಅಂಬುಜಾಸನಗೆ ತಾ ಸ್ವಾಮಿಯಾದ

ಎಂಬಲ್ಲಿ 'ವರಾಹ ರೂಪದಲ್ಲಿ ಭೂದೇವಿ ಇವನ ಮಡದಿ. ರಾಮರೂಪದಲ್ಲಿ ಭೂದೇವಿ ಇವನ ಅತ್ತೆ. ಭೂಪತಿ(ಅತ್ತೆಯ ಗಂಡ)ಗಳೆಂದು ಬೀಗುತ್ತಿದ್ದ ರಾವಣ, ಕಾರ್ತವೀರ್ಯ ಮೊದಲಾದ ರಾಜರನ್ನು ಕೊಂದು ಹಾಕಿದ. ಬ್ರಹ್ಮನಿಗೆ ತಂದೆಯಾದ. ಲಕ್ಷ್ಮಿಗೆ ಪತಿಯಾದ, ಬ್ರಹ್ಮನಿಗೆ ಒಡೆಯನಾದ ಮಹಾಮಹಿಮನಿಗೆ ಯಾವ ವಾವೆಯನ್ನು ಹೇಳಲಾದೀತು! ಎಂಬುದೇ ಇಲ್ಲಿಯ ಮುಖ್ಯಾಂಶ ಇದು 'ಸಂಬಂಧವಾಚಕ' ಮುಂಡಿಗೆ.

ಮಗುವಿನ ಮರುಳಿದು ಬಿಡದಲ್ಲ - ಈ ‖ ಪ ‖
ಜಗದೊಳು ಪಂಡಿತರಿದ ಬಿಡಿಸಿ ‖ ಅ ‖

ಎಂಬ ಕೀರ್ತನೆಯಲ್ಲಿ 'ಮರುಳು ಮಗುವಿನ ರೂಪಕ'ದಲ್ಲಿ ಹರಿಯ ದಶವತಾರಗಳ ಲೀಲೆಗಳನ್ನು ಚಿತ್ರಿಸಲಾಗಿದೆ. ಹುಚ್ಚು ಮಗುವಿನ ಅವಾಂತರ ಕೆಲಸಗಳನ್ನು ನೆರೆಹೊರೆಯವರಿಗೆ ಹೇಳಿಕೊಂಡು. ಇದನ್ನು ಅಂಕೆಯಲ್ಲಿಟ್ಟುಕೊಂಡು ಸುಧಾರಿಸುವ ಬಗೆ ಹೇಗೆ? ಎಂದು ತಂದೆ ತಾಯಿಗಳು ತಮ್ಮ ತಲೆ ನೋವನ್ನು ತೋಡಿಕೊಳ್ಳುವ ತಂತ್ರವನ್ನಿಲ್ಲಿ ಕನಕದಾಸರು ಬಳಸಿಕೊಂಡಿದ್ದಾರೆ.



ನೀರನು ಕಂಡರೆ ಮುಳುಗುತಿದೆ
ತನ್ನ ಮೋರೆಯ ತೋರದೆ ಆಡುತಿದೆ ।
ಧಾರಿಣಿ ಹಲ್ಲಲಿ ಎಳೆಯುತಿದೆ ದೊಡ್ಡ
ಭೈರವಾಕಾರದಿ ಕೂಗುತಿದೆ ॥

ಎಂಬಲ್ಲಿ ಕ್ರಮವಾಗಿ ಮತ್ಸ್ಯ, ಕೂರ್ಮ, ವರಾಹ ನರಸಿಂಹಾವತಾರದ ಕ್ರಿಯೆಗಳನ್ನು, ಹುಚ್ಚ ಮಗುವಿನ ವರ್ತನೆಯೊಂದಿಗೆ ಸಮೀಕರಿಸಲಾಗಿದೆ. ಮುಂದಿನ ನುಡಿಯಲ್ಲಿ 'ಚೆಲ್ವ ಮಡದಿಯರನು ಹಿಡಿಯುತಿದೆ' ಎಂದು ಕೃಷ್ಣಾವತಾರವನ್ನೂ, 'ಉಟ್ಟಿದ್ದ ವಸ್ತ್ರವ ಬಿಸುಡುತಿದೆ' ಎಂದು ಬೌದ್ಧಾವತಾರವನ್ನೂ ಹೇಳಿರುವುದು ಹೊಸ ಪ್ರಯತ್ನವಾಗಿದೆ. ಭಾಗವತದ ಕೆಲವು ಪ್ರಸಂಗಗಳನ್ನು ಸಂಕಥಿಸುವಾಗ ಇಂತಹ ವಿನೂತನ ಪರಿಕ್ರಮಗಳು ಅಗತ್ಯವಾಗುತ್ತವೆ. ಇದು 'ಕ್ರಿಯಾಚಿಂತನೆ'ಯನ್ನು ಆಧರಿಸಿದ ಮುಂಡಿಗೆಯಾಗಿದೆ. ಒಂದು ಸುಳಾದಿಯ ಭಾಗವಾದ ಈ ಸಾಲುಗಳಲ್ಲಿ ಕೃಷ್ಣನು ಮಧುರೆಯಲ್ಲಿ ನಡೆಸಿದ ಚಟುವಟಿಕೆಗಳನ್ನು ಒಗಟಿನ ರೂಪದಲ್ಲಿ ಹೇಳಿದ್ದಾರೆ.

ಆರ ಮಡಿಯನುಟ್ಟೆ ಆರ ಗಂಧವನಿಟ್ಟೆ ।
ಆರ ಪೂಗಳ ಮುಡಿದೆ ಆರ ರಾಜ್ಯವ ।
ನಾರಿಗಿತ್ತು ಮೆರೆದೆ ದೇವ ಆರ ಪೂಗಳ ಮುಡಿದೆ ।
ಬಲ್ಲಿದರಿಗೆ ಬಟ್ಟಿಸೆ ಸಾರವೆಂಬತೆ ಉಮ್ಮ ।
ತ್ತೂರ ಅಜನಯ್ಯ ಪುರಂದರ ವಿಠಲ

ಎಂಬಲ್ಲಿ 'ಕೃಷ್ಣನು ಕಂಸಸೇವಕನಾದ ರಜಕನನ್ನು ಕೊಂದು ಅವನು ಒಯ್ಯುತ್ತಿದ್ದ ಮಡಿಯನ್ನುಟ್ಟನು. ಕುಬ್ಜೆಯ ಗಂಧವನ್ನು ಸ್ವೀಕರಿಸಿದನು. ಸುಧಾಮನೆಂಬ ಮಾಲೆಕಾರನು ಕೊಟ್ಟ ಹೂಗಳನ್ನು ಮುಡಿದನು. ಕಂಸನ ರಾಜ್ಯವನ್ನು ಉಗ್ರಸೇನನಿಗೆ ಕೊಟ್ಟನು ಅಥವಾ ಉಗ್ರಸೇನನ ರಾಜ್ಯವನ್ನು ಉಗ್ರಸೇನನಿಗೆ ಕೊಟ್ಟನು ಅಥವಾ ಕಂಸವಧೆಯಿಂದ ತಾನು ಗಳಿಸಿದ ತನ್ನ ರಾಜ್ಯವನ್ನು ಉಗ್ರಸೇನನಿಗೆ ಕೊಟ್ಟನು. ದೇವತೆಗಳು ಸುರಿಸಿದ ಪುಷ್ಪವೃಷ್ಟಿಯನ್ನು ಸ್ವೀಕರಿಸಿದನು. ಈ ಗುಟ್ಟುಗಳು ಬಲ್ಲವರಿಗೆ ಮಾತ್ರ ಸಾರವತ್ತಾಗಿ ಕಾಣುತ್ತವೆ' ಎಂಬ ಅರ್ಥ ಕಂಡುಬರುತ್ತದೆ. 'ಆರ ರಾಜ್ಯವನಾರಿಗಿತ್ತು ಮೆರೆದೆ' ಎಂಬ ಸಾಲಿಗೆ ಮೂರು ಅರ್ಥಗಳನ್ನು ಹೇಳಬಹುದೆಂದು ನೋಡಿದೆವು. ಒಂದು ಒಗಟಿಗೆ ಒಂದೇ ಉತ್ತರಬೇಕು ಅನೇಕ ಉತ್ತರಗಳಾದರೆ ಅವುಗಳಲ್ಲಿ ಒಂದನ್ನು ಮಾತ್ರ ಸರಿಯೆಂದು ಉಳಿದ ಉತ್ತರಗಳನ್ನು ಹೊಂದುವಂತಿದ್ದರೂ ನಿರಾಕರಿಸುತ್ತೇವೆ. ಆದರೆ ಮುಂಡಿಗೆಯಲ್ಲಿ ಔಚಿತ್ಯಪೂರ್ಣವಾದ ಬಹು ಉತ್ತರಗಳನ್ನು ಸ್ವೀಕರಿಸುವ ಕ್ರಮ ನಡೆದುಬಂದಿದೆ. ಅಂದರೆ ವಿಭಿನ್ನ ಅರ್ಥ ಸಾಧ್ಯತೆಯು ಒಗಟಿನಲ್ಲಿ 'ಮಿತಿ' ಎನಿಸಿದರೆ ಮುಂಡಿಗೆಯಲ್ಲಿ 'ಮಹತ್ವ' ಎನಿಸುತ್ತದೆ. ಈ ಕಾರಣದಿಂದ ಮುಂಡಿಗೆಯು 'ಒಗಟು' ಎಂಬ ಪ್ರಕಾರಕ್ಕೆ ಋಣಿಯಾಗಿರುತ್ತಲೇ ಅದರ ವ್ಯಾಪ್ತಿಯನ್ನು ವೃದ್ಧಿಗೊಳಿಸಿದೆ ಎಂದು ಹೇಳಬಹುದು.

ಪುರಾಣದ ವಿವಿಧ ಪಾತ್ರಗಳ ನಾಮ-ರೂಪ ಗುಣ-ಕ್ರಿಯೆಗಳ ತಿಳುವಳಿಕೆಯಲ್ಲಿ ನಿಪುಣರಾದವರಿಗೂ ನಿಕಷವನ್ನೊಡ್ಡುವಂತಹ ಮುಂಡಿಗೆಗಳನ್ನು ಕನಕದಾಸರು ರಚಿಸಿದ್ದಾರೆ.

'ಈತನೀಗ ವಾಸುದೇವನು', 'ಹರಿಮುಖಿ ಹರಿವಾಣಿ' ಮುಂತಾದ ಅನೇಕ ಪ್ರೌಢ ರಚನೆಗಳಿಂದ ಖ್ಯಾತರಾದ ಇವರ ಬಗ್ಗೆ 'ಕನಕನ್ನ ಕೆಣಕಬ್ಯಾಡ - ಕೆಣಕಿ ತಿಣುಕಬ್ಯಾಡ' ಎಂದು ಗುರುವ್ಯಾಸರಾಯರು ಉದ್ಗಾರವೆತ್ತಿದರಂತೆ ! ಈ ಪ್ರಶಂಸೆಗೆ ಅರ್ಹವೆನಿಸುವ ಕನಕದಾಸರ ಒಂದು 'ಸರಳ' ಮುಂಡಿಗೆ ಹೀಗಿದೆ:

ಶೇಷಶಯನ ನಿನ್ನ ಪರಮ ಭಾಗವತರ ಸಹ |
ವಾಸದೊಳಿರಿಸು ಕಂಡ್ಯ ಎನ್ನನು ‖
ತಂದೆಯೊಡಲನು ಸೀಳಿಸಿದವರೊಳು | (ಪ್ರಹ್ಲಾದ)
ದೇವೇಂದ್ರನ ತಲೆಗೆ ತಂದವರೊಳು ‖ (ನಾರದ)
ದುರ್ಗಂಧ ಪೆಣ್ಣಿಗೆ ಚಂದನದ ಕಂಪನಿತ್ತಂಥ | (ಪರಾಶರ)
ಬಾಂಧವರೊಳಗಿರಿಸು ಕಂಡ್ಯ ಎನ್ನನು ‖ (ವ್ಯಾಸ)
ಗಿಳಿನಾಯಿ ಪೆಸರಿನವರೊಳು, | (ಶುಕ-ಶೌನಕ)
ಮುಗಿಲ ಹೊಳೆಯ ಹೊಟ್ಟೆಲಿ ಹುಟ್ಟಿದವರೊಳು ‖ (ಭೀಷ್ಮ)
ಕೆಳದಿಯ ಜರಿದು ಶ್ರೀಹರಿದಿನಗೆದ್ದಂಥ | (ರುಕ್ಮಾಂಗದ)
ಹಳಬರೊಳಿರಿಸು ಕಂಡ್ಯ ಎನ್ನನು ‖ (ಭಾಗವತ ಪುರಾಣದ ಭಕ್ತರು)

ಈ ಸಾಲುಗಳು ಕನಕದಾಸರ ಬಗ್ಗೆ ವ್ಯಾಸರಾಯರು ಹೇಳಿದ ಮಾತನ್ನು ಪುಷ್ಟೀಕರಿಸುತ್ತವೆ. ಹೀಗೆ ಹರಿದಾಸರ ಭಾಗವತ ಸಂಕಥನಕ್ಕೆ ನಿಂದಾಸ್ತುತಿ ಮತ್ತು ಮುಂಡಿಗೆ ಎಂಬ ಈ ಎರಡು ವಿಶಿಷ್ಟ ಪ್ರಕಾರಗಳಿಂದ ತುಂಬ ಉಪಕಾರವಾಗಿದೆ. ಹರಿದಾಸ ಸಾಹಿತ್ಯವು ಸಹೃದಯತೆಯನ್ನು ನಿರ್ಮಿಸಿದ ಸದ್ದಿಲ್ಲದ ಆಂದೋಲನ. ಇದೇ ದಾಸರ ಕೃತಿಗಳ ಸತ್ವವನ್ನು ಗ್ರಹಿಸುವ ಕ್ರಮವೆನಿಸುತ್ತದೆ.

**ಕೊನೆ ಟಿಪ್ಪಣಿಗಳು**

೧. ಈ ಅಧ್ಯಾಯದ ತಾತ್ವಿಕತೆಯನ್ನು ರೂಪಿಸಿಕೊಳ್ಳುವಾಗ ಡಾ.ಸಿ.ಎನ್.ರಾಮಚಂದ್ರನ್ ಅವರ 'ಸಾಹಿತ್ಯ ವಿಮರ್ಶೆ' ಎಂಬ ಗ್ರಂಥದ 'ಕಥನ ಶಾಸ್ತ್ರ' ಎಂಬ ಅಧ್ಯಾಯವನ್ನು ಆಧರಿಸಿದೆ.

೨. ಹರಿದಾಸರ 'ಉಪಾಖ್ಯಾನ ಕಥನ' ವಿಧಾನದ ರಚನೆಗಳ ಕೆಲವು ವಿವರಗಳಿಗಾಗಿ ಅನುಬಂಧ : ೨ನ್ನು ನೋಡಬಹುದು.

೩. ಇದುವರೆಗೆ ತಿಳಿದಮಟ್ಟಿಗೆ 'ಶ್ರೀಕೃಷ್ಣಬಾಲಲೀಲೆ'ಯ ಈ ಮಾದರಿ ಹರಿದಾಸ ಸಾಹಿತ್ಯದಲ್ಲೇ ವಿಶಿಷ್ಟವಾದುದು. ಅನಂತರದ ಘಟ್ಟದಲ್ಲಿ ಬಂದ ಪ್ರಸನ್ನ ವೆಂಕಟದಾಸರ ಭಾಗವತವು 'ರೂಪಾಂತರ'ವಾಗಿದೆ. ಚಾಟುವಿಠಲನಾಥನ ಭಾಗವತವು ರೂಪಾಂತರಕ್ಕಿಂತ ಉತ್ತಮ 'ಭಾಷಾಂತರ'ವಾಗಿದೆ.(ಭಾಷಾಂತರವೆಂದ ಮಾತ್ರಕ್ಕೆ ಅದರ ಪ್ರಾಮುಖ್ಯತೆ ಕುಂದುವುದಿಲ್ಲ. ಹನ್ನೆರಡು ಸ್ಕಂಧಗಳ ವಿಸ್ತೃತ ಪುರಾಣ ಕಾವ್ಯವನ್ನು ಇಡಿಯಾಗಿ ಹಿಡಿದಿಟ್ಟ

ತಪಸ್ವಿಯವನು. ಚಾಟುವಿಠಲನಾಥನ 'ಕನ್ನಡ ಭಾಗವತವು' ಯಕ್ಷಗಾನ ಪ್ರಸಂಗಗಳ ರಚನೆಗೆ ಇಂದಿಗೂ 'ಸಿದ್ಧಾನ್ನ'ದಂತಿದೆ. ಡಾ.ಪಾದೇಕಲ್ಲು ವಿಷ್ಣುಭಟ್ಟರು 'ಯಕ್ಷಗಾನ ಭಾಗವತ ಪ್ರಸಂಗಗಳು' ಎಂಬ ಸಂಶೋಧನ ಮಹಾಪ್ರಬಂಧದಲ್ಲಿ ಈ ಮಹತ್ವದ ಅಂಶವನ್ನು ಗುರುತಿಸಿದ್ದಾರೆ.) ಹರಿದಾಸರ ಇತರ ಯಾವುದೇ ರಚನೆಗಳು ಇಷ್ಟೊಂದು ಸುದೀರ್ಘ 'ಸಾರಕಥನ'ಕ್ಕೆ ತೊಡಗಿರುವುದಿಲ್ಲ.

೪. ಇದು 'ನ್ಯಾಮತಿ' ಇರಬಹುದು. ಶ್ರೀಪಾದರಾಜರು ಅಲ್ಲಿಗೆ ಹೋದಾಗ ಅಲ್ಲಿಯ ಕ್ಷೇತ್ರಮೂರ್ತಿಯ ಮಹಿಮಾ ವರ್ಣನೆಗಾಗಿ ಈ ದಂಡಕ ರಚಿಸಿರಬಹುದು ಇತ್ಯಾದಿ ಊಹೆಗಳನ್ನು ಮಾಡಿದೆ.

೫. ದಾಸರ ಹಾಡುಗಳನ್ನು ಅನಕ್ಷರಸ್ಥರಾದ ಆಸಕ್ತರು ಮೌಖಿಕವಾಗಿ ಹಾಡುವಾಗಿ ಬಹುಬಳಕೆಯ ಫಲವಾಗಿ ಕಾಲಕ್ರಮದಲ್ಲಿ ಆ ಕೃತಿಯು ಮೂಲವನ್ನು ಊಹಿಸಲಾರದಷ್ಟು ಸವೆಯುತ್ತದೆ. ಇಂತಹ 'ಸವಕಳಿ'ಗೆ ಒಂದು ನಿದರ್ಶನ ಹೀಗಿದೆ.

### ಶ್ರೀ ಪ್ರಹ್ಲಾದ ಚರಿತ್ರ

ಜಯ ವಿಜಯರು ವೈಕುಂಟದ ಬಾಗಿಲು ಕಾಯುವರು ಸನಕನಂದರ ಶಾಪ| ಹಿರಣ್ಯಕರೆನಿಸಿದರು ದಿತಿ ಗರ್ಭದಲಿ ಹಿರಣ್ಯಕಗೆ ತಾಯಿ ತತ್ತ್ವ | ದೃಡತಪಸ್ಸಿಗೆ ತೆರಳಿದನು. ಹತ್ತು ಸಾವಿರ ವರುಷ ಮಾಡಿದ ಉಗ್ರ ತಪಸ್ಸು| ನಾನಾ ವೃಕ್ಷಗಳೆಲ್ಲ ದೇಹದ ಮೇಲೆ ಬೆಳೆದಿರಲೂ| ದಾರಿಂದ ಸೋಲು | ಗೆಲುವೆನೆಂದು ಸನ್ಮಾನದಿಂದ ಕುಳಿತಿದ್ದ | ಅಸುರನ ತಪಸ್ಸಿಗೆ ಮೆಚ್ಚಿ | ಪರಿಪರಿವರಗಳನಿತ್ತ | ಧಾತನ ವರಗಳಿಂದ ಮೂರು ಲೋಕವನೆ ವ್ಯಾಪಿಸಿದ| ನಾರದ ಋಷಿ ತತ್ವ ತಿಳಿಯಲು| ಕೇಳಿ ಪ್ರಹ್ಲಾದ ಜನಿಸಿದನು | ನಾನಾ ಬಾಧೆಯ ತಾಳಿದ ಹರಿಧ್ಯಾನದಲಿ| ತತ್ತ್ವೋಪದೇಶವ ಮಾಡಿದ | ತನ್ನ ಪುತ್ರನಿಗೆ| ಅಕ್ಷರಾ ಬರೆ ಅಂದರೆ ಅಚ್ಯುತಾನಂತ ಬರೆದಾ| ಕಟ್ಟೆ ಕೆಡಹಿದರೆ ಶ್ರೀಕೃಷ್ಣನೇ ಗತಿಯೆಂದಾ| ಉದಕದೊಳಗೆ ಹಾಕಿದರೆ ವಾಸುದೇವನೇ ಗತಿ ಯೆಂದಾ | ಅಗ್ನಿಯೊಳಗೆ ಹಾಕಿದರೆ ಅಗ್ನಿನಾರಯಣನೇ ಗತಿ ಯೆಂದಾ | ವಿಷಗಳನೆ ಕುಡಿಸಿದರೆ ವಿಷ್ಣು ಸರ್ವೋತ್ತಮನೆ ಗತಿ ಯೆಂದಾ| ಅಸುರಾ ತಾ ಕಂಗೆಟ್ಟು ಓಡಿ ಬಂದನಾ ಬೇಗದಲಿ | ಮಗನ ಮೇಲಿನ ಕೋಪದಲಿ | ಧೃಡಗಂಬವನೆ ಗಟ್ಟಿಸಿದಾ| ಬುಡುಬುಡು ಎಂಬೋ ಧ್ವನಿಯಿನೆ ಕೇಳಿ ನಡು ನಡುಗಿದ ನಸುರಾ | ಕಂಭದೊಳಿಗಿದ್ದ ನರಹರಿಯು| ನರಸಿಂಹ ರೂಪ ತಾಳಿದನು| ಹಿರಣ್ಯಕನ ತೊಡೆ ಮೇಲೆ ಹಾಕಿ ಉಗುರಲಿ ಉದರವ ಬಗಿದು | ಅಜ ಭವರೆಲ್ಲರು ಸ್ತುತಿ ಮಾಡಲು ಅಮರರು ಹೂವಿನ ಮಳೆ ಗರಿಯೆ| ಪ್ರಹ್ಲಾದನ ನುಡಿ ಕೇಳಿ | ವರವಿತ್ತನೆ ನರಸಿಂಹ | ಸಪ್ತಮಸ್ಕಂದ ಭಾಗವತ | ಶುಕ ಪರೀಕ್ಷಿತರ ಸಂವಾದ | ಹೇಳಿ ಕೇಳಿದಂಥಾ ಸಜ್ಜನರಿಗೆ ಶ್ರೀಮದಾನಂದ ತೀರ್ಥರು | ಶ್ರೀಯನ್ನು ಕೊಟ್ಟು ರಕ್ಷಿಸುವರು |

|| ಸಂಪೂರ್ಣ ಶ್ರೀಕೃಷ್ಣಾರ್ಪಣ ಮಸ್ತು ||

ಇದರಂತೆಯೇ 'ಭಾಗವತ ಅನುಕ್ರಮಣಿಕೆ'ಯ ಎರಡು ಕನ್ನಡ ಕೃತಿಗಳು ಸವೆದಿವೆ.

೬. ಪಾವಂಜೆ ಗುರುರಾಯರ ಪ್ರಕಟಣೆಯ ಪಾಠವನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

೭. ಇದೇ ಉಪಾಖ್ಯಾನವನ್ನು ಕವಯತ್ರಿಯೊಬ್ಬಳು ಹೇಗೆ ನಿರ್ವಹಿಸಿರುವಳೆಂಬುವನ್ನು ವಿವೇಚಿಸಲು. ಅನುಬಂಧ : ೩ರಲ್ಲಿ ಹರಪನಹಳ್ಳಿ ಭೀಮವ್ವನವರ ಸುಧಾಮ ಚರಿತ್ರೆ ಹಾಡನ್ನು ವಿವರಿಸಿದೆ. ಇಲ್ಲಿಯೂ ಅವೇ ಕಥಾಂಶಗಳು ಪುನರಾವೃತ್ತಿಯಾಗುವುದರಿಂದ ಹೆಚ್ಚು ವಿವರಿಸಿಲ್ಲ.

೮. ಪುರಂದರದಾಸರು ರಚಿಸಿರುವ 'ಅಜಾಮಿಳ ಚರಿತ್ರೆ'ಯ ವಿಸ್ತಾರವಾಗಿ ವಿವೇಚನೆ ನಡೆಸಿ ಮೂಲ ಕಥಾಂಶಗಳೊಂದಿಗಿನ ಸಾದೃಶ್ಯ-ವೈದೃಶ್ಯಗಳನ್ನು ಗುರುತಿಸಿರುವ ಡಾ.ವಾಸುದೇವ ಅಗ್ನಿಹೋತ್ರಿಯವರು ಇಂದು 'ಗೀತನಾಟಕದಂತೆ' 'ಕಥನ ಕವನ'ದಂತೆ ಇರುವುದನ್ನು ರಸವಿಮರ್ಶೆಯ ಮೂಲಕ ನಿರೂಪಿಸಿದ್ದಾರೆ. (ವಾಸುದೇವ ಅಗ್ನಿಹೋತ್ರಿ ೨೦೦೪ : ೮೧-೮೭)

೯. 'ಅಚ್ಯುತ' ಎಂದರೆ 'ಚ್ಯುತಿ(ನಾಶ) ಇಲ್ಲದವನು'. 'ಅನಂತ' ಎಂದರೆ 'ಅಂತ್ಯವಿಲ್ಲದವನು'. 'ಗೋವಿಂದ' ಎಂದರೆ ...ಹೀಗೆ ಶ್ರೀಹರಿಯ ಒಂದೊಂದು ನಾಮಕ್ಕೂ ಇರುವ ನಿಷ್ಪತ್ತಿಗಳನ್ನು ತಿಳಿದು ಆ 'ಮಹಿಮಾ ಜ್ಞಾನ' ಪೂರ್ವಕ ಔಚಿತ್ಯವರಿತು ಸ್ಮರಣೆ ಮಾಡುವುದು ಹರಿದಾಸರ ಪದ್ಧತಿ.

೧೦. 'ನಿಂದಾಸ್ತುತಿ'ಯ ಬಗ್ಗೆ ಡಾ.ಕೆ.ಗೋಕುಲನಾಥ ಅವರ ಗ್ರಂಥದಿಂದ ಹೆಚ್ಚಿನ ವಿವರಗಳನ್ನು ತಿಳಿಯಬಹುದು.

೧೧. 'ಮುಂಡಿಗೆ'ಗಳ ವಿವರಗಳಿಗಾಗಿ ಚತುರ್ವೇದಿ ವೇದವ್ಯಾಸಾಚಾರ್ಯರು ಬರೆದ 'ಹರಿದಾಸರ ಮುಂಡಿಗೆಗಳು' ಎಂಬ ಗ್ರಂಥವನ್ನು ಪರಿಶೀಲಿಸಬಹುದು.



೬

# ತತ್ವ ಪ್ರತಿಪಾದನೆಯಲ್ಲಿ ಋಣ ಮತ್ತು ವೃದ್ಧಿ

## ಪ್ರವೇಶ

ಹರಿದಾಸರ ಕೃತಿಗಳಲ್ಲಿನ ಕತೆ-ವರ್ಣನೆಗಳ ಮಾತನ್ನು ಮುಗಿಸಿದಬಳಿಕ ಅವರು ಪ್ರತಿಪಾದಿಸಿದ ತಾತ್ವಿಕಾಂಶಗಳ ಸ್ವರೂಪ-ವೈವಿಧ್ಯ ಹಾಗೂ ಅಧ್ಯಯನ ವಿಧಾನಗಳನ್ನು ವಿಶ್ಲೇಷಿಸೋಣ.

ಈ ಅಧ್ಯಾಯದಲ್ಲಿ **'ತತ್ವ'** ಎಂಬ ಪದವನ್ನು 'ಜೀವ-ಜಗತ್ತು-ಪರಮಾತ್ಮ ಈ ಮೂರು ವಿಷಯಗಳ ಬಗೆಗಿನ ತಿಳುವಳಿಕೆ' ಎಂಬ ಅರ್ಥದಲ್ಲಿ ಮಾತ್ರ ಬಳಸಲಾಗಿದೆ. 'ತತ್ವ' ಎಂಬುದು ನಿತ್ಯಸತ್ಯ. ತತ್ವಗಳು ಉಪನಿಷತ್ತುಗಳಲ್ಲೇ ಕಂಡುಬರುವ ವಿಷಯಗಳು. ಮತಾಚಾರ್ಯರು ಅವುಗಳನ್ನು ಹೇಗೆ ತಿಳಿಯಬೇಕೆಂಬ ದಾರಿ ತೋರಿಸುತ್ತಾರೆಯೇ ಹೊರತು ಅವರೇ ಹೊಸದಾಗಿ ತತ್ವಗಳನ್ನು ನಿರ್ಮಿಸುವುದಿಲ್ಲ. ಒಬ್ಬೊಬ್ಬ ದಾರ್ಶನಿಕ ಬಂದಂತೆಲ್ಲ ಹೊಸತತ್ವಗಳ ನಿರ್ಮಾಣವಾಗುವುದಿಲ್ಲ. ಈ ಸ್ಪಷ್ಟ ತಿಳುವಳಿಕೆ ಇಲ್ಲದಿದ್ದರೆ ಸಾರ್ವತ್ರಿಕವಾದ ತತ್ವಗಳನ್ನು ಮತಾಚಾರ್ಯರ ತಲೆಗೆ ಕಟ್ಟಿಕೊಡಿಸಿಬಿಡುವ ಅಪಾಯವಿದೆ; ಹಾಗಾಗಬಾರದು- ಎಂಬ ನಿಲುವಿನಿಂದ ನಮ್ಮ ವಿಶ್ಲೇಷಣೆಯನ್ನು ಆರಂಭಿಸಬಹುದು.

ಭಾರತೀಯ ತತ್ವಶಾಸ್ತ್ರದ ಸಮಗ್ರ ವಿವರಗಳನ್ನು ಒಳಗೊಂಡ ಶ್ರೀಮದ್ಭಾಗವತವು ಚಿಂತಕರಿಗೆ ಅಮೂಲ್ಯ ನಿಧಿಯಾಗಿದೆ. ಸಮಸ್ತ ವೈದಿಕ ವಾಙ್ಮಯದಲ್ಲಿ ವಿಕ್ಷಿಪ್ತವಾಗಿದ್ದ ಅಮೂಲ್ಯ ತಾತ್ವಿಕ ವಿಷಯಗಳನ್ನು ಆಯ್ದುತಂದು, ಏಕತ್ರ ಕ್ರೋಢೀಕರಿಸಿ ನೀಡಿರುವುದರಿಂದ, ಈ ಕ್ಷೇತ್ರದ ಅಭ್ಯಾಸಿಗಳಿಗೆ ಮಹತ್ವದ ಆಕರಗ್ರಂಥವಾಗಿ ಪರಿಣಮಿಸಿದೆ. ಜೀವ-ಜಗತ್ತು-ಪರಮಾತ್ಮ ಎಂಬ ಮೂರು ಘಟಕಗಳ ಅನ್ಯೋನ್ಯ ಸಂಬಂಧವನ್ನು ಓತಪ್ರೋತವಾಗಿ ವಿವರಿಸುವ ಭಾಗವತದಿಂದ ಪ್ರೇರಿತರಾದ ಹರಿದಾಸರು ತಮ್ಮ ಪ್ರತಿಯೊಂದು ಕೀರ್ತನೆಯಲ್ಲೂ ಯಾವುದಾದರೊಂದು ತಾತ್ವಿಕ ಅಂಶವನ್ನು ಪ್ರತಿಪಾದಿಸಿದ್ದಾರೆ.

ಕಥಾಕೇಂದ್ರಿತ ರಚನೆಗಳೆನ್ನಬಹುದಾದ ಕಥನ ಮಾದರಿಯ ಕೃತಿಗಳಲ್ಲೂ, ಸಂಕಥನಾತ್ಮಕ ಕೃತಿಗಳಲ್ಲೂ ತಾತ್ವಿಕ ವಿಷಯದ ಎಳೆಗಳು ಇದ್ದೇ ಇವೆ. ಆತ್ಮ ವಿಮರ್ಶೆ, ಸಮಾಜ ವಿಮರ್ಶೆಯ ಕೀರ್ತನೆಗಳಲ್ಲೂ ತತ್ವಶಾಸ್ತ್ರದ ಅಂಶಗಳನ್ನು ಗುರುತಿಸಬಹುದು. ಇನ್ನು ನೇರವಾಗಿ ತತ್ವಚಿಂತನೆಯನ್ನೇ ವಸ್ತುವನ್ನಾಗಿ ಹೊಂದಿದ ಕೃತಿಗಳ ಸಂಖ್ಯೆಯೂ ಸಾಕಷ್ಟಿದೆ.

ಹರಿದಾಸರು ಭಾಗವತವನ್ನು ಚೆನ್ನಾಗಿ ಮನನ ಮಾಡಿದವರು. ಅಲ್ಲಿಯ ಅನೇಕ ಚಿಂತನಾಂಶಗಳನ್ನು ಸದಾಕಾಲ ಚಿಂತಿಸುತ್ತಿದ್ದವರು. ಹೀಗೆ ಯಾವ ವಿಷಯವನ್ನು ಅರಿತಿದ್ದರೋ ಅವುಗಳನ್ನು ಆಚರಿಸುತ್ತಿದ್ದವರು. ಈ **'ಆಚರಣಾತ್ಮಕ ನೆಲೆ'**ಯಿಂದ ನೋಡಿದರೆ ಅವರ ತತ್ವಪ್ರತಿಪಾದಕ ಕೃತಿಗಳ ಮಹತ್ವದ ಅರಿವಾಗುತ್ತದೆ.

ಪ್ರಾತಃಕಾಲದಲ್ಲಿ ಎದ್ದೊಡನೆ 'ಸೃಷ್ಟಿಚಿಂತನೆ', ರಾತ್ರಿ ಮಲಗುವ ಮುನ್ನ 'ಲಯಚಿಂತನೆ'ಗಳನ್ನು ನಡೆಸುವುದು ಅವರ ಪದ್ಧತಿ. ಹೀಗೆ ಪ್ರತಿದಿನ ಸೃಷ್ಟಿ-ಲಯ ಪ್ರಕ್ರಿಯೆಗಳ ಪುನರ್ಮನನ ಕೈಗೊಳ್ಳಲು ಸಹಾಯಕವಾಗುವ ಅನೇಕ ಕನ್ನಡ ಕೃತಿಗಳನ್ನು ರಚಿಸಿದ್ದಾರೆ. ಇಂತಹ ರಚನೆಗಳನ್ನು ಅರ್ಥಮಾಡಿಕೊಳ್ಳಲು ಸೃಷ್ಟಿ-ಲಯಗಳ ಸಂಕ್ಷಿಪ್ತ ಪರಿಚಯ ಬೇಕಾಗುತ್ತದೆ.

ಬ್ರಹ್ಮಾಂಡ ರಚನೆಯ ಘಟಕಗಳಾದ **'ಇಪ್ಪತ್ನಾಲ್ಕು ತತ್ವಗಳೇ'** ನಮ್ಮ ದೇಹದ ರಚನೆ ಹಾಗೂ ಕಾರ್ಯನಿರ್ವಹಣೆಯಲ್ಲೂ ದುಡಿಯುತ್ತವೆ. ಈ ಇಪ್ಪತ್ನಾಲ್ಕು ತತ್ವಗಳ ಪರಸ್ಪರ ಸಂಬಂಧವನ್ನು ತಿಳಿದರೆ ಸೃಷ್ಟಿ ಮತ್ತು ಲಯಗಳ ಸ್ಪಷ್ಟ ಪರಿಕಲ್ಪನೆ ಮೂಡುತ್ತದೆ.

'ಜಡ'ವಾದ ಈ ತತ್ವಗಳನ್ನು **'ಅಧಿಭೂತ'** ಎಂದೂ ಅವುಗಳಿಗೆ ಅಭಿಮಾನಿಗಳಾದ ತಾತ್ವಿಕ 'ದೇವತೆ'ಗಳನ್ನು **'ಅಧಿದೈವ'** ಎಂದೂ ಅವರಲ್ಲಿ ನಿಂತು ಆಯಾ ಕಾರ್ಯವನ್ನು ನಡೆಸುವ 'ಪರಮಾತ್ಮ'ನಾದ ಶ್ರೀಹರಿಯ ರೂಪಗಳನ್ನೂ **'ಅಧ್ಯಾತ್ಮ'**ವೆಂದೂ ಕರೆಯುತ್ತಾರೆ. ಆದ್ದರಿಂದ ಪ್ರತಿಯೊಂದು ತತ್ವವನ್ನೂ ಆಧಿಭೂತ-ಅಧಿದೈವ-ಅಧ್ಯಾತ್ಮವೆಂಬ ಮೂರೂ ಆಯಾಮಗಳಲ್ಲಿ ಗ್ರಹಿಸಬೇಕಾಗುತ್ತದೆ.

ಚತುರ್ವಿಂಶತಿ ತತ್ವಗಳು ಹಾಗೂ ತತ್ವಾಭಿಮಾನಿದೇವತೆಗಳ ವಿವರಹೀಗಿದೆ :

| ಸಂಖ್ಯೆ | ತತ್ವಗಳು(ಅಧಿಭೂತ) | ತತ್ವಾಭಿಮಾನಿ ದೇವತೆಗಳು(ಆಧಿದೈವ) |
|---|---|---|
| ೧. | ಅವ್ಯಕ್ತ ತತ್ವ | ಸರಸ್ವತಿ-ಭಾರತಿಯರು |
| ೨. | ಮಹತ್ ತತ್ವ | ಬ್ರಹ್ಮ-ವಾಯುಗಳು |
| ೩. | ಅಹಂಕಾರ ತತ್ವ | ಗರುಡ-ಶೇಷ-ರುದ್ರರು |
| ೪. | ಮನಸ್ತತ್ವ | ಸ್ಕಂದ(ಕಾಮ)-ಇಂದ್ರರು |
| ೫. | ಶ್ರೋತ್ರ | ದಿಗ್ದೇವತೆಗಳು-ಚಂದ್ರ |
| ೬. | ತ್ವಕ್ | ಅಹಂಕಾರಿಕ ಪ್ರಾಣ |
| ೭. | ಚಕ್ಷು | ಸೂರ್ಯ |
| ೮. | ಜಿಹ್ವಾ | ವರುಣ |
| ೯. | ಘ್ರಾಣ | ಅಶ್ವಿನೀ ದೇವತೆಗಳು |
| ೧೦. | ವಾಕ್ | ಅಗ್ನಿ |
| ೧೧. | ಪಾಣಿ | ದಕ್ಷ |
| ೧೨. | ಪಾದ | ಜಯಂತ |
| ೧೩. | ಪಾಯು | ಮಿತ್ರ |
| ೧೪. | ಉಪಸ್ಥ | ಮನು |
| ೧೫. | ಶಬ್ದ | ಬೃಹಸ್ಪತಿ-ಪ್ರಾಣರು |
| ೧೬. | ಸ್ಪರ್ಶ | ಅಪಾನ |
| ೧೭. | ರೂಪ | ವ್ಯಾನ |
| ೧೮. | ರಸ | ಉದಾನ |
| ೧೯. | ಗಂಧ | ಸಮಾನ |
| ೨೦. | ಆಕಾಶ | ಗಣಪತಿ |
| ೨೧. | ವಾಯು | ಪ್ರವಹ ವಾಯು |
| ೨೨. | ತೇಜಸ್ಸು | ಸೂರ್ಯ |
| ೨೩. | ಅಪ್ | ವರುಣ |
| ೨೪. | ಪೃಥ್ವೀ | ಧರಣೀ-ಶನೈಶ್ಚರರು |

ಅವುಗಳಲ್ಲಿ ಕೊನೆಯ ಇಪ್ಪತ್ತು ತತ್ವಗಳನ್ನು ಹೀಗೆ ವರ್ಗೀಕರಿಸಲಾಗಿದೆ.

| ಪಂಚ ಜ್ಞಾನೇಂದ್ರಿಯಗಳು | ಪಂಚ ಕರ್ಮೇಂದ್ರಿಯಗಳು | ಪಂಚ ಭೂತಗಳು | ಪಂಚ ತನ್ಮಾತ್ರೆಗಳು |
|---|---|---|---|
| ಶ್ರೋತ್ರ (ಕಿವಿ) | ವಾಕ್ (ಮಾತು) | ಆಕಾಶ | ಶಬ್ದ |
| ತ್ವಕ್ (ಚರ್ಮ) | ಪಾಣಿ (ಕೈ) | ವಾಯು | ಸ್ಪರ್ಶ |
| ಚಕ್ಷು (ಕಣ್ಣು) | ಪಾದ (ಕಾಲು) | ತೇಜಸ್ಸು | ರೂಪ |
| ಜಿಹ್ವಾ (ನಾಲಿಗೆ) | ಪಾಯು (ಗುದ) | ಅಪ್ (ನೀರು) | ರಸ |
| ಘ್ರಾಣ (ಮೂಗು) | ಉಪಸ್ಥ (ಜನನೇಂದ್ರಿಯ) | ಪೃಥ್ವೀ (ಭೂಮಿ) | ಗಂಧ |

'ಕಿವಿ'ಗೆ 'ಮಾತು' 'ಆಕಾಶ'ದ ಮೂಲಕ 'ಶಬ್ದ' ರೂಪದಲ್ಲಿ ಕೇಳಿಸುತ್ತದೆ ಎಂಬ ರೀತಿಯಲ್ಲೇ ಇತರ ಅಧಿಭೂತ ಕ್ರಿಯೆಗಳನ್ನೂ; ಅದರಂತೆಯೇ ಆಯಾ ತಾತ್ವಿಕ ದೇವತೆಗಳೇ ಅದನ್ನು ನಡೆಸುತ್ತಾರೆ ಎಂಬ ಅಧಿದೈವ ಕ್ರಿಯೆಗಳನ್ನೂ, ಅವುಗಳಲ್ಲಿ ವಿವಿಧ ರೂಪದಿಂದ ನಿಂತು ಭಗವಂತನೇ ಆಯಾ ಕಾರ್ಯಗಳನ್ನು ಮಾಡಿ-ಮಾಡಿಸುತ್ತಾನೆ ಎಂಬ ಆಧ್ಯಾತ್ಮಿಕ ಕ್ರಿಯೆಗಳನ್ನೂ-ತಿಳಿಯುವುದೇ **'ತತ್ವಚಿಂತನೆ.'**

ತತ್ವಜ್ಞಾನವನ್ನು, ಆ ಮೂಲಕ ಭಗವದಪರೋಕ್ಷವನ್ನು ಬಯಸುವ ಸಾಧಕನು ಈ ತತ್ವಗಳನ್ನು ವಿವಿಧ ಕ್ರಮದಲ್ಲಿ ಚಿಂತಿಸಬೇಕಾಗುತ್ತದೆ. ಅಂತಹ ಕೆಲವು ಚಿಂತನಪದ್ಧತಿಗಳು ಹೀಗಿವೆ :

೧. ತನ್ನ ದೇಹದ ಇಪ್ಪತ್ತು ಬೆರಳುಗಳಲ್ಲಿ ಈ ಇಪ್ಪತ್ತು ತತ್ವಗಳನ್ನೂ ಎರಡು ಭುಜ - ಎರಡು ಕಾಲುಗಳಲ್ಲಿ ಉಳಿದ ನಾಲ್ಕು ತತ್ವಗಳನ್ನೂ, ಹೃದಯದಲ್ಲಿ ಭಗವಂತನ ರೂಪಗಳನ್ನೂ ಚಿಂತಿಸುವ ಕ್ರಿಯೆಯನ್ನು **'ತತ್ವನ್ಯಾಸ'** ಎನ್ನುತ್ತಾರೆ. ಇದರಿಂದ ತನ್ನ ದೇಹದ ಸರ್ವವ್ಯಾಪರವನ್ನೂ, ದೇವತೆಗಳೇ ನಡೆಸುವರೆಂಬ ತಿಳುವಳಿಕೆ ದೃಢವಾಗುತ್ತದೆ. ಅಹಂಕಾರ ನಾಶವಾಗುತ್ತದೆ. ಈ ದೇಹವು ಭಗವಂತನ ಆವಾಸಸ್ಥಾನ ಎಂಬ ಧನ್ಯತಾಭಾವ ಮೂಡುತ್ತದೆ.

'ಈಶಾವಾಸ್ಯ'ವಾದ ಈ ದೇಹವನ್ನು ದುರ್ನಡತೆಯಿಂದ ಅಪವಿತ್ರಗೊಳಿಸಿಕೊಳ್ಳಬಾರದೆಂಬ ಜಾಗೃತಿ ಮೂಡುತ್ತದೆ. ಇತರರ ದೇಹಗಳಲ್ಲೂ ತಾತ್ವಿಕ ದೇವತೆಗಳು ಹಾಗೂ ಭಗವಂತ ಇರುವರೆಂಬ ಪ್ರಜ್ಞೆಯಿದ್ದರೆ ಸಾಧಕನು ಯಾರನ್ನೂ ನೋಯಿಸದೆ ಅವಮಾನಿಸದೆ ಬಾಳಲು ಸಾಧ್ಯವಾಗುತ್ತದೆ. ಹರಿದಾಸರ ಜೀವನಶ್ರದ್ಧೆ-ಮಾನವೀಯತೆಗಳು ಈ ಹಿನ್ನೆಲೆಯಲ್ಲಿ ಮೂಡಿಬಂದಿರುವುದನ್ನು ಗಮನಿಸಬೇಕು.

೨. ಇಪ್ಪತ್ನಾಲ್ಕು ತತ್ವಗಳ ಉತ್ಪತ್ತಿ ಕ್ರಮದ ತಿಳುವಳಿಕೆಯೇ **'ಸೃಷ್ಟಿ ಚಿಂತನೆ'** ಅಥವಾ ಅವರೋಹಣ ತಾರತಮ್ಯ. ಇವುಗಳ ಲಯಕ್ರಮದ ತಿಳುವಳಿಕೆಯೇ **'ಲಯ ಚಿಂತನೆ'** ಅಥವಾ ಆರೋಹಣ ತಾರತಮ್ಯ. ಇವುಗಳ ನಿತ್ಯ ಮನನದಿಂದ ಹುಟ್ಟು ಸಾವುಗಳ ಅನಿವಾರ್ಯತೆಯು ಅರಿವಾಗುತ್ತದೆ.

"ದೇಹದಲ್ಲಿರುವ ತತ್ವಗಳು ಹೊರಜಗತ್ತಿನಲ್ಲಿರುವ ತತ್ವಗಳಲ್ಲಿ ಲೀನವಾಗುವುದೇ ಮರಣ!"[೨] ಎಂಬುದು ತಿಳಿದಾಗ ಮರಣದ ಭಯ ಅಳಿಯುತ್ತದೆ. ಬದುಕಿರುವಷ್ಟು ಕಾಲವೂ ನೆಮ್ಮದಿಯಿಂದ ಇರಲು ಸಾಧ್ಯವಾಗುತ್ತದೆ.

೩. ಹದಿನಾಲ್ಕು ಲೋಕಗಳಿಂದ ಕೂಡಿದ ಬ್ರಹ್ಮಾಂಡವನ್ನು ವ್ಯಾಪಿಸಿನಿಂತ ಶ್ರೀ ಹರಿಯ ಭವ್ಯ ರೂಪಕ್ಕೆ **'ವಿರಾಟ್ ರೂಪ'**ವೆಂದು ಹೆಸರು. ಈ ವಿರೂಡ್ರೂಪ ಶರೀರದ ಯಾವ ಅವಯವಗಳಲ್ಲಿ ಈ ತತ್ವಗಳು ಹಾಗೂ ಅಭಿಮಾನಿ ದೇವತೆಗಳು ನೆಲೆಸಿದ್ದಾರೋ, ವಿರಾಡ್ರೂಪದ ಆಯಾ ಅವಯವದಿಂದಲೇ ಅವರ ಸೃಷ್ಟಿ. ಆಯಾ ಅವಯವದಲ್ಲಿ ಇದ್ದು ಕಾರ್ಯಮಾಡುವುದೇ ಸ್ಥಿತಿ ಎಂಬುದನ್ನು ತಿಳಿಯುವುದೇ **ವಿರಾಡ್ರೂಪ ಚಿಂತನೆ.**

೪. ಅಪಾರ ಮಹಿಮನಾದ ಭಗವಂತನ ನಾಮ-ರೂಪ-ಗುಣ-ಕ್ರಿಯೆಗಳನ್ನು ಒಟ್ಟುಗೂಳಿಸಿಕೊಂಡು, ಅವನ ಅಪ್ರಾಕೃತ ಸುಂದರ ರೂಪವನ್ನು ನಿರಂತರ ಸ್ಮರಿಸುವುದೇ **'ಧ್ಯಾನ.'** ಅದರ ಅಭ್ಯಾಸಕ್ಕಾಗಿ ದೇವರ ಪಾದದಿಂದ ಆರಂಭಿಸಿ ಶಿರಸ್ಸಿನವರೆಗಿನ ಒಂದೊಂದೇ ಅಂಗಗಳನ್ನು, ಅವುಗಳ ರೂಪ-ಕಾರ್ಯ-ಗುಣಗಳನ್ನು ಸ್ಮರಿಸುವ ಕ್ರಿಯೆಗೆ **'ಧಾರಣ'** ಎಂದು ಹೆಸರು. ಧ್ಯಾನವು ಅಪ್ರಯತ್ನವಾಗಿ ನಡೆಯುವುದು ಸಾಧ್ಯವಾದರೆ ಅಂತಹ ಸ್ಥಿತಿಯನ್ನು **'ಸಮಾಧಿ'** ಎನ್ನುವರು.[೩]

ಭಾಗವತ ಪುರಾಣದಲ್ಲಿ ವಿಸ್ತಾರವಾಗಿ ಪ್ರತಿಪಾದಿತವಾಗಿರುವ ಇಂತಹ ಅನೇಕ ಪ್ರೌಢತಾತ್ವಿಕ ವಿಷಯಗಳನ್ನು ಹರಿದಾಸರು ಸಂಸ್ಕೃತವರಿಯದ ಸಜ್ಜನರ ಉಪಯೋಗಕ್ಕಾಗಿ ಸರಳ ಕನ್ನಡ ಕೃತಿಗಳಲ್ಲಿ ಪರಿಚಯಿಸಿದ್ದಾರೆ. ಈ ರೀತಿಯ ರಚನೆಗಳಲ್ಲಿ ಅವರು ಕೈಗೊಂಡ ಋಣ ಮತ್ತು ವೃದ್ಧಿಯ ಮಾದರಿಗಳನ್ನು ಚರ್ಚಿಸುವಾಗ ಅಧ್ಯಯನದ ಸೌಲಭ್ಯಕ್ಕಾಗಿ ಅವುಗಳನ್ನು 'ಚಿಂತನಾತ್ಮಕ ಮಾದರಿ'ಗಳು ಹಾಗೂ 'ಆಚರಣಾತ್ಮಕ ಮಾದರಿ'ಗಳೆಂಬ ಎರಡು ವಿಭಾಗಗಳನ್ನಾಗಿ ವಿಂಗಡಿಸಿಕೊಂಡು ಅವುಗಳನ್ನು ಒಂದೊಂದಾಗಿ ನೋಡಬಹುದು.

## ೬.೧. ಚಿಂತನಾತ್ಮಕ ಮಾದರಿಗಳು

ಹರಿದಾಸ ಪರಂಪರೆಯಲ್ಲಿ ಯಾವ ತಾತ್ವಿಕ ಅಂಶಗಳನ್ನು ಮತ್ತೆ ಮತ್ತೆ ಚಿಂತಿಸುವ ರೂಢಿಯಿದೆಯೋ ಅಂತಹ ತತ್ವಗಳನ್ನು ಪ್ರತಿಪಾದಿಸಿದ ಕೃತಿಗಳನ್ನು 'ಚಿಂತನಾತ್ಮಕ ಕೃತಿ'ಗಳೆಂದು ಹೆಸರಿಸಬಹುದು. ಅವುಗಳಲ್ಲಿ ಸೃಷ್ಟಿಚಿಂತನೆ, ವಿರಾಡ್ರೂಪ ಚಿಂತನೆ, ಸಾಕಾರಧ್ಯಾನ, ಜೀವಸಂಸಾರ ಕಥನ, ಭವಾಟವೀವರ್ಣನ, ಹಾಗೂ ಹರಿಸರ್ವೋತ್ತಮತ್ವಗಳಂತಹ ಮಾದರಿಗಳನ್ನು ನೋಡಬಹುದು.

ಸಾಮಾನ್ಯವಾಗಿ ಇಂತಹ ಕೃತಿಗಳು ವಿಸ್ತಾರವಾಗಿರುತ್ತವೆ. ದಾಸರು ಇಲ್ಲಿ ಹೆಚ್ಚು ವಸ್ತುವನ್ನು ಅಳವಡಿಸಲು 'ದೀರ್ಘಕೀರ್ತನೆ', 'ಸುಳಾದಿ', 'ವೃತ್ತನಾಮ'ಗಳಂತಹ ದೀರ್ಘ ಛಂಧೋಪ್ರಕಾರಗಳನ್ನು ಬಳಸಿದ್ದಾರೆ.

### ೬.೧.೧ ಸೃಷ್ಟಿ ಚಿಂತನೆ

ಭಗವಂತನು ಸೃಷ್ಟಿಕಾಲದ ಆರಂಭಕ್ಕಿಂತ ಮೊದಲು(ಲಯ ಕಾಲದ ಅಂತ್ಯದಲ್ಲಿ) ಯೋಗನಿದ್ರೆಯಿಂದ ಎಚ್ಚೆತ್ತು ತತ್ವಗಳನ್ನು ಸೃಷ್ಟಿಸಿದ ವಿವರವನ್ನು ವಾದಿರಾಜರು 'ಪ್ರಳಯ ಜಲದಲಿ...' ಎಂಬ ದೀರ್ಘಕೀರ್ತನೆಯಲ್ಲಿ ವಿವರಿಸಿದ್ದಾರೆ. ಅಲ್ಲಿಯ ಮೊದಲ ಐದು ಪದ್ಯಗಳು ಹೀಗಿವೆ.

ಪ್ರಳಯಜಲದಲಿ ನೀನಾಲದೆಲೆಯ ಮ್ಯಾಲೆ
ಹಲವು ಜೀವರು ನಿನ್ನ ಹೃದಯದೊಳಿರಲು
ಕೆಲವುದಿನದಿ ಯೋಗನಿದ್ರೆಯೊಳಿರೆ
ಒಲವಿಂದ ಸೃಜಿಸುವೆನೆಂದು ನೇಮಿಸುವೆ ೧

ಪ್ರಕೃತಿಯ ಮೂಲಕಾರಣವನು ಮಾಡಿ
ಸಕಲತತ್ವಗಳ ಸಮ್ಮೋಹದಿ ಕೂಡಿ
ವಿಕಳಿಸದಂತೆ ತನ್ಮಾತ್ರೆಯ ಕೂಡಿ
ಅಖಿಳೇಶ ಮಹತತ್ವಗಳ ನಿರ್ಮಿಸಿದೆ ೨

ಮಹತತ್ವದಿಂದಹಂಕಾರವ ಪುಟ್ಟಿಸಿ
ಅಹಂಕಾರದಿಂದ ವೈಕಾರಿಕ ಮೊದಲಾದ
ತ್ರಿವಿಧತತ್ವಗಳ ನಿರ್ಮಾಣವ ಮಾಡ್ದೆ
ಮಹಮಹಿಮೆಯ ಮೆರೆದೆ ಜಗವರಿಯೆ ೩

ಇಪ್ಪತ್ತುನಾಲ್ಕು ಅಯಿದಾರುತತ್ವಗಳಿಂದ
ತಪ್ಪದೆ ಬೊಮ್ಮಾಂಡವ ನಿರ್ಮಿಸಿದೆ
ಸರ್ಪಶಯನನಾಗಿ ನಾಭಿಕಮಲದಿಂದ
ಅಪ್ಪ ಬ್ರಹ್ಮನ ಪ್ರಸವಿಸಿದೆ ನೀನೆಂದು ೪

ಒಂದು ಮೂರುತಿಯಿಂದ ಸೃಷ್ಟಿಯ ಮಾಡಿ
ಮತ್ತೊಂದು ಮೂರುತಿಯಿಂದ ಪಾಲನೆ ಮಾಡಿ
ಒಂದು ಮೂರುತಿಯಿಂದ ಸಂಹರಣೆ ಮಾಡಿ
ಒಂದೊಂದು ಮಹಿಮೆಯು ಅನಂತಾದ್ಭುತವು ೫

ಪ್ರಕೃತಿಯಿಂದ ಮಹತ್ತತ್ವವನ್ನೂ, ಮಹತ್ತತ್ವದಿಂದ ಅಹಂಕಾರ ತತತ್ವವನ್ನೂ - ಅಹಂಕಾರತತ್ವದ ಭಾಗಗಳಾದ ವೈಕಾರಿಕ-ತೈಜಸ-ತಾಮಸ ತತ್ವಗಳಿಂದ ಉಳಿದ ಇಪ್ಪತ್ನಾಲ್ಕು ಅಥವಾ ಹನ್ನೊಂದು ತತ್ವಗಳನ್ನೂ, ಅವುಗಳಿಂದ, ಬ್ರಹ್ಮಾಂಡವನ್ನೂ, ಬ್ರಹ್ಮದೇವರನ್ನೂ ಸೃಷ್ಟಿಸಿದ ಮಹಿಮೆಯನ್ನು ಹೇಳಲಾಗಿದೆ. ಇಲ್ಲಿ ಕೇವಲ ಜಡತತ್ವಗಳ ಅಂದರೆ ಅಧಿಭೂತಗಳ ಸೃಷ್ಟಿಯನ್ನು ಮಾತ್ರ ವಿವರಿಸಿದ್ದಾರೆ.

ವಾದಿರಾಜರ 'ಸೃಷ್ಟಿಚಿಂತನ ಸುಳಾದಿ'ಯೊಂದರ ಕೆಲವು ಭಾಗಗಳನ್ನೂ ನೋಡಬಹುದು.

**ಧ್ರುವತಾಳ**

ಚಿನುಮಯಮೂರುತಿ ಪ್ರಳಯ ಜಲಧಿಯೊಳು
ವನಿತೆ ಶ್ರೀ ಭೂಮಿ ದುರ್ಗೆಯರೊಡನೆ
ತನ್ನ ಉದರದಲ್ಲಿ ಲಿಂಗವಿಶಿಷ್ಟರಾದ
ಇನಿತು ಜೀವರ ಹಿಡಿ ತುಂಬಾಕೊಂಡು
ತನಯನ ನೂರುವರುಷ ಪರಿಯಂತದಿ
ವನಜಾಕ್ಷ ವಟಪತ್ರಶಯನನಾಗಿ
ಜನರೆಲ್ಲ ತಮ್ಮ ತಮ್ಮ ಗತಿಗೆ ತಕ್ಕ ಸಾ-
ಧನವ ಸಾಧಿಸಿಕೊಳ್ಳಲೆಂದು ಕರುಣಿ
ಪುನರಪಿ ಸೃಷ್ಟಿಯ ಮಾಡುವೆನೆಂದು ಲಾ-
ಲನೆಗೆ ಪ್ರಕೃತಿಯ ಮಮತೆಯಿತ್ತು
ಗುಣತ್ರಯಾತ್ಮಕ ಸೂಕ್ಷ್ಮ ತತ್ವರಾಶಿಯ ಜೀವ
ರನು ಸೃಜಿಸಿದ ಹಯವದನ ಪ್ರಭು

**ಮಠ್ಯತಾಳ**

ಮಹತತ್ವವ ಸೃಜಿಸಿ ಮರುತ ಬ್ರಹ್ಮರಿಟ್ಟ
ಅಹಂಕಾರದಿ ಗರುಡ ಶೇಷ ರುದ್ರರಿಟ್ಟ
ಅಹಂಕೃತಿ ತೃತೀಯ ಭಾಗವನೆ ಮಾಡಿ
ಶ್ರೀ ಹಯವದನ ಭೂತೇಂದ್ರಿಯಗಳ ಮಾಡಿದ

**ರೂಪಕತಾಳ**

ತಾಮಸದಿಂದ ಪಂಚಭೂತಂಗಳ ಸೃಜಿಸಿ
ಯೋಮಾಂತರದಿ
ಆ ಮುನ್ನೆ ತೈಜಸದಿ ಸಾಧಿಸಿದ ದಶೇಂದ್ರಿಯ
ಸೋಮ ಸೂರ್ಯಾದಿ ದೇವತೆಗಳನೆ ನೆಲಸಿ
ಶ್ರೀ ಮನೋಹರ ಹಯವದನ ವೈಕಾರಿಕದಿ
ಆ ಮನವ ದೇವತೆಗಳ ತನುವ ಮಾಡಿದ

* * * *

**ಜತೆ**

ಇಂತೀ ತತ್ವಸೃಷ್ಟಿಯ ನೆನೆವ ಮಹಾತ್ಮರ
ಸಂತತ ಪೊರೆವ ಶ್ರೀಕಾಂತ ಹಯವದನ

ಇಲ್ಲಿ ಅಧಿಭೂತಗಳ ಜೊತೆ 'ಅಧಿದೈವ'ದ ಸೃಷ್ಟಿಯನ್ನೂ ಹೇಳಿರುವುದನ್ನು ಗಮನಿಸಬೇಕು. ತಾಮಸ ಅಹಂಕಾರದಿಂದ ಪಂಚಭೂತಗಳನ್ನೂ, ತೈಜಸ ಅಹಂಕಾರದಿಂದ ಹತ್ತು ಇಂದ್ರಿಯಗಳನ್ನೂ ವೈಕಾರಿಕ

ಅಹಂಕಾರದಿಂದ ಮನಸ್ಸನ್ನೂ ಈ ಮೂರರಿಂದ ದೇವತೆಗಳ ದೇಹವನ್ನೂ ಸೃಷ್ಟಿಸಿದನಂತೆ. ಇದನ್ನು ನೆನೆಯುವವರನ್ನು ಭಗವಂತ ರಕ್ಷಿಸುತ್ತಾನೆಂಬ 'ಫಲಸ್ತುತಿ'ಯು ಪ್ರತಿನಿತ್ಯ ಸೃಷ್ಟಿಚಿಂತನೆ ಅಗತ್ಯವೆಂಬುದನ್ನು ಸೂಚಿಸುತ್ತದೆ. ಇದೆಲ್ಲ 'ಬ್ರಹ್ಮಾಂಡದ ಹೊರಗಿನ ಸೃಷ್ಟಿ' ಅಥವಾ ಭಾಗವತದ ಪರಿಭಾಷೆಯಲ್ಲಿ ಹೇಳುವುದಾದರೆ **'ಸರ್ಗ'**. ಇನ್ನು 'ಬ್ರಹ್ಮಂಡದ ಒಳಗಿನ ಸೃಷ್ಟಿ' ಅಥವಾ **'ವಿಸರ್ಗ'**ವನ್ನು ಮುಂದಿನ ಭಾಗದಲ್ಲಿ ನೋಡಬಹುದು.

### ೬.೧.೨ ವಿರಾಡ್ರೂಪ ಚಿಂತನೆ

ವಿಶ್ವವ್ಯಾಪಿಯಾದ ಶ್ರೀಮನ್ನಾರಾಯಣನು ತನ್ನ ಭವ್ಯ ದೇಹದಲ್ಲಿ ಈ ಚರಾಚರ ಜಗತ್ತನ್ನು ಧರಿಸಿ ನಿಂತಿದ್ದಾನೆ ಎಂಬುದನ್ನು ಚಿಂತಿಸಲು ಅನುಕೂಲಕರವಾದ, ಕನಕದಾಸರು ರಚಿಸಿದ ಒಂದು ಕೀರ್ತನೆ ಹೀಗಿದೆ

ವಿಶ್ವಲೋಕೇಶ ವಿಮಲೈಕ ಮೂರ್ತಿ
ವಿಶ್ವ ಉದ್ಧರ ವಿಶ್ವ ಜ್ಞಾನರೂಪ
ವಿಶ್ವದೊಳ ಹೊರಗು ನೀನಲ್ಲದೆ ಬೇರೆ
ವಿಶ್ವನಾಟಕ ಸೂತ್ರಧಾರರುಂಟೆ ಹರಿಯೆ ॥ ಪ ॥

ಮುಕುಟ ಮಂಡಯಲಿ ಧ್ರುವಲೋಕ ಭುವನಾವಳಿಯು
ನಿಖಿಲ ಶ್ರುತಿ ನವರತುನ ನಿಟಿಲದಲ್ಲಿ
ಮುಖದಲಿಂದ್ರರು ಅಗ್ನಿ ಸಪ್ತ ಋಷಿಗಳು ದ್ವಿಜರು
ಮುಖ ದ್ವಾರದುಸುರಿನಲಿ ಶ್ರುತಿ ಮರುತರು
ದೃಕುಯುಗದಿ ರವಿ ಶಶಿಯು ಎವೆಯಲ್ಲಿ ನಕ್ಷತ್ರ
ಪ್ರಕಟ ಜಿಹ್ವೆಯ ವಾಣಿ ಕರ್ಣದ್ವಯದಿ
ವಿಕಟ ಕಿವಿಯಲಿ ಅಶ್ವಿನಿದೇವತೆಗಳೆಲ್ಲ
ಸಕಲ ಧರ್ಮವ ಪಡೆದೆಯೆಲೊ ಹರಿಯೆ ॥ ೧ ॥

ಸ್ಕಂಧದಲಿ ಅತಿಥಿಗಳು ವಿದ್ಯಾತತಿಗಳು ಮಹಾ
ಚಂದದರಸುಗಳು ಭುಜ ತೋಳಿನಲ್ಲಿ
ಮುಂದುರದಿ ವಿಷ್ಣು ಹರ ಬ್ರಹ್ಮ ಸಹಿತುದರದಲಿ
ಹಿಂದಿನ ಮಗ್ಗುಲಲಿ ಮನುಮುನಿಗಳು
ಮುಂದಿನ ಮಗ್ಗುಲಲಿ ಗಿರಿನಿಚಯಂಗಳು
ಸಂಧಿಯಲಿ ಮಕರಂದ ದೇವತೆಗಳು
ಮುಂದೊರೆದಿಹ ರೋಮಕೂಪದಗ್ರದಳತೆಯು
ವೃಂದಗಳ ಶೋಭಿಪ ರೀತಿಯ ಪಡೆದೆಯೆಲೊ ಹರಿಯೆ ॥ ೨ ॥



ಬೆನ್ನಿನಲಿ ವಸುನಿಕರ ಸ್ಮರನು ಲಿಂಗದಲಿ ಈ ಭು
ವನವೆಲ್ಲವು ಚೆಲುವ ನಾಭಿಯಲ್ಲಿ
ಮುನ್ನ ಕೈಯಲಿ ವಿಶ್ವದೇವತೆಗಳು ವೈಶ್ಯ
ಉನ್ನತ ಜಾನುವಿನ ಸಕ್ತಿಯಲಿ
ಭಿನ್ನ ನದಿಗಳು ಸನ್ಮೋಹನ ಶಕ್ತಿ ಪ್ರ
ಸನ್ನ ಪಾದಬ್ಜದಿಂ ಶೂದ್ರರು
ನಿನ್ನ ಅವಯವದಲ್ಲಿ ಸಕಲವಂ ಪಡೆದ ಪ್ರ
ಸನ್ನ ಕಾಗಿನೆಲೆಯಾದಿಕೇಶವರಾಯ ॥ ೩ ॥

ಕನಕದಾಸರ ಈ ಕೃತಿಯು ಅವರ ತಾತ್ವಿಕ ಪ್ರಬುದ್ಧತೆಯನ್ನು ಸಮರ್ಥವಾಗಿ ತಿಳಿಯಲು ಸಹಾಯಕವಾಗಿದೆ. ಕನಕರ ಕೀರ್ತಿಯನ್ನು ಒಂದೆರಡು ಸಾಮಾಜಿಕ ಕೀರ್ತನೆಗಳಿಗೆ ಸೀಮಿತಗೊಳಿಸುವ ಪ್ರವೃತ್ತಿಯನ್ನು ಕಡಿಮೆಮಾಡಿ ಅವರ ಇಂತಹ ಶಾಸ್ತ್ರಜ್ಞಾನಭರಿತ ಕೀರ್ತನೆಗಳನ್ನು ಹೆಚ್ಚಾಗಿ ಓದಿ, ಚರ್ಚಿಸಿ, ಅವರ ವ್ಯಕ್ತಿತ್ವದ ವಾಸ್ತವ ಪರಿಚಯವನ್ನು ಮಾಡಿಕೊಳ್ಳಬೇಕಾಗಿದೆ.

ಭಾಗವತ ದ್ವಿತೀಯ ಸ್ಕಂಧದಲ್ಲಿ ಶುಕಮುನಿಯು ಪರೀಕ್ಷಿತನಿಗೆ ಉಪದೇಶಿಸಿದ 'ವಿರಾಡ್ರೂಪಧ್ಯಾನ' ಕ್ರಮವನ್ನು ಪುರಂದರದಾಸರು 'ನಾಭಿಮೂಲೇಸ್ಥಿತಂ ಪದ್ಮ'(ಹೃದಯ ಕಮಲ ಅಷ್ಟದಳ ಹೃಷಿಕೇಶ) ಎಂಬ 'ವೃತ್ತನಾಮ'ದಲ್ಲಿ ಸೊಗಸಾಗಿ ನಿರೂಪಿಸಿದ್ದಾರೆ. ವಾದಿರಾಜರು ರಚಿಸಿದ ೩೬(ಭೋಗಷಟ್ಪದಿಯನ್ನು ಹೋಲುವ) ಪದ್ಯಗಳ ರೂಪದಲ್ಲಿ ರಚಿಸಿದ 'ವಿರಾಡ್ರೂಪ ವರ್ಣನೆ'ಯು ವಿಸ್ತಾರವಾಗಿದ್ದು, ಸಾಕಷ್ಟು ವಿವರಗಳನ್ನೊಳಗೊಂಡಿದೆ. ಅಲ್ಲಿಯ ಕೆಲವು ಪದ್ಯಗಳು ಹೀಗಿವೆ :

ಪಾದ ಮೂಲದಲ್ಲಿ ಪಾತಾಳಲೋಕ ಹುಟ್ಟಿತು, ಪಾದ ಅಗ್ರದಲ್ಲಿ ಮಹಾತಳ ಹುಟ್ಟಿತು ।
ರಸಾತಳ ಹುಟ್ಟಿತು ಪಾದ(ಯರಡು) ದ್ವಯಗಳಿಂದ ತಳಾತಳ ಹರಿಯ ಜಂಘೆಯಿಂದ ಹುಟ್ಟಿತು ॥
ಸುತಲವು ಹುಟ್ಟಿತು ಹರಿಯ ಜಾನುದ್ವಯಗಳಿಂದ, ತೊಡೆಗಳಿಂದ ಹುಟ್ಟಿದಾವು ಆತಲ ವಿತಲವು ।
ಭೂಪ ನಿಮ್ಮ ಜಘ್ನದಿಂದ ಮಹಾತಲ ಹುಟ್ಟಿತು, ನಾಭಿಯಿಂದ ಭೂಲೋಕ ಒಂದೇ ಹುಟ್ಟಿತು ॥
ಹರಿಯ ವಕ್ಷಸ್ಥಳದಿಂದ ಜ್ಯೋತಿರ್ಲೋಕ ಹುಟ್ಟಿತು, ಕಂಠದಿಂದ ಹುಟ್ಟಿತು ಮಹರ್ಲೋಕವು ।
ಹರಿಯ ವದನದಿಂದಲೀ ಜನೋಲೋಕ ಹುಟ್ಟಿತು, ಲಲಟಾದಿಂದ ಹುಟ್ಟಿತು ತಪೋಲೋಕವು ।
ಸತ್ಯಲೋಕ ಹರಿಯ ಶಿರಸ್ಸಿನಿಂದ ಹುಟ್ಟಿತು, ಲೋಕ ಪಾಲಕರು ಹುಟ್ಟಿದಾರು ಬಾಹುಗಳಿಂದಲೀ ।

* * *

ಕರ್ಣಗೋಲಿಕಾದಿಂದ ದಿಕ್ಕುಗಳು ಹುಟ್ಟಿದವು, ಶ್ರೋತ್ರದಿಂದ ಹುಟ್ಟಿದಾವು ಬಹಳ ಶಬ್ದಗಳು ॥
ಅಶ್ವಿನೀಗಳು ಹರಿಯ ನಾಶಿಕದಿಂದ ಹುಟ್ಟಿದಾರು, ಗಂಧಗಳು ಹುಟ್ಟಿದಾವು ಘ್ರಾಣದಿಂದಲೀ ।
ವಿಷ್ಣುಮುಖದಿಂದ ಇಂದ್ರಾಗ್ನಿಯೂ ಜನಿಸಿದಾರು, ಚಕ್ಷುಗೋಲದಿಂದ ದ್ಯೌರ್ಲೋಕ ಹುಟ್ಟಿತು ।
ಚಕ್ಷುರಿಂದ್ರಿಯದಿಂದ ಸೂರ್ಯ ತಾ ಜನಿಸಿದಾ, ಯವಿಗಳಿಂದ ದೇವಿ ಮಾನುಷಾದಿಗಳಾದವು ।
ಭ್ರೂಭ್ರಮಣಗಳಿಂದ ಬ್ರಹ್ಮಸ್ಥಾನ ಹುಟ್ಟಿತು, ತಾಲುನಿಂದ ಹುಟ್ಟಿದಾವು ಸಕಲ ಉದಕವು ॥
ಜಿಹ್ವೇಂದ್ರಿಯದಿಂದ ರಸಗಳು ಹುಟ್ಟಿದಾವು, ದಂತದಿಂದ ಹುಟ್ಟಿದಾವು ನಕ್ಷತ್ರಂಗಳು ।

ದಂಷ್ಟ್ರದಿಂದ ಅರ್ಯಮೇಂದು ದೇವತೆಗಳು ಜನಿಸಿದಾರು, ಹರಿಯ ವಾಕ್ಯದಿಂದ ಜನಿಸಿದಾವು ವೇದರಾಶಿಯು ||

* * *

ಹಾಸದಿಂದ ಜನರ ಉನ್ಮಾದ ಶಕ್ತಿ ಹುಟ್ಟಿತು, ಆಪಾಂಗದಿಂದ ವಿಶ್ವಸೃಷ್ಟಿಯಾಯಿತು |
ಉತ್ತರೋಷ್ಠದಿಂದ ಲಜ್ಜೆ ಅಪರದಿಂದ ಲೋಭವು ಧರ್ಮವೆಂಬುದು ಹರಿಯ ಸ್ತನದಿಂದಾಯಿತು ||
ಅಧರ್ಮ ಮಾರ್ಗಗಳು ಹಿಂಭಾಗದಿಂದ ಹುಟ್ಟಿದಾವು, ಗುಹೇಂದ್ರಿಯದಿಂದ ಪ್ರಜಾಪತಿ ದಕ್ಷ ಹುಟ್ಟಿದರು |

* T* *

ಆದ್ರಿಗಳು ಹುಟ್ಟಿದಾವು ಅಸ್ಥಿ ಸಮುದಾಯದಿಂದ ನದಿಗಳು ಹುಟ್ಟಿದಾವು ನಾಡಿಯಿಂದಲೀ |
ಹರಿಯ ರೋಮಗಳಿಂದ ವೃಕ್ಷಗಳು ಹುಟ್ಟಿದಾವು, ಅನ್ನಗಳು ಹುಟ್ಟಿದಾವು ವೀರ್ಯದಿಂದಲೀ ||
ಶ್ವಾಸದಿಂದ ವಾಯುವು ಗಮನದಿಂದ ಆಯುಸ್ಸು ಕರ್ಮದಿಂದ ಗುಣತ್ರಯ ಪ್ರವಾಹ ಹುಟ್ಟಿತು |
ಕುಕ್ಷಿಯಿಂದ ಹುಟ್ಟಿದಾವು ಸಪ್ತ ಸಮುದ್ರಗಳು ವಿಚಾರದಿಂದ ಸ್ವಾಯಂಭುವ ಮನುವು ಹುಟ್ಟಿದಾ ||
ಹರಿಯ ಕೇಶಗಳಿಂದ ಮೇಘಗಳು ಹುಟ್ಟಿದಾವು, ಸಂಧ್ಯಾಕಾಲಗಳು ಹರಿಯ ವಸನದಿಂದಲೀ |
ಹರಿಯ ಹೃದಯದಿಂದ ಅವ್ಯಕ್ತ ತತ್ವ ಹುಟ್ಟಿತು, ದೇವ ಮನಸಿನಿಂದ ಚಂದ್ರಮನು ಹುಟ್ಟಿದಾ ||
ಹರಿಯ ಬುದ್ಧಿಯಿಂದ ವಿಜ್ಞಾನ ತತ್ವ ಹುಟ್ಟಿತು, ಅಂತಃಕರಣದಿಂದ ರುದ್ರನು ಹುಟ್ಟಿದಾ |
ಹರಿಯ ನಖರಗಳಿಂದ ಆಶ್ವತ್ಥವೃಕ್ಷಗಳು ಗಜಗಳೂ ಅಶ್ವಗಳು ಜನನವಾದವು ||
ಸಿಂಹ ಮೊದಲಾದ ಸರ್ವ ಮೃಗಗಳು ಹುಟ್ಟಿದಾವು ಪಶುಗಳು ಹುಟ್ಟಿದಾವು ಶ್ರೋಣಿ ದೇಶದಿ |

* * * *

ಹೀಂಗ ರಾಯಗೆ ಶುಕರು ವಿರಾಟ್‌ಮೂರ್ತಿ ಧ್ಯಾನಹೇಳಿ ದ್ವಿತೀಯ ಸ್ಕಂಧದಲಿ ಪ್ರಥಮಾಧ್ಯಾಯ ಮುಗಿಸಿದಾ |
ವಿರಾಟಮೂರ್ತಿ ಧ್ಯಾನಕಿಂತಾ ಉತ್ತಮವಾದ್ದು ಇಲ್ಲಾ ಎಂದು ನಾನು ನಿನಗೆ ಹೇಳುವೆನು ಯಲೋ ರಾಯನೇ ||
ವಿರಾಟ ಮೂರ್ತಿ ಧ್ಯಾನವನ್ನು ಹೇಳಿ ಕೇಳಿದವರಿಗೆ ಸಾಯುಜ್ಯ ಪದವನೀವ ಹಯವದನನು ||

ಪರಮಾತ್ಮನೇ ಎಲ್ಲ ಚರಾಚರ ಜಗತ್ತಿನ ಸೃಷ್ಟಿಗೆ ಮೂಲವಾಗಿದ್ದಾನೆ. ಸ್ಥಿತಿಕಾಲದಲ್ಲಿ ಬೃಹತ್ ರೂಪದಿಂದ ಆ ಎಲ್ಲ ಸೃಷ್ಟಿಯನ್ನು ಧರಿಸಿನಿಂತಿದ್ದಾನೆ ಇತ್ಯಾದಿ ಸರ್ವವಿವರಗಳನ್ನು ಸರಳವಾಗಿ ನಿರೂಪಿಸುವ ಮೂಲಕ ವೃದ್ಧಿಸಿದ್ದಾರೆ. ಸರ್ವದೇವತೆಗಳು, ಜೀವಿಗಳು, ಅವರ ಸ್ವಭಾವಗಳಾದ ಗುಣಗಳು, ನದಿ, ಸಮುದ್ರ, ಕಾಡು, ಬೆಟ್ಟ, ಪ್ರಾಣಿ, ಪಕ್ಷಿಗಳೆಲ್ಲ ಶ್ರೀಹರಿಯ ಶರೀರವೆಂದೇ ಚಿಂತಿಸಲು ಈ ವಿಧಾನವು ಸಹಾಯಕಾಗಿದೆ.[೪]

ಹೀಗೆ 'ವಿರಾಡ್ರೂಪ ಚಿಂತನೆ'ಯು ಏಕಕಾಲಕ್ಕೆ ಭಗವಂತನ ವ್ಯಾಪ್ತಿ, ಸೃಷ್ಟಿ ಹಾಗೂ ಸ್ಥಿತಿಕಾರ್ಯಗಳನ್ನು ಸ್ಮರಿಸಲು ಸಹಾಯಕವಾಗುವಂತೆ ದಾಸರು ತಮ್ಮ ಸರಳ ಕನ್ನಡ ಕೃತಿಗಳಲ್ಲಿ ವಿವರಿಸಿರುವುದನ್ನು ಇದುವರೆಗೆ ನೋಡಿದೆವು.

### ೬.೧.೩. ಸಾಕಾರ ಧ್ಯಾನ

ಭಾಗವತವು ಭಗವಂತನನ್ನು ಸಾಕಾರ-ಸಗುಣ ನೆಲೆಯಲ್ಲಿ ಕಂಡಿದೆ. ಹರಿದಾಸರು ಶ್ರೀಹರಿಯನ್ನು ಎಲ್ಲೂ 'ನಿರಾಕಾರ' ಎನ್ನಲಿಲ್ಲ. ಅವರು ಧ್ಯಾನ-ಧಾರಣಗಳಿಗೆ ಅನುವಾಗುವಂತೆ ಭುವನೈಕ ಸೌಂದರ್ಯ

ಸಾರನಾದ ಸ್ವಾಮಿಯ ದಿವ್ಯರೂಪವನ್ನು ಅನೇಕ ಕೃತಿಗಳಲ್ಲಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಅವುಗಳಲ್ಲಿ ಶ್ರೀಪಾದರಾಜರ ಒಂದು ರಚನೆಯನ್ನು ಗಮನಿಸಬಹುದು.

ಶ್ರೀರಂಗವಿಠಲನ ಶ್ರೀ ಮುಕುಟಕೆ ಶರಣು ॥ ಪ ॥
ಶಿರದಲೊಪ್ಪುವ ನೀಲಕುಂತಳಕೆ ಶರಣು
ಸಿರಿಸಹೋದರನರ್ಧದವಳಿಗೆ ಶರಣು ॥ ಅ.ಪ ॥

ಸೊಂಪು ನೋಟದ ಚೆಲುವ ಸೋಗೆಗಣ್ಣಿಗೆ ಶರಣು
ಸಂಪಿಗೆಯ ಕುಸುಮಸಮ ನಾಸಿಕಕೆ ಶರಣು
ಗುಂಪುರತ್ನದ ಕರ್ಣಕುಂಡಲಗಳಿಗೆ ಶರಣು
ಇಂಪುದರ್ಪಣನಿಭ ಕಪೋಲಗಳಿಗೆ ಶರಣು ॥ ೧ ॥

ಕುಂದಕುಟ್ಮಲ ಪೋಲ್ವ ದಂತಪಂಕ್ತಿಗೆ ಶರಣು
ಅಂದವಾಗಿರುವ ಬಿಂಬೋಷ್ಠಕೆ ಶರಣು
ಚಂದ್ರಿಕಾನಿಭ ಮುದ್ದುಮಂದಹಾಸಕೆ ಶರಣು
ನಂದಗೋಪನ ಮುದ್ದು ಕಂದನಿಗೆ ಶರಣು ॥ ೨ ॥

ಅಬ್ಜನಾಭನ ದಿವ್ಯ ಕಂಬು ಕಂಠಕೆ ಶರಣು
ಅಬ್ಜಮುಖಿಯಿರುವ ವಕ್ಷಸ್ಥಳಕೆ ಶರಣು
ಕುಬ್ಜೆಯ ಡೊಂಕ ತಿದ್ದಿದ ಭುಜಗಳಿಗೆ ಶರಣು
ಅಬ್ಜಜಾಸನನ ಪೆತ್ತ ನಾಭಿಗೆ ಶರಣು ॥ ೩ ॥

ರನ್ನಗಂಟೆಗಳಿರುವ ನಿನ್ನ ಕಟಿಗೆ ಶರಣು
ಪೊನ್ನ ಕದಳೀ ಪೋಲ್ವ ತೊಡೆಗಳಿಗೆ ಶರಣು
ಪುನ್ನಾಗಕರಗೆತ್ತ ದ್ವಯನಿತಂಬಕೆ ಶರಣು
ಚೆನ್ನಾಗಿ ಕುಣಿವ ಸಮಜಾನುವಿಗೆ ಶರಣು ॥ ೪ ॥

ಮಂಗಳವೈಭೋಗಂಗಳ ಅಂಘ್ರಿದ್ವಯಕೆ ಶರಣು
ತುಂಗ ಕುಚಗಳ ಪಿಡಿದ ಕರಗಳಿಗೆ ಶರಣು
ಪೊಂಗೊಳಲನೂದೂವ ಅಂಗುಲಿಗಳಿಗೆ ಶರಣು
ರಂಗವಿಠಲನ ಸರ್ವಾಂಗಕೆ ಶರಣು ॥ ೫ ॥

ಇದೇ ರೀತಿ ಶ್ರೀ ಹರಿಯ ದಿವ್ಯ ಸುಂದರ ರೂಪವನ್ನು ವರ್ಣಿಸುವ ಪುರಂದರ ದಾಸರ ರಚನೆಯು ವಿವರಗಳಲ್ಲಿ ಭಿನ್ನವಾಗಿರುವುದನ್ನು ತಿಳಿಯಬೇಕು.

ಕಣ್ಣಾರೆ ಕಂಡೆನಚ್ಯುತನ
ಪುಣ್ಯಕೋಟಿ ಕರಿರಾಜವರದನ ॥ ಪ



ಕಸ್ತೂರಿ ಪೆರೆನೊಸಲವನ ತೋರ
ಮುತ್ತಿನ ಹಾರ ಪದಕವ ಧರಿಸಿದನ ||
ಎತ್ತಿದಭಯ ಹಸ್ತದವನ ತನ್ನ
ಭಕ್ತರ ಸ್ತುತಿಗೆ ಹಾರಯಿಸಿ ಹಿಗ್ಗುವನ ||

ನೀಲ ಮೇಘ ಶ್ಯಾಮಲನ ದೇವ
ಲೋಲ ಮಕರ ಕುಂಡಲ ಧರಿಸಿಹನ ||
ಮೂಲೋಕದೊಳಗೆ ಚೆನ್ನಿಗನ ಕಮ
ಲಾಲಯಾಪತಿ ವೈಕುಂಠವಲ್ಲಭನ ||

ಹರಿದಾಸ ಸಾಹಿತ್ಯ ರಾಶಿಯಲ್ಲಿ ಈ ಮಾದರಿಯ ನೂರಾರು ಕೀರ್ತನೆಗಳು ಕಂಡುಬರುತ್ತವೆ. ಅಗಮ್ಯನಾದ, 'ಅಮೂರ್ತ'ನಾದ ದೈವವನ್ನು ಭಕ್ತರ ಉಪಾಸನೆಗಾಗಿ 'ಮೂರ್ತ'ಗೊಳಿಸುವ ಈ ಕೀರ್ತನೆಗಳು ಬಹುಜನಪ್ರಿಯವಾಗಿವೆ.

### ೬.೧.೪. ಜೀವಸಂಸಾರ ಕಥನ

ಭಾಗವತ ತೃತೀಯಸ್ಕಂಧದ 'ಕಪಿಲಗೀತೆ'ಯಲ್ಲಿ 'ಜೀವಿಯು ಹೇಗೆ ದೇಹಾಂತರವನ್ನು ಹೊಂದುವನೆಂಬುದನ್ನು - ಮಾನವ ಜನ್ಮದ ಗರ್ಭಪ್ರವೇಶದಿಂದ ಆರಂಭಿಸಿ ಪುನರ್ಜನ್ಮದವರೆಗಿನ ಒಂದು ಆವರ್ತನದ ವಿವರಣೆಯ ಮೂಲಕ ತಿಳಿಸಲಾಗಿದೆ. ಅಲ್ಲಿಯ ಸಮಸ್ತ ವಿವರಗಳನ್ನು ಅಚ್ಚಗನ್ನಡದಲ್ಲಿ ಪರಿಣಾಮಕಾರಿಯಾಗಿ ಹಾಡಿದ ಕನಕದಾಸರ ಕೃತಿ ಹೀಗಿದೆ.

ಸಾಕು ಸಾಕಿನ್ನು ಸಂಸಾರ ಸುಖವು |
ಶ್ರೀಕಾಂತ ನೀನೊಲಿದು ಕರುಣಿಸೈ ಹರಿಯೆ ||ಪ||

ಉದಿಸಿದುವು ಪಂಚಭೂತಗಳಿಂದ ಓಷಧಿಗಳು ಉದಿಸಿದುದು ಓಷಧಿಗಳಿಂದನ್ನವು
ಉದಿಸಿದುವು ಅನ್ನದಿಂ ಶುಕ್ಲ ಶೋಣಿತವೆರಡು ಉದಿಸಿದುವು ಸ್ತ್ರೀ ಪುರುಷರಲ್ಲಿ ಹರಿಯೆ ||೧||

ಸತಿಪುರುಷರೊಂದಾಗಿ ರತಿಕ್ರೀಡೆಗಳ ಮಾಡೆ ಪತನವಾದಿಂದ್ರಿಯವು ಹೊಲೆರುಧಿರವು
ಸತಿಯ ಉದರದೊಳೆರಡು ಏಕತ್ರ ಸಂಧಿಸುತ ಪುತಪುತನೆ ಮಾಸ ಪರಿಯಂತ ಹರಿಯೆ ||೨||

ಮಾಸವೆರಡರಲಿ ಶಿರ ಮಾಸ ಮೂರರಲಿ ಅಂಗ ಮಾಸ ನಾಲ್ಕರಲಿ ಚರ್ಮದ ಹೊದಿಕೆ
ಮಾಸ ಐದಾರಲಿ ನಖ ರೋಮ ನವರಂಧ್ರ ಮಾಸ ಏಳರಲಿ ಧಾತು ಹಸಿವು ತೃಷೆಯು ||೩||

ತಿಂಗಳೆಂಟರಲಿ ಪೂರ್ವಾನುಭವ ಕರ್ಮಗಳ ಗುಂಗಿನಲಿ ನಾನಿಂತು ಭವಭವದೊಳು
ಅಂಗನೆಯರುದರದಲಿ ಮತ್ತೆ ಮತ್ತೆ ಬಂದು ಭಂಗಪಡೆನೆಂದು ಧ್ಯಾನಿಸುತ ದಿನಗಳೆಯೆ ||೪||

ಇನಿತು ಗರ್ಭದೊಳು ನವ ಮಾಸ ಪರಿಯಂತರದಿ ತನು ಸಿಲುಕಿ ನರಕದಲಿ ಆಯಾಸಗೊಂಡು
ಘನ ಮರುತ ಯೋಗದಿಂ ನರಳುತಿಲ್ಲಿಗೆ ಬಂದು ಜನಿಸುವಲ್ಲಿ ಮೃತಭಾವದಿಂದ ನೊಂದೆನೈ ಹರಿಯೆ ||೫||

ಧರೆಯ ಮೇಲುದಿಸಿ ಬಹು ವಿಷ್ಣು ಮಾಯಕೆ ಸಿಲುಕಿ ಪರವಶದೊಳಿರಲು ನೀರಡಿಕೆಯಾಗಿ
ಹೊರಳಿ ಗೋಳಿಡುತ ಕಣ್ದೆರೆದು ಹರಿಯನು ಮರೆವ ದುರಿತ ರೂಪದ ತನುವ ಧರಿಸಲಾರೆ ||೬||

ಶಿಶುತನದೊಳಗೆ ಸೊಳ್ಳೆ ನೊಣ ಮುಸುಕಿ ಅತ್ತಾಗ ಹಸಿದನಿವನೆಂದು ಹಾಲನೆ ಎರೆವರು
ಹಸಿವು ತೃಷೆಯಿಂದಳಲು ಹಾಡಿ ತೂಗುವರಾಗ ಪಶುತೆರದಿ ಶಿಶುತನದೊಳಿರಲಾರೆ ಹರಿಯೆ ||೭||

ನಡೆಯಲರಿಯದ ದುಃಖ ಮನಸಿನಲಿ ಬಯಸಿದುದ ನುಡಿಯಲರಿಯದ ದುಃಖ ವಿಷಯದಿಂದ
ಅಡಿಯಿಡುತ ಮೆಲ್ಲನೇಳುತ ಬೀಳುತಲಿ ತೊದಲು ನುಡಿವ ಬಾಲ್ಯದೊಳಿರಲಾರೆ ಹರಿಯೆ ||೮||

ಬಾಲ್ಯದೊಳು ಕೆಲವು ದಿನ ಬರಿದೆ ಹೋಯಿತು ಹೊತ್ತು ಗೋಳಿಡುವ ವಿದ್ಯೆ ಕರ್ಮಗಳ ಕಲಿತು
ಮೇಲೆ ಯೌವನದ ಉಬ್ಬಿನೊಳು ಮದುವೆಯಾಗಿ ಬಾಲೆಯರ ಬಯಸಿ ಮರುಳಾದೆ ಹರಿಯೆ ||೯||

ಜ್ವರದ ಮೇಲತಿಸಾರ ಬಂದವೊಲು ಯೌವನದಿ ತರುಣಿಯೊಡನಾಟ ಕೂಟದ ವಿಷಯದಿ
ತರುಣಿ ಸುತರ್ಗನ್ನ ವಸ್ತ್ರಾಭರಣವೆನುತ ಪರರ ಸೇವೆಯಲಿ ಘಟ ನೊಂದೆ ಹರಿಯೆ ||೧೦||

ನೆತ್ತರು ತೊಗಲು ಮೂಳೆ ಮಜ್ಜೆ ಮಾಂಸದ ಹುತ್ತು ಜೊತೆಗಿಂದ್ರಿಯಗಳ ರೋಗ ರುಜಿನದಲಿ
ಮತ್ತೆ ಕಾಲನ ಬಾಯ ತುತ್ತಾಗುವ ಕರ್ಮದ ಕತ್ತಲೆಯೊಳೀ ದೇಹ ಕೊರಡಾಯಿತು ||೧೧||

ದಿಟ್ಟತನದಲಿ ಗಳಿಸಿ ತರುವಾಗ ಸತಿಸುತರು ಕಟ್ಟಿ ಕಾದಿಹರು, ಮುಪ್ಪಡಸಿದಾಗ
ತಟ್ಟನೆ ಬಲು ಕೆಟ್ಟ ನುಡಿಗಳಲಿ ಬೈಯುತ್ತ ಕಟ್ಟಕಡೆಗೆ ಕಣ್ಣೆತ್ತಿ ನೋಡರೈ ಹರಿಯೆ ||೧೨||

ಕಟ್ಟುನಿಟ್ಟಿನ ಭಾರಿ ಮೂಗುಬ್ಬಸದಿ ನೊಂದು ಕಟ್ಟಳೆಯ ದಿನತುಂಬಿ ಮೃತವಾಗಲು
ಕುಟ್ಟಿಕೊಂಡಳಲುತ್ತ ಹೋಯೆಂದು ಬಂಧುಗಳು ಮುಟ್ಟರು ಹೆಣನೆಂದು ದೂರವಿಹರು ||೧೩||

ಸತ್ತ ಹೆಣಕಳಲೇಕೆ ಎಂದು ನೆಂಟರು ಸುಯ್ದು ಹೊತ್ತು ಹೋಯಿತೆನ್ನುತ ಕಸಕೆ ಕಡೆಯಾಗಿ
ಹೊತ್ತುಕೊಂಡಗ್ನಿಯಲಿ ತನುವನಿದ ಬಿಸುಡುವರು ಮತ್ತೆ ಬುವಿಯಲಿ ಜನಿಸಲಾರೆ ಹರಿಯೆ ||೧೪||

ಇನ್ನು ಈ ಪರಿಪರಿಯ ಯೋನಿ ಮುಖದಲಿ ಬಂದು ಬನ್ನವನು ಪಡಲಾರೆ ಭವಭವದೊಳು
ಜನನ ಮರಣಾದಿ ಸರ್ವಕ್ಲೇಶಗಳ ಪರಿಹರಿಸಿ ಸನ್ಮತಿಯೊಳಿರಿಸೆನ್ನ ಆದಿಕೇಶವರಾಯ ||೧೫||

'ಮೂಲ'ದಲ್ಲಿ ಉಪದೇಶ ರೂಪದಲ್ಲಿರುವ ಈ 'ವಸ್ತು'ವನ್ನು ಕನಕದಾಸರು ತನಗೆ ಅನ್ವಯಿಸಿಕೊಂಡು ಹೇಳುವ 'ನಿರೂಪಕ'ನೊಬ್ಬನನ್ನು ಸೃಷ್ಟಿಸಿದ್ದಾರೆ. ಈ ತಂತ್ರವು ಹೆಚ್ಚು ಪರಿಣಾಮ ಬೀರುವುದರಿಂದ, ವೃದ್ಧಿಕಾರ್ಯವೆಂದು ಹೇಳಬಹುದು.

ಇಲ್ಲಿಯ ಬಹುಪಾಲು ವಿಚಾರಗಳು ನಮ್ಮ ಅನುಭವಕ್ಕೆ ವಾಸ್ತವವೆನಿಸುತ್ತವೆ. ಆದರೂ ಇಂತಹ ಕೃತಿಗಳನ್ನು ಕೆಲವರು ಇಷ್ಟಪಡುವುದಿಲ್ಲ. ಆದರೆ ಯಾರೇ ಮೆಚ್ಚಿದರೂ ಮೆಚ್ಚದಿದ್ದರೂ ವಸ್ತುಸ್ಥಿತಿಯು ಸುಳ್ಳಾಗುವುದಿಲ್ಲ. ಈ ದೀಕ್ಷೆಯಿಂದಲೇ ಹರಿದಾಸರು ಈ ಮಾದರಿಯ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಜನ್ಮಾಂತರಗಳ ಅಗಾಧತೆಯನ್ನು ಹೇಳುವ ಅವರ ಕೀರ್ತನೆಯ ಎರಡು ನುಡಿಗಳು ಕನಕದಾಸರ 'ವೃದ್ಧಿ'ಶಕ್ತಿಯ ವಿಶಿಷ್ಟ ಮಾದರಿಯಾಗಿದೆ.

ಹಲವು ಜನುಮದಿ ತಾಯಿ ಎನಗಿತ್ತ ಮೊಲೆಹಾಲು
ನಲಿನಲಿದು ಉಂಬಾಗ ನೆಲಕೆ ಬಿದ್ದುದ ಕೂಡಿ
ಅಳೆದು ನೋಡಿದರೆ ಕ್ಷೀರಾಂಬುಧಿಗೆ ಎರಡು ಮಡಿ
ಹಲವಾರುಸಲ ಅತ್ತ ಅಶ್ರುಜಲವನು ಕೂಡಿ
ಅಳೆದು ನೋಡಿದರೆ ಲವಣಾರ್ಣವಕೆ ಮೂರು ಮಡಿ
ಎಲುವುಗಳು ಕೂಡಿದರೆ ಮೇರುವಿಗೆ ನಾಲ್ಕು ಮಡಿ
ಸುಲಿದು ಚರ್ಮವ ಹಾಸಿದರೆ ಧರೆಗೆ ಐದು ಮಡಿ
ನೆಲೆಯಾವುದೀ ದೇಹಕೆ ||

ತಂದೆ ತಾಯಿಗಳಾರು ಇದ್ದ ಊರಾವುದು
ಹೊಂದಿದ್ದ ಮನೆಯಲ್ಲಿ ಇದ್ದ ಸತಿಸುತರಾರು
ಹಿಂದಿದ್ದ ಕುಲಗೋತ್ರ ನಾಮಂಗಳೆನಗೆಷ್ಟು
ಬಂದಂಥ ಸುಖದುಃಖವೆಷ್ಟು
ಅಂದು ಕೊಂದವರಾರು ಇಂದು ಕಾಯ್ವರದಾರು
ದಂದುಗವನಿದನೆಲ್ಲ ನೀ ಬಲ್ಲೆ ನಾನರಿಯೆ
ತಂದೆ ನೆಲೆಯಾದಿಕೇಶವನೆ ನಿನ್ನಯ ಪಾದ
ದ್ವಂದ್ವವನು ಎಂದಿಗೂ ಬಿಡೆನು ಬಿಡೆನೊ ||

ಎಂಬಲ್ಲಿ ಜನ್ಮಾಂತರವನ್ನು ಒಪ್ಪುವ ಒಟ್ಟಾರೆ ಭಾರತೀಯ ಭಾವವನ್ನು ಇನ್ನಿಲ್ಲವೆಂಬಂತೆ ಚಿತ್ರಿಸಿದ್ದಾರೆ.[೫]

**೬.೧.೫. 'ಭವಾಟವೀವರ್ಣನ'**

ವ್ಯಕ್ತಿಯ ವ್ಯಕ್ತಿತ್ವದಲ್ಲೇ ಕಾಣಿಸಿಕೊಳ್ಳಬಹುದಾದ ದೋಷಗಳು ಅವನ ಮನಸ್ಸನ್ನು ಹಾಳುಮಾಡುತ್ತವೆ. ಅರಿಷಡ್ವರ್ಗವೇ ಮೊದಲಾದ 'ಆಂತರಿಕ' ದೌರ್ಬಲ್ಯಗಳನ್ನೂ, ಬದುಕಿನಲ್ಲಿ ಎದುರಾಗುವ 'ಬಾಹ್ಯ' ಪ್ರಲೋಭನೆಗಳನ್ನೂ ಗೆಲ್ಲುವುದು, ಅದಕ್ಕಾಗಿ ಅವುಗಳ ಬಗ್ಗೆ ಮುನ್ನೆಚ್ಚರಿಕೆ ವಹಿಸುವುದು ಅಗತ್ಯ. ಈ ಅಂಶವನ್ನು ಭಾಗವತ ಚತುರ್ಥಸ್ಕಂಧದಲ್ಲಿ ನಾರದರು ಬರ್ಹಿಷ್ಮಂತ ರಾಜನಿಗೆ ಒಗಟಿನ ರೂಪದಲ್ಲಿ ಉಪದೇಶಿಸಿದ 'ಪುರಂಜನೋಪಾಖ್ಯಾನ'ದಲ್ಲಿ ವಿಸ್ತಾರವಾಗಿ ಚಿತ್ರಿಸಲಾಗಿದೆ. ದಾಸರ ಹತ್ತಾರು 'ಮುಂಡಿಗೆ'ಗಳಲ್ಲಿ ಆ ಭಾಗದ 'ಋಣ ಮತ್ತು ವೃದ್ಧಿ' ಕಾರ್ಯ ನಡೆದಿದೆ.

ಪ್ರಸ್ತುತ ವ್ಯಾಸರಾಯರ ಒಂದು ಸುಳಾದಿಯು ಭವಾಟವೀವರ್ಣನ ಮಾಡುವುದನ್ನು ನೋಡೋಣ. ಅಡವಿಯಲ್ಲಿ ಕಷ್ಟಗಳಿಗೆ ಸಿಕ್ಕು ಆಯಸಪಟ್ಟ ಪಥಿಕನೊಬ್ಬನ ದಾರುಣ ಸ್ಥಿತಿಯನ್ನು ಚಿತ್ರಿಸುವ ವ್ಯಾಜದಿಂದ ಸಂಸಾರಾವಸ್ಥೆಯಲ್ಲಿ 'ಜೀವಿ'ಗೆ ಎದುರಾಗುವ ಆಂತರಿಕ ಬಾಹ್ಯ ಶತ್ರುಗಳ ತೊಂದರೆಯ ನಿರೂಪಣೆ ಹೀಗಿದೆ.

ಧ್ರುವತಾಳ

ಕಾಮವೆಂಬ ಹೆಬ್ಬನ ಕಾಡುಗಿಚ್ಚೊಂದು ಕಡೆಯಲೆನ್ನ ಸುಡುತಲಿದೆ
ಕ್ರೋಧವೆಂಬ ಹೆಬ್ಬುಲಿ ಹಸಿದು ಒಂದು ಕಡೆಯಲೆನ್ನ ತಿನ್ನುತಲಿದೆ
ಲೋಭವೆಂಬ ಮಹರಕ್ಕಸನೊಂದು ಕಡೆಯಲೆನ್ನ ಹೀರುತಲೈದಾನೆ
ಮೋಹವೆಂಬ ಕಗ್ಗತ್ತಲೆಯು ಕವಿದು, ದಿಕ್ಕು ದೆಸೆ ಏನೂ ತಿಳಿಯದಿದೆ
ಮುದವೆಂಬ ಮದಸೊಕ್ಕಿದ ಕಾಡಾನೆ ಒಂದು ಕಡೆಯಲೆನ್ನ ಸೀಳುತಲಿದೆ
ಮತ್ಸರವೆಂಬ ಮಹಾವಿಷದ ಚೇಳೊಂದು ಕಡೆಯಲೆನ್ನ ಊರುತಲಿದೆ
ಈ ಪರಿ ಭವವೆಂಬಡವಿಯಲಿ ನಾನಾಪರಿಯ ಶತ್ರುಗಳಿಗೊಳಗಾದೆ
ಶ್ರೀಪತಿ ಪರಮ ದಯಾನಿಧೆ ದೀನನಾದೆನ್ನೊಡೆಯ ರಕ್ಷಿಸು ಸಿರಿಕೃಷ್ಣ ॥ ೧ ॥

* * *

ರೂಪಕತಾಳ

ಇಂದ್ರಿಯಂಗಳೆಂಬ ಕಳ್ಳರೈವರು ಬಂಧಿಸಿ ತಮ್ಮ ವಿಷಯಕ್ಕೊಯ್ದೆನ್ನ
ಕಂದಿಸಿ ಜ್ಞಾನವೆಂಬ ದೃಷ್ಟಿಯ ಎಂದೆಂದಿನ ಧರ್ಮ ಧನವಸೊಯ್ದರು
ಇಂದಿರೇಶ ಲೋಕಪತಿ ಸಿರಿಕೃಷ್ಣ ಕಾಯೆನ್ನ ತಂದೆ ॥ ೨ ॥

ಝಂಪೆತಾಳ

ನಾನಾ ಗರ್ಭವೆಂಬ ಕಂಪಿನಲೊಮ್ಮೆಮ್ಮೆ ಹೀನೋಚ್ಚ ಜನ್ಮವೆಂಬ ತಗ್ಗುಮಿಟ್ಟೆಯಲೊಮ್ಮೆ
ಸ್ವರ್ಗವೆಂಬ ಪರ್ವತಾಗ್ರದಲೊಮ್ಮೊಮ್ಮೆ ದುರ್ಗತಿಯೆಂಬ ಕಮರಿಯಲಿ ತಾನೊಮ್ಮೆ
ಬಂದೆ ಭವಾಟವಿಯಲ್ಲಿ ನಿನ್ನ ಪಾದಾರವಿಂದದ ನೆಳಲಲಿರಿಸೆನ್ನ ಸಿರಿಕೃಷ್ಣ ॥ ೩ ॥

* * *

ತ್ರಿಪುಟತಾಳ

ಮಾಯೆಯೆಂಬ ದುಷ್ಟರಾಯ ಮಾನವೆಂಬ ಬಿನಗುಮಂತ್ರಿ
ಇಂದ್ರಿಯಗಳೆಂಬ ತಿಂದೋಡುವ ಪರಿವಾರ ಬಿಗಿದು ಕಟ್ಟಿ ಎನ್ನ ಹಗೆಗಳಿಗಿತ್ತರು
ಕಾಮಾದಿ ಹಗೆಗಳ ಶಿಕ್ಷಿಸಿ ರಕ್ಷಿಸಯ್ಯ ಸಿರಿಕೃಷ್ಣ ॥ ೪ ॥

ಜತೆ

ಅತ್ತಿತ್ತ ಸುತ್ತಿ ಭವಾಟವಿಯಲಿ ನೊಂದೆ
ಇತ್ತ ಬಾರೆಂದು ನಿನ್ನ ಹತ್ತಿಲಿರಿಸೊ ಕೃಷ್ಣ

ಭಾಗವತ ಪಂಚಮ ಸ್ಕಂಧದಲ್ಲಿ ಜಡಭರತನು ರಹೂಗಣ ರಾಜನಿಗೆ ಉಪದೇಶಿಸಿದ 'ಭವಾಟವೀ ವರ್ಣನೆ'ಯನ್ನು ವ್ಯಾಸರಾಯರು ಮೇಲಿನ ಸುಳಾದಿಯಲ್ಲಿ ಸರಳವಾಗಿ, ನೇರವಾಗಿ ಚಿತ್ರಿಸಿದ್ದಾರೆ. ವಿದ್ವಾಂಸರಲ್ಲದ, ಶಾಸ್ತ್ರಾಧ್ಯಯನ ಮಾಡಲು ಅವಕಾಶವಿಲ್ಲದ ಸಾಮಾನ್ಯರಿಗೆ, ಮಾತ್ರವಲ್ಲದೆ ಮಕ್ಕಳಿಗೂ ಅರ್ಥವಾಗುವಂತಿರುವ ಈ ನಿರೂಪಣೆಯು 'ದೋಷ ಚಿಂತನೆ'ಯ ಮೂಲಕ ಪರಮಾತ್ಮನಲ್ಲಿ ಶರಣಾದರೆ ಉದ್ಧರಿಸುವನೆಂಬ ಸಂದೇಶ ನೀಡಿ 'ಭಗವತ್ತತ್ತ್ವ'ದ ಚಿಂತನೆಗೆ ಸಹಾಯಕವಾಗುತ್ತದೆ. ಈ ವಿಭಾಗದ ರಚನೆಗಳಲ್ಲಿ ವೇದಾಂತ ಭೂಯಿಷ್ಠವಾದ ವಿಷಯಗಳಿದ್ದೂ, ಪಂಡಿತ ಪಾಮರರೆಲ್ಲರಿಗೂ

ಸಮ್ಮತವಾಗುವಂತೆ-ಸಂವಹನವಾಗುವಂತೆ ಇವೆ. ಸರಸವಾಗಿವೆ. ಸರಳವಾಗಿವೆ. ಇದಕ್ಕಿಂತ ಹೆಚ್ಚಿನದನ್ನು ನಿರೀಕ್ಷಿಸುವುದು ಅಸಹಜವಾಗುತ್ತದೆ.

### ೬.೧.೬. 'ಹರಿಸರ್ವೋತ್ತಮತ್ವ ಚಿಂತನೆ'

ಶ್ರೀಪಾದರಾಜರು ಭಾಗವತ ಪುರಾಣದ ಉದ್ದಗಲಕ್ಕೂ ಕಂಡುಬರುವ ಹರಿಪರತೆಯ ಕಥೆಗಳನ್ನು ಕ್ರೋಢೀಕರಿಸಿ, ಅವುಗಳ ಆಧಾರದಿಂದ ಹರಿಯೇ ಇತರ ಎಲ್ಲ ದೇವತೆಗಳ ಒಡೆಯನೆಂದು ನಿರೂಪಿಸುವ ಕ್ರಮವನ್ನು ಅನುಸರಿಸಿದ್ದಾರೆ.

ಬಿಡಿ ಬಿಡಿ ಸಂದೇಹ ಪೊಡವಿ ಮನುಜರೆಲ್ಲ
ಒಡೆಯನೊಬ್ಬನೆ ಜಗಕ್ಕೆ ರಂಗವಿಠಲ ||

ಎಂಬ ಕೀರ್ತನೆಯಲ್ಲಿ, ಭೃಗು ಋಷಿಯು ತ್ರಿಲೋಕಾಧಿಪತಿಗಳನ್ನು ಸಂದರ್ಶಿಸಿ 'ಪರತತ್ವ'ವನ್ನು ಕಂಡು ಬಂದು ತಿಳಿಸಿದ್ದು, ಲಕ್ಷ್ಮೀದೇವಿಯು 'ಮೃಡ-ಕಮಲಜ ಮುಖ್ಯ ಸುರರ ಜರಿದು' ಹರಿಯನ್ನು ವರಿಸಿದ್ದು, ರಾಜಸೂಯ ಯಾಗಪ್ರಸಂಗದಲ್ಲಿ ಕೃಷ್ಣನೇ ಅಗ್ರಪೂಜೆಗೆ ಭಾಜನನೆಂದು ದೇವವ್ರತನು ನುಡಿದದ್ದು, ಗಂಗಾಧರನು ವಿಷ್ಣುಪಾದೋದಕವಾದ ಗಂಗೆಯನ್ನು ಧರಿಸಿದ್ದು, (ರಂಗವಿಠ್ಠಲನೇ ಜಗಜ್ಜನ್ಮಾದಿ ಕಾರಣನಾಗಿರುವುದು) ಮುಂತಾದ ಘಟನೆಗಳನ್ನು ಅವರು ಈ ತತ್ವ ಚಿಂತನೆಗೆ ಬಳಸಿಕೊಂಡಿದ್ದಾರೆ. ಇಲ್ಲಿಯ ಒಂದು ನುಡಿಯು ಹೀಗಿದೆ.

ಕರಿಪತಿಯ ಸರಸಿಯೊಳು ಮೊಸಳೆ ಪಿಡಿಯಲು ಭರದಿ |
ಪರಮ ಪುರುಷ ಜಗತ್ಪತಿಯೆನ್ನಲು ||
ಗರುಡವಾಹನನಾಗಿ ಹರಿಬಂದವನ ಕಾಯ್ದ |
ಪರದೈವವಾರು ಜಗದೊಳಗೆ ಪೇಳಾ ||

'ಕರಿರಾಜನು ವಿಷ್ಣುವಿನ ಹೆಸರೆತ್ತಿ ಕರೆದಿರಲಿಲ್ಲ. 'ಪರಮಪುರುಷ', 'ಜಗತ್ಪತಿ' ಎಂಬ ವಿಶೇಷಣಗಳಿಂದ ಕೂಗಿದಾಗ; ಇತರ ದೇವತೆಗಳಿಗೆ ಆ ವಿಶೇಷಣಗಳು ಸಲ್ಲುವಂತಿದ್ದರೆ ಅವರೂ ಬರಬಹುದಾಗಿತ್ತು. ಇತರ ಯಾರೂ ಬರದೆ ಹರಿಯೇ ಬಂದು ಅವನನ್ನು ರಕ್ಷಿಸಿದ್ದರಿಂದ ಶ್ರೀ ಹರಿಯೇ ಸರ್ವೋತ್ತಮ' ಎಂದು ಅವರು ನಿರ್ಣಯಿಸಿದ್ದಾರೆ. "ತತ್ವಗಳ ಅನುಸಂಧಾನ ಇವರಿಗೆ ಆತ್ಮೋದ್ಧಾರದ ಸಾಧನ. ಜಿಜ್ಞಾಸುಗಳಿಗೆ ತಿಳಿಸಿಕೊಡಬೇಕಾದ ಕರ್ತವ್ಯ. ಇವರ ದೃಷ್ಟಿ ತತ್ವ ಪ್ರಚಾರದ ದೃಷ್ಟಿಯಲ್ಲ. ಅದರ ಮನನದ ದೃಷ್ಟಿ. ತತ್ವಗಳ ಪ್ರಚಾರದ ಕಲ್ಪನೆ ಇತ್ತೀಚಿನದು. ದೇವರಲ್ಲಿಯ ಸರ್ವೋತ್ತಮತ್ವ, ಗುಣಪೂರ್ಣತ್ವ, ಸೃಷ್ಟ್ಯಾದಿ ಕರ್ತೃತ್ವ ಇವುಗಳನ್ನು ಭಾವಪರವಶರಾಗಿ ಅನುಸಂಧಾನ ಮಾಡಿ ಅವನಿಗೆ ಶರಣಾಗತರಾಗುವುದು ಈ ಹರಿದಾಸರ ಮುಖ್ಯ ಉದ್ದೇಶ"(ಪಾಂಡುರಂಗಿ ಕೆ.ಟಿ., ೧೯೯೪:ii).

ಪುರಂದರ ದಾಸರು ಈ ತತ್ವಚಿಂತನೆಗೆ ತೊಡಗಿ 'ಹರಿಯೆ ಗತಿ ವಿರಿಂಚಿ ಶಿವರಿಗೆ' ಎಂಬ ಕೀರ್ತನೆಯಲ್ಲಿ

"ಹಯಾಸ್ಯನೆಂಬವ ವೇದವ ಕದ್ದೊಯ್ಯೆ|
ಹಯಗ್ರೀವನಾಗಿ ಹರಿಯವನ |
ಕಾಯವ ಖಂಡಿಸಿ ಅಜಗೆ ವೇದವನಿತ್ತು |
ಕಾಯ್ದ ಕರುಣಿ ಕಮಲಾಕ್ಷನೆ ದೈವವೆಂದು ||"

ಹೇಳಲು ಶ್ರೀಹರಿಯು ಹಯಗ್ರೀವನಾಗಿ ಬ್ರಹ್ಮನಿಗೆ ವೇದವನ್ನು ತಂದಿತ್ತ ಅವತಾರ ಕಥೆಯನ್ನು ಬಳಸಿಕೊಂಡಿದ್ದಾರೆ. ಅವರೇ ತಮ್ಮ ಇನ್ನೊಂದು ರಚನೆಯಲ್ಲಿ ಈ ವಿಚಾರಕ್ಕೆ ಭಾಗವತವೇ ಆಧಾರವೆಂದು ಉಲ್ಲೇಖಿಸಿದ್ದಾರೆ :

ಅಂದೆ ನಿರ್ಣಯಿಸಿದರು ಕಾಣೋ
ಇಂದಿರಾಪತಿ ಪರದೈವತವೆಂಬುದ ||ಪ||

ಅಂದು ಚತುರ್ಮುಖ ನಾರದನಿಗೆ ತನ್ನ |
ತಂದೆ ಶ್ರೀಹರಿ ಪರದೈವವೆಂದು ||
ಸಂದೇಹಗಳ ಪರಿಹರಿಸಿದ ದ್ವಿತೀಯದ
ಸ್ಕಂಧದೊಳಯ್ದನೆಯ ಅಧ್ಯಾಯದಲಿ ||

ಕನಕದಾಸರು ತಮ್ಮ ಒಂದು ಕೀರ್ತನೆಯಲ್ಲಿ ಎಲ್ಲರ ಸೃಷ್ಟಿಗೂ ವಿಷ್ಣುವೇ ಆದಿಕಾರಣನಾದ್ದರಿಂದ ಅವನನ್ನೇ 'ಪರಮಾತ್ಮ-ಪರತತ್ವ' ಎಂದು ಅರಿಯಲು ಕರೆಕೊಟ್ಟಿದ್ದಾರೆ. ಅವರೇ ತಮ್ಮ ಇನ್ನೊಂದು ಕೃತಿಯಲ್ಲಿ :

ಕಣಿಯ ಹೇಳಲು ಬಂದೆ ನಾರಾಯಣನಲ್ಲದೆ ಇಲ್ಲವೆಂದು ಮಿಕ್ಕ
ಬಣಗು ದೈವದ ಗೊಡವೆ ಬೇಡ ನರಕ ತಪ್ಪದು

ಎಂದು ಘೋಷಿಸಿದ್ದಾರೆ. ಇಲ್ಲಿ "ಕಣಿ ಹೇಳುವ ಕೊರವಂಜಿಯ ತಂತ್ರದ ಮುಖೇನ ಕನಕದಾಸರು ಹರಿಸರ್ವೋತ್ತಮತ್ವವನ್ನು ಎತ್ತಿಹಿಡಿದಿರುವುದು ಇಲ್ಲಿ ಕಂಡುಬರುತ್ತದೆ. ಜೊತೆಗೆ ಆ ಕಾಲದಲ್ಲಿ ರೂಢಿಯಲ್ಲಿದ್ದ ತಾಮಸ ಆಚರಣೆಗಳನ್ನು ವಾಖಿಲು ಮಾಡಿ, ಅವುಗಳಿಂದ ಮುಕ್ತರಾಗಿ ಹೊರಬನ್ನಿ ಎಂದು ಜನಸಾಮಾನ್ಯರಿಗೆ ಕರೆನೀಡಿರುವುದು ಹೆಚ್ಚು ಗಮನಾರ್ಹ"(ಸುಧಾಕರ, ೧೯೯೯ : ೪೦೦)

ವಾದಿರಾಜರು ರಚಿಸಿದ ಒಂದು ಸುಳಾದಿಯಲ್ಲಿ (ಈ ತತ್ವದ ಚಿಂತನೆಯಲ್ಲಿ) ತಮ್ಮದೇ ಆದ ನಿರೂಪಣಾ ವೈಶಿಷ್ಟ್ಯವನ್ನು ತೋರಿಸಿದ್ದಾರೆ.

ಬೊಮ್ಮ ನಿಮ್ಮ ಹೆಮ್ಮೆಗಿಮ್ಮೆ ಸಾಕು ಕಮ್ಮುಕಿಮ್ಮೆನಬೇಡ
ರಮ್ಯ ರಮೇಶ ಹಯವದನ ಅಮ್ಮಮ್ಮ ನಿಮ್ಮ ಗುರುವಲ್ಲವೆ



ಎಂದು ಆರಂಭವಾಗುವ ಈ ಕೃತಿಯ ಮುಂದಿನ 'ತಾಳ'ದಲ್ಲಿ; ಹರಿಯೇ ಬ್ರಹ್ಮನನ್ನು ಪಡೆದ ತಂದೆಯಾದ್ದರಿಂದಲೂ; ತ್ರಿಪುರದಹನಕ್ಕೆ 'ಬುದ್ಧನಾಗಿ ಸತಿಯರ ಬುದ್ಧಿಕೆಡಿಸಿ; ಮುದ್ದುಗೋವಾಗಿ ಪುರದ ಕೂಪಾರದೊಳಗಿದ್ದ ಸುಧೆಯ ನೀಂಟಿ' ಶಿವನಿಗೆ ಸಹಾಯಕನಾದ್ದರಿಂದಲೂ ಇಂದ್ರಾದಿದೇವತೆಗಳಿಗೆ 'ಉಪೇಂದ್ರ'ನಾಗಿ ರಾಜ್ಯತಂದಿತ್ತದ್ದರಿಂದಲೂ, ಶ್ರುತಿ, ಸ್ಮೃತಿ, ಗರ್ಭಸ್ತುತಿಗಳ ಆಧಾರದಿಂದಲೂ 'ಹರಿಸರ್ವೋತ್ತಮತ್ವ'ವನ್ನು ಚಿಂತಿಸಿದ್ದಾರೆ.

'ಎಲ್ಲರ ಲಯವಾದ ನಂತರವೂ ಇರುವವನೇ ಹೆದ್ದೈವ. ವಿಷ್ಣುವಿಗೆ ಹೊರತಾದ ಬೇರೊಬ್ಬ ಪರದೈವ ಇದ್ದಿದ್ದರೆ ಅಂತಹವನು ಪ್ರಳಯಕಾಲದಲ್ಲೂ ಇರುವನೆಂದು ಯಾರಾದರೂ ಹೇಳಬೇಕಾಗಿತ್ತಲ್ಲವೆ? ಎಂಬ ತರ್ಕವನ್ನು ಮನಸ್ಸಿನಲ್ಲಿಟ್ಟುಕೊಂಡು; ಸುಳಾದಿಯ ಕೊನೆಯಲ್ಲಿ

'ಇನ್ನೊಬ್ಬ ದೇವನಿದ್ದರೆ ನಮ್ಮ ದೇವನಂತೆ
ಕಗ್ಗಲೆಯ ಮೇಲಾದರು ಲಯದಲಿರಬೇಡವೆ'

ಎಂದು ಪ್ರಶ್ನಿಸಿದ್ದಾರೆ. ಭಾಗವತದ ವಿಚಾರಗಳಿಗೆ ಋಣಿಯಾಗಿರುವಾಗಲೇ ಈ ಎಲ್ಲ ಮಹನೀಯರು ತಮ್ಮ ಉಕ್ತಿ ಚಾತುರ್ಯ ಹಾಗೂ ಗ್ರಥನಕೌಶಲಗಳ ಮೂಲಕ ಮೂಲದ ಗಹನತೆಯನ್ನು ಸರಳಗೊಳಿಸುವ ಮೂಲಕ ವೃದ್ಧಿಸಿದ್ದಾರೆ.

ಇಲ್ಲಿ ಒಂದು ವಿಚಾರಣೀಯ ಅಂಶವಿದೆ. ಹರಿದಾಸರು ಕೈಗೊಂಡ 'ಹರಿಸರ್ವೋತ್ತಮತ್ವ ಪ್ರತಿಪಾದನೆ'ಯಲ್ಲಿ ಇತರ ದೇವತೆಗಳನ್ನು ಅಪಮಾನಿಸುವ, ಇತರ ಮತಗಳನ್ನು ನಿಂದಿಸುವ ರೀತಿಯ ಮಾತುಗಳಿಲ್ಲ. ದಾಸರು ತಮ್ಮ ತಾತ್ವಿಕ ಅಗತ್ಯಕ್ಕಾಗಿ ಮಾತ್ರ ಈ ಪ್ರಮೇಯವನ್ನು ಮಂಡಿಸುತ್ತಾರೆಂಬುದನ್ನು ಮರೆಯಬಾರದು. ಡಾ.ಧೂಳಖೇಡ ನಾರಾಯಣಾಚಾರ್ಯರು ಹೇಳುವಂತೆ

"ವಿಷ್ಣುಪಾರಮ್ಯ, ನಿರತಿಶಯವಾದ ಭಕ್ತಿ, ಸರ್ವಸಮರ್ಪಣಭಾವ - ಈ ಮೂರು ಭಾಗವತ ಧರ್ಮದ ಜೀವನಾಡಿಗಳು. ಇವೇ ಭಾಗವತನಾದವನ ಗತಿ-ಗೋತ್ರಗಳು. ಭಗವಂತನು ಸದಾ ತನ್ನ ಸ್ವಾಮಿಯು, ಅವನೇ ಈಶನು. ತಾನು ಸದಾ ಆ ಈಶನ ದಾಸನು. ಭಾಗವತನಾದವರಿಗೆ ತನ್ನ ದಾಸ್ಯತ್ವದ ಅರಿವು ಸದಾ ಜಾಗೃತವಾಗಿರುತ್ತದೆ. 'ತವ ದಾಸೋಸ್ಮಿ ಕೇವಲಂ' ಎಂದು ಆ ವಿಷ್ಣು ಪಾದಕ್ಕೆ ಸದಾ ಹಣೆ ಮಣಿಯುತ್ತಾನೆ. ತಾನೆಂದೂ ಆ ಬ್ರಹ್ಮನ ಸಮಾನ ಸ್ಥಾನಕ್ಕೆ ಏರಲಾರ; ಅಥವಾ ಆ ಭಗವಂತನೇ ಆಗಲಾರ ಎನ್ನುವುದು ಪರಮ ಭಾಗವತನ ನಿತ್ಯ ನಂಬಿಗೆ, ಈಶ-ದಾಸ್ಯ ಭಾವ ಭಾಗವತ ಧರ್ಮದ ಉಸಿರು. ಹೀಗಿದ್ದರೇ ಭಕ್ತಿ ಮುಕ್ತವಾದ ಸರ್ವಸಮರ್ಪಣೆ ಸಾಧ್ಯ. ಭಾಗವತನಾದವನಿಗೆ ವಿಷ್ಣು ಪಾರಮ್ಯವನ್ನು ಬಿಟ್ಟು ಬದುಕೇ ಇಲ್ಲ. 'ಸರ್ವ ವಿಷ್ಣುಮಯಂ ಜಗತ್' ಎಂಬುದು ಸದಾ ಅವನಿಗೆ ಅನುಭವ ವೇದ್ಯ." (ನಾರಾಯಣಾಚಾರ್ಯ ಧೂಳಖೇಡ ೧೯೯೩ : ೪೯)

ಎಂಬ ಅಭಿಪ್ರಾಯದ ಹಿನ್ನೆಲೆಯಲ್ಲಿ ಗ್ರಹಿಸಿದರೆ ಈ 'ವಿಷ್ಣುಪರತ್ವ' ಸ್ಥಾಪನೆಯು ದಾಸರ 'ಆಂತರಿಕ ಅಗತ್ಯ'ವಾಗಿತ್ತು ಎಂಬ ಅಂಶ ದೃಢಪಡುತ್ತದೆ.

## ೬.೨. ಆಚರಣಾತ್ಮಕ ವೈಶಿಷ್ಟ್ಯಗಳು

ತತ್ವವು ಕೇವಲ ಉಪದೇಶದಲ್ಲೇ ಪರ್ಯವಸಾನವಾದರೆ ಅರಣ್ಯರೋದನದಂತೆ ವ್ಯರ್ಥವಾಗುತ್ತದೆ. ಆದ್ದರಿಂದ ತತ್ವಗಳಿಗೆ ಚಿಂತನೆಯ ಜೊತೆಗೆ ಆಚರಣಾತ್ಮಕ ಮುಖವೂ ಇದೆ. ಅಂಥ ಆಚರಣಾತ್ಮಕ ತತ್ವಗಳನ್ನು ದಾಸರು ತಮ್ಮ ಕೃತಿಗಳಲ್ಲಿ ಪ್ರತಿಪಾದಿಸಿದ ಬಗೆಯನ್ನು ಈ ಉಪ-ಅಧ್ಯಾಯದಲ್ಲಿ ನೋಡಬಹುದು.

ಹರಿದಾಸರ ಸಮಸ್ತ ಆಚರಣೆಗಳನ್ನು 'ಭಕ್ತಿ' ಎಂಬ ಒಂದೇ ಪದದಲ್ಲಿ ಹೇಳಬಹುದು. ದಾಸರ ಭಕ್ತಿಕವನಗಳು ಭಾಗವತವು ಹೆಸರಿಸುವ ಭಕ್ತಿಯ ನವಲಕ್ಷಣಗಳನ್ನೂ (ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಮತ್ತು ಆತ್ಮನಿವೇದನ); ಪಂಚ ಮೋಕ್ಷಮಾರ್ಗ[೭] (ಕಾಮ, ಭಯ, ದ್ವೇಷ, ಸಂಬಂಧ ಹಾಗೂ ಸ್ನೇಹ)ಗಳನ್ನೂ ಒಳಗೊಂಡಿದೆ. ಹರಿದಾಸರ ಕೃತಿಗಳ ಭಕ್ತಿಸ್ವರೂಪವು ಈಗಾಗಲೇ ಸಮಗ್ರ ಅಧ್ಯಯನಕ್ಕೆ ಒಳಪಟ್ಟಿರುವುದರಿಂದ[೮] ಇಲ್ಲಿ ಶ್ರವಣ-ಕೀರ್ತನೆ-ಸ್ಮರಣೆ-ಸರ್ವಸಮರ್ಪಣೆ ಹಾಗೂ ಬಿಂಬೋಪಾಸನೆಗಳನ್ನು ಮಾತ್ರ ವಿವೇಚಿಸಲಾಗುವುದು.

### ೧. ಶ್ರವಣ

ಹರಿದಾಸರಲ್ಲಿ ಭಗವನ್ಮಹಿಮಾ ಶ್ರವಣಕ್ಕೆ ಮಹತ್ವದ ಸ್ಥಾನವಿದೆ. ಅದು ಭಕ್ತನ ಆದ್ಯಕರ್ತವ್ಯವಾಗಿದೆ.[೯] 'ಹರಿಚರಿತೆ ಶ್ರವಣ ದುರಿತಕುಚ್ಚಾಟನ...' 'ಶ್ರವಣವೆ ಶುಭದ ಬೆಳಗು', 'ಕೀರ್ತನೆಯೆ ಲೇಸಿನ ಹೆಚ್ಚಿಗೆ', 'ಸ್ಮರಣವಚ್ಚಸುಖ' ಎಂಬುದು ಶ್ರೀಪಾದರಾಜರಿಗೆ 'ಅನುಭವಸಿದ್ಧ' ವಾದುದೆಂದು ಅವರೇ ಒಂದು ಕೀರ್ತನೆಯಲ್ಲಿ ಉಲ್ಲೇಖಿಸಿದ್ದಾರೆ. ಅವರು ವಿಶಾಲಕರ್ಣಕ್ಕೆ ವಿಷ್ಣುಕಥೆಯೇ ಭೂಷಣವೆಂದಿದ್ದಾರೆ.

ಅವರ ಶಿಷ್ಯರಾದ ವ್ಯಾಸರಾಯರು 'ನೇತ್ರಗಳು ಕೃಷ್ಣನ ಮೂರ್ತಿಯನು ನೋಡುತಿವೆ ಶ್ರೋತ್ರಗಳು ಹರಿಕಥೆಯ ಕೇಳುತಲಿವೆ'. ಎಂಬ ಕಾರ್ಯದ ಮೂಲಕ (ಇಂತಹ ಶ್ರವಣವು ಭಗವದ್ಭಕ್ತರ ಸಹಜಲಕ್ಷಣವೇ ಆದ್ದರಿಂದ, ತಾವು ಭಕ್ತಸಮೂಹದಲ್ಲಿ ಸೇರಿದಂತಾಯಿತೆಂದು ತೃಪ್ತಭಾವದಿಂದ ಉದ್ಗಾರವೆತ್ತಿದ್ದಾರೆ. ವ್ಯಾಸರಾಯರೇ ಇನ್ನೊಂದು ಕೀರ್ತನೆಯಲ್ಲಿ 'ಶ್ರವಣಾದಿಯನೊಂದೆ ಕ್ಷಣವು ಬಿಡದೆ ಮಾಡು ಭುವನ ಪಾವನ ಕೃಷ್ಣನ ಚಿತ್ತವ ಪಡೆವರೆ' ಎಂದು ಸಾಧಕರಿಗೆ ಕರೆಕೊಟ್ಟಿದ್ದಾರೆ.

ಹರಿನಾಮ ಕೀರ್ತನೆಯ ಭಕುತಿಯಿಂ ಕೇಳ್ವ |
ಚಿರಸ್ವಭಾವದಲಿ ಕಣ್ಣೊರತೆಯ ತಾಳ್ವ |
ಹರಿಯಂತೆ ಕೂಗಿ ಸುಜನರೊಳು ಬಾಳ್ವ |

ದುರಿತ ಗಜಗಳ ಮಂಡೆಯನೇರಿ ಸೀಳ್ವ |
ಹರುಷಾಮೃತಾಬ್ಧಿಯೊಳು ಇಳಿಮುಳಿಗೇಳ್ವ |
ಪುರಂದರ ವಿಠಲೇಶನ ಹೊಂದಿ ತಾ ಬಾಳ್ವ ||

ಎಂಬ ಉಗಾಭೋಗವು 'ಶ್ರವಣ'ವೆಂಬ ಆಚರಣಾತ್ಮಕ ತತ್ವದ ಮಹತ್ವವನ್ನೂ, ಆ ಮೂಲಕ ಭಕ್ತನಲ್ಲಿ ಗೋಚರಿಸುವ 'ಅನುಭಾವ'(ಭಕ್ತಿಕಾರ್ಯ)ವನ್ನೂ[೧೦] ಉಪಮೆ-ರೂಪಕಗಳೊಂದಿಗೆ ಪ್ರತಿಪಾದಿಸುವ ಮೂಲಕ ವೃದ್ಧಿಸಿದೆ.

**೨. ಕೀರ್ತನ**

ತನಗೆ ತಿಳಿದ ಭಗವಂತನ ನಾಮಗಳನ್ನು, ಕತೆಗಳನ್ನು ರೂಪ-ಕ್ರಿಯೆ-ಗುಣಗಳನ್ನು ಭಕ್ತರಗೋಷ್ಠಿಯಲ್ಲೂ, ಏಕಾಂತದಲ್ಲೂ ಹಾಡುವುದು 'ಭಕ್ತ'ನ ಒಂದು ಲಕ್ಷಣವಾಗಿದೆ. ಹಾಗೆ ಹಾಡುವಾಗ ತಪ್ಪುಗಳಿದ್ದರೂ ಸ್ವೀಕಾರಾರ್ಹವೆಂದು ಭಾಗವತದಲ್ಲಿ ನಾರದರು ತಿಳಿಸಿದ್ದಾರೆ.

ಸವಾಗ್ವಿಜಗೋ್ ಜನತಾಘುವಿಪ್ಲವೋ
ಯಸ್ಮಿನ್ ಪ್ರತಿಶ್ಲೋಕಮಬದ್ಧವತ್ಯಪಿ|
ನಾಮಾನ್ಯನಂತಸ್ಯ ಯಶೋಂಕಿತಾನಿಯತ್
ಶೃಣ್ವಂತಿ ಗಾಯಂತಿ ಗೃಣಂತಿ ಸಾಧವಃ ||

(ಭಾಗವತ : ೧)

(ಭಗವಂತನ 'ನಾಮ'-'ಮಹಿಮೆ'ಗಳ ಕೀರ್ತಿಯನ್ನು ಕೊಂಡಾಡುವ ಶ್ಲೋಕಗಳಲ್ಲಿ ಎಷ್ಟೇ ತಪ್ಪುಗಳಿದ್ದರೂ ಆ ರಚನೆಯು ಜನರ ಪಾತಕಗಳನ್ನು ನಿವಾರಿಸುತ್ತದೆ. ಅದನ್ನು ಸಜ್ಜನರು ಕೇಳುತ್ತಾರೆ-ಹಾಡುತ್ತಾರೆ-ಅಥವಾ ಹೇಳಿಕೊಳ್ಳುತ್ತಾರೆ) ಆದ್ದರಿಂದ 'ಗೀತ-ನರ್ತನ' ಮಾಧ್ಯಮದಲ್ಲಿ ಹರಿಕೀರ್ತನೆ ಮಾಡುವ ಸಂಪ್ರದಾಯವು ಮೂಲದಲ್ಲೇ ಕಂಡುಬರುತ್ತದೆ. ಆ ಪದ್ಧತಿಯನ್ನು ಸ್ವೀಕರಿಸಿದ ಪುರಂದರದಾಸರು:

ತಂಬೂರಿ ಮೀಟಿದವ ಭವಾಬ್ಧಿ ದಾಟಿದವ
ತಾಳವ ತಟ್ಟಿದವ ಸುರರೊಳು ಸೇರಿದವ
ಗೆಜ್ಜೆಯ ಕಟ್ಟಿದವ ಖಳರೆದೆಯ ಮೆಟ್ಟಿದವ
ಗಾಯನ ಮಾಡಿದವ ಹರಿಮೂರ್ತಿಯ ನೋಡಿದವ
ಪುರಂದರವಿಠಲನ ನೋಡಿದವ ವೈಕುಂಠಕೋಡಿದವ

ಎಂಬ ಉಗಾಭೋಗದಲ್ಲಿ 'ಕೀರ್ತನ'ದ ಮಹತ್ವವನ್ನು ಸಾರಿದ್ದಾರೆ.

**೩. ಸ್ಮರಣ**

ಹರಿನಾಮ ಸ್ಮರಣೆಯು ಹರಿದಾಸರ ಎಲ್ಲ ಕೀರ್ತನೆಗಳ ಕೇಂದ್ರಕಾಳಜಿಯಾಗಿದೆ. ಭಗವಂತನನ್ನು ಭಕ್ತಿಯ ಮೂಲಕ ಒಲಿಸಿಕೊಳ್ಳಲು ಇರುವ ಅನೇಕ ಸಾಧನಗಳಲ್ಲಿ ನಾಮಸ್ಮರಣೆಯು ಅತ್ಯಂತ ಸರಳ-

ಸುಲಭ ಸಾಧನವಾಗಿದೆ. 'ರಾಮಮಂತ್ರವ ಜಪಿಸೋ' ಎಂಬ ಕೀರ್ತನೆಯಲ್ಲಿ ಪುರಂದರದಾಸರು 'ಸ್ನಾನ, ಮೌನ, ಜಪ, ತಪ, ನೇಮ, ನಿಷ್ಠೆಗಳನ್ನು ನಡೆಸಲು ಸಾಧ್ಯವಾಗದವರೂ ಸಹ ನಾಮಸ್ಮರಣೆಯನ್ನು ಕೈಗೊಳ್ಳಬಹುದು; ನಾಮಮಂತ್ರಕ್ಕೆ ಗುರುಪದೇಶದ ಅಗತ್ಯವೂ ಇಲ್ಲ'ವೆಂದು ತಿಳಿಸಿದ್ದಾರೆ. ಮುಂದುವರಿದು

ಸ್ಮರಣೆಯೊಂದೆ ಸಾಲದೆ ಗೋವಿಂದನ |
ಸ್ಮರಣೆಯೊಂದೆ ಸಾಲದೆ ||ಪ||

ಕಡುಮುರ್ಖನಾದರೇನು ದಾನ-ಧರ್ಮ |
ಕೊಡದಾತನಾದರೇನು ||
ಬಡವನಾದರೇನು ವಿಜಾತಿಯಾದರೇನು |
ಒಡನೆ ಪ್ರಹ್ಲಾದನ್ನುದ್ಧರಿಸಿದ ಶ್ರೀಹರಿಯ ||

ಈ ಸಾಲುಗಳಲ್ಲಿ ಭಕ್ತಿಗೆ ಜಾತಿ ಅಡ್ಡಬರುವುದಿಲ್ಲವೆಂದು ತಿಳಿಸಿದ್ದಾರೆ.

ನಾಲಂ ದ್ವಿಜತ್ವಂ ದೇವತ್ವಮೃಷಿತ್ವಂ ವಾಸುರಾತ್ಮಜಾಃ|
ಪ್ರೀಣನಾಯ ಮುಕುಂದಸ್ಯ ನ ವೃತ್ತಂ ನ ಬಹುಜ್ಞತಾ ||
(ಭಾಗವತ:೭.೭.೫೧)

ಭಗವಂತನನ್ನು ಮೆಚ್ಚಿಸಲು ದ್ವಿಜತ್ವವಾಗಲಿ, ದೇವತ್ವವಾಗಲಿ, ಋಷಿತ್ವವಾಗಲಿ, ಆಚಾರವಂತಿಕೆಯಾಗಲಿ, ಶಾಸ್ತ್ರಜ್ಞವಾಗಿರುವಿಕೆಯಾಗಲಿ ಸಾಲದು.

ನದಾನಂ ನ ತಪೋ ನೇಜ್ಯಾ ನಶೌಚಂ ನ ವ್ರತಾನಿ ಚ |
ಪ್ರಿಯತೇಽಮಲಯಾ ಭಕ್ತ್ಯಾ ಹರಿರನ್ಯದ್ವಿಡಂಬನಮ್||
(ಭಾಗವತ : ೭.೭.೫೨)

"ಭಕ್ತಿ ಇತಿಹಾಸದ ಬೆಳವಣಿಗೆಯನ್ನು ಕುರಿತು ಹೇಳುವಲ್ಲಿ ಭಾಗವತವು ಒಂದು ಮೈಲುಗಲ್ಲು ಎಂದು ಹೇಳಬಹುದು. 'ಏಕಾಂತ ಭಕ್ತಿರ್ಗೋವಿಂದೇ' ಎಂದು ಹೇಳುವ ಭಾಗವತವು ಏಕಾಂತ ಭಕ್ತಿಯು ಅತಿ ಶ್ರೇಷ್ಠಮಟ್ಟದ್ದು ಎಂದು ಹೇಳುತ್ತದೆ. 'ಸಾತ್ವಿಕ ಗುಣಗಳನ್ನು ತೋರುವ ಅಂತ್ಯಜನು ಕೂಡ ಭಾಗವತನೇ. 'ಸತ್ವಾಧಿಕಃ ಪುಲ್ಕಸೋಽಪಿ ಯಸ್ತು ಭಾಗವತಃ ಸದಾ' ಇದು ಭಾಗವತ ತತ್ವ. ತರುವಾಯ ಬಂದ ಹರಿದಾಸರು ಈ ವಿಚಾರವನ್ನು ವಿಸ್ತೃತವಾಗಿ ಪ್ರಕಟಿಸಿದ್ದಾರೆ"(ಕುಲಕರ್ಣಿ ಎನ್.ಕೆ., ೧೯೮೭: ೧೩) ಈ ಹಿನ್ನೆಲೆಯಲ್ಲಿ ಕನಕದಾಸರ ಸಾಮಾಜಿಕ ಕೀರ್ತನೆಗಳು ರಚಿತವಾದಂತಿದೆ. ಉದಾ.

ಹರಿಯೆ ಸರ್ವೋತ್ತಮ ಹರಿಯೆ ಸರ್ವೇಶ್ವರ
ಹರಿಮಯವೆಲ್ಲವೆನುತ ತಿಳಿದು
ಸಿರಿ ಕಾಗಿನೆಲೆಯಾದಿ ಕೇಶವರಾಯನ
ಚರಣ ಕಮಲವ ಕೀರ್ತಿಸುವನೆ ಕುಲಜ

ಎಂಬಲ್ಲಿ ಇದೇ ಭಾವವಿದೆ. ಮುಂದುವರಿದು ಪುರಂದರದಾಸರು

ಪಾತಕಿಯಾದರೇನು ಸರ್ವಲೋಕ |
ಘಾತಕಿಯಾದರೇನು ||

ಎಂದು ನಾಮಸ್ಮರಣೆಯಿಂದ ಪಾಪಿಗಳೂ ಉದ್ಧೃತರಾಗಬಹುದೆಂದು ಸೂಚಿಸಿದ್ದಾರೆ.

ಹಿಂದೆ ಪಿಂಗಳೆಯಾದಂದು ನಿನ್ನ ಚೆಂದದ ಗೋಪಾಲ ಮೂರುತಿಯ
ಒಂದು ಬಾರಿ ನೆನೆದ ಕುಬುಜೆಗೆ ಎಂದೆಂದು ನಿನ್ನನಿತ್ತೆ
ಎಂದಾದರೊಮ್ಮೆ ನೆನೆದರೆ ಒಮ್ಮೆ ನೆನೆದರೆ
ಎಂದೆಂದಿಗೂ ಬಿಡೆಯೆಲೊ ಸಿರಿಕೃಷ್ಣ

ಎಂಬ ವ್ಯಾಸರಾಯರ ಉಗಾಭೋಗವು ಪುರಂದರದಾಸರ ಮೇಲಿನ ಕೀರ್ತನೆಯ ವಿಚಾರವನ್ನು ಸಮರ್ಥಿಸುವಂತಿದೆ. ಪುರಂದರದಾಸರು 'ಹರಿನಾಮವಿದ್ದರೆ ಸಾಕು; ಪ್ರತ್ಯೇಕವಾಗಿ ಭಗವಂತನ ಹಂಗು ಬೇಡ'ವೆಂದಿದ್ದಾರೆ.

ನೀನೇಕೊ ನಿನ್ನ ಹಂಗೇಕೊ - ನಿನ್ನ
ನಾಮದ ಬಲವೆನಗಿದ್ದರೆ ಸಾಕೊ || ಪ ||

ಹಸುಳೆ ಧ್ರುವರಾಯನು ಅಡವಿಗೆ ಪೋಪಾಗ
ವಸುದೇವಸುತ ನಿನ್ನ ನಾಮವೆ ಕಾಯ್ದಿತೊ ||

* * *

ನಿನ್ನ ನಾಮಕೆ ಸರಿಯಾವುದು ಕಾಣೆನೊ |
ಪನ್ನಗಶಯನ ಶ್ರೀ ಪುರಂದರ ವಿಠಲ ||

ಎಂದು ಸ್ಮರಣೆಯ ಮಹತ್ವವನ್ನು ಅತಿಶಯಗೊಳಿಸಿ ಹೇಳುವ 'ಧ್ವನಿ'ಯು ಮೇಲಿನ ಕೀರ್ತನೆಯಲ್ಲಿ ಕಂಡುಬರುತ್ತದೆ.

ನಾರಾಯಣ ನಿನ್ನ ನಾಮದ ಸ್ಮರಣೆಯ
ಸಾರಾಮೃತವು ಎನ್ನ ನಾಲಿಗೆಗೆ ಬರಲಿ |

ಪುರಂದರರ ಈ ಕೀರ್ತನೆಯು 'ಜ್ವರ, ಚಳಿ, ಹಸಿವು, ನೀರಡಿಕೆ, ಏಳುವುದು, ಬೀಳುವುದು ಮುಂತಾದ ಎಲ್ಲ ಅವಸ್ಥೆಗಳಲ್ಲೂ, ಕೊನೆಗೆ ಮರಣಕಾಲದಲ್ಲೂ 'ಎಂತೋ' (ಅಪ್ರಯತ್ನವಾಗಿ) ಹರಿಯನಾಮ ನಾಲಗೆಗೆ ಬರಬೇಕೆಂದು ಬೇಡುತ್ತಾ ಭಾಗವತ ಪಂಚಮಸ್ಕಂಧದ "ಅಥಕಥಂಚಿತ್ ಸ್ಖಲನ..." ಎಂಬ ಗದ್ಯಖಂಡವನ್ನು ಸತ್ವಯುತವಾಗಿ ವೃದ್ಧಿಸಿದೆ.

(ಈಗಲೆ ಭಜಿಸೆಲೆ ಜಿಹ್ವೆ)
ಮರಣ ತೊಡಗಿ ನಾಲಿಗೆಯುಡುಗಿ ನಿನ್ನ
ತರುಣಿ ಪುತ್ರ ಮಿತ್ರರಳುತಿರಲು ||
ಕೊರಳೊಳು ಗುರುಗುರು ಗುರುಗುಟ್ಟುವಾಗ ನರ
ಹರಿಯ ನಾಮವೆನ್ನಗೊಡದೆಲೊ ಪ್ರಾಣಿ ||

ಈ ಭಾವವು ದಾಸರ ಅನೇಕ ಕೀರ್ತನೆಗಳಲ್ಲಿ ಪುನರಾವೃತ್ತಿಗೊಳ್ಳುತ್ತದೆ. "ಪುರಂದರದಾಸರು ರಾಮಾಯಣ, ಭಾರತ, ಭಾಗವತಗಳ ಘಟನಾವಳಿಗಳನ್ನು ಬಹು ಅರ್ಥವತ್ತಾಗಿ ಬಳಸಿಕೊಳ್ಳುತ್ತಾರೆ. ತಮ್ಮನ್ನು ಉದ್ಧಾರಮಾಡಬಲ್ಲ ಹರಿನಾಮವು ಬಲಿಯ ಮನೆಗೆ ವಾಮನ ಬಂದಂತೆ, ಭಗೀರಥಗೆ ಶ್ರೀಗಂಗೆ ಬಂದಂತೆ, ಮುಚುಕುಂದಗೆ ಶ್ರೀಮುಕುಂದ ಬಂದಂತೆ, ವಿದುರನ ಮನೆಗೆ ಶ್ರೀಕೃಷ್ಣಬಂದಂತೆ ವಿಭೀಷಣನ ಮನೆಗೆ ಶ್ರೀರಾಮ ಬಂದಂತೆ ಬಂದು ನಾಲಿಗೆಯ ಮೇಲೆ ನಿಂತು ನಲಿದಾಡಾಲೆಂದು ಬೇಡಿಕೊಳ್ಳುವರು. ಶ್ರೀಕೃಷ್ಣನ ಚರಣವನ್ನು ಸ್ತುತಿಸುವಾಗ ಅದರ ಸೋಂಕಿನಿಂದ ಉದ್ಧಾರರಾದ ಭಕ್ತಶಿರೋಮಣಿಗಳ ಸ್ಮರಣೆಯಾಗುವುದು. ಜನಮನದಲ್ಲಿ ಮನೆ ಮಾಡಿಕೊಂಡಿರುವ ಈ ಚಿರಪರಿಚಿತ ಕಥೆಗಳ ಮೂಲಕವೇ ಬೋಧೆ ಮಾಡುವ ಈ ಕ್ರಮವು ಆದರ್ಶಪ್ರಾಯವಾಗಿದೆ (ವರದರಾಜರಾವ್ ೧೯೬೭:೫೨). ಕನಕದಾಸರು ಒಂದು ಉದಯರಾಗದಲ್ಲಿ ಹರಿಸ್ಮರಣೆಯ ಜೊತೆಗೆ ಭಾಗವತೋತ್ತಮರ ಸ್ಮರಣೆಯೂ ಬರುವಂತೆ ಅಳವಡಿಸಿದ್ದಾರೆ.

ಅಂಜನಾಸೂನು ಫಣಿಪತಿ ಗರುಡ ಪ್ರಹ್ಲಾದ
ಕುಂಜರಾಧಿಪ ಬಲಿ ವಿಭೀಷಣ ಧ್ರುವ
ರಂಜಕದ ಮೋಹಿನಿಯ ಗೆಲಿದ ರುಕುಮಾಂಗದನು ಧ
ನಂಜಯನಾತ್ಮಸಂಭವನ ಸಂಜಾತ ವಿದುರನಕ್ರೂರ
ಮುಂಜಾವದಲಿ ಮುಮುಕ್ಷುಗಳು ಬಂದರು ದಯಾ
ಪಂಜರವೊಲಿದುಪ್ಪವಡಿಸೊ ಹರಿಯೆ

ದಾಸರ ಪದಗಳನ್ನು 'ದೇವರನಾಮ'ಗಳು ಎಂಬ ಹೆಸರಿನಿಂದಲೇ ಕರೆಯುವುದು ಕಂಡುಬರುತ್ತದೆ. ಇಲ್ಲಿಯ ದಾಸರ ಉಪದೇಶವನ್ನು ಅಕ್ಷರಶಃ ಶ್ರದ್ಧೆಯಿಂದ ಗೌರವಿಸಿ, ಜಾತಿ ಮತ ಭೇದವಿಲ್ಲದೆ ಕನ್ನಡಬಲ್ಲ ಆಸ್ತಿಕರೆಲ್ಲರೂ ಇಂದಿಗೂ ದಾಸರ ದೇವರ ನಾಮಗಳನ್ನು ಹಾಡುವ, ಭಜನೆ ಮಾಡುವ ಮೂಲಕ ಜೀವಂತವಾಗಿ ಉಳಿಸಿಕೊಂಡು ಬಂದಿದ್ದಾರೆ.

ಸಾಹಿತ್ಯವಿಮರ್ಶೆಯ ದೃಷ್ಟಿಯಿಂದ ಹರಿಯ-ಹರಿಭಕ್ತರ ನಾಮಗಳ ಪುನರಾವೃತ್ತಿ ಏಕತಾನತೆಗೆ ಕಾರಣವಾಗಿ ಬೇಸರ ತರಿಸುವುದೆನಿಸಿದರೂ ಸಾಂಸ್ಕೃತಿಕ ದೃಷ್ಟಿಯಿಂದ; ಹಾಡುವವರಿಗೆ ಬೇಸರವಿಲ್ಲ. ನೂರಾರು ವರ್ಷಗಳಿಂದ ಯಾವುದೇ ಪ್ರತಿಫಲಬಯಸದೆ, ಬೇಸರವಿಲ್ಲದೆ ಜನರು ಇವುಗಳನ್ನು ಹಾಡುತ್ತಲೇ ಬಂದಿದ್ದಾರೆ.

**೪. ಸರ್ವಸಮರ್ಪಣೆ**

ಭಕ್ತನು ತನ್ನದೆನ್ನುವ ಸರ್ವಸ್ವವನ್ನೂ ಭಗವಂತನಿಗೆ ಒಪ್ಪಿಸಿಕೊಳ್ಳುತ್ತಾನೆ. ಕೆರೆಯ ನೀರನು ಕೆರೆಗೆ ಚೆಲ್ಲಿ ವರವಪಡೆದವರಂತೆ ಹರಿಯ ಕರುಣದಿಂದ ಬಂದ ಎಲ್ಲ ಭಾಗ್ಯಗಳನ್ನು ಹರಿಸಮರ್ಪಣೆ ಮಾಡಿ ಬದುಕಬೇಕೆಂಬ ಆಶಯವು ದಾಸರ ಅನೇಕ ರಚನೆಗಳಲ್ಲಿ ಕಂಡುಬರುತ್ತದೆ.

ನಾ ನಿನಗೇನು ಬೇಡುವುದಿಲ್ಲ ಎನ್ನ
ಹೃದಯ ಕಮಲದೊಳು ನೆಲಸಿರು ಹರಿಯೆ ||

ಶಿರನಿನ್ನ ಚರಣಕ್ಕೆರಗಲಿ ಚಕ್ಷು
ಎರಕದಿಂದಲಿ ನಿನ್ನ ನೋಡಲಿ ಹರಿಯೆ |

ನಿರುಮಾಲ್ಯ ನಾಸ ಘ್ರಾಣಿಸಲಿ ಎನ್ನ
ಕರಣ ಗೀತಂಗಳ ಕೇಳಲಿ ಹರಿಯೆ ||

ನಾಲಿಗೆ ನಿನ್ನ ಕೊಂಡಾಡಲಿ - ಎನ್ನ
ತೋಳು ಕರಂಗಳ ಮುಗಿಯಲಿ ಹರಿಯೆ |
ಕಾಲುತೀರ್ಥಯಾತ್ರೆಗೆ ಪೋಗಲಿ - ಮನ
ಓಲೈಸಿ ನಿನ್ನನು ಸ್ಮರಿಸಲಿ ಹರಿಯೆ ||

ಚಿತ್ತ ನಿನ್ನೊಳು ಮುಳುಗಾಡಲಿ ನಿನ್ನ
ಭಕ್ತ ಜನರಸಂಗ ದೊರಕಲಿ ಹರಿಯೆ
ತತ್ವಯೋಗಾಭ್ಯಾಸಕ್ಕಾಗಲಿ ಉಕ್ತಿ |
ಸತ್ಯಮೂರುತಿ ನಮ್ಮ ಪುರಂದರ ವಿಠಲ ||

ಪ್ರಾರ್ಥನೆಯ ರೂಪದ ಈ ಹಾಡಿನಲ್ಲಿ; ಭಾಗವತದ ಅಂಬರೀಷ ಮಹಾರಾಜರ ಹರಿಸೇವಾ ಪ್ರಕಾರವನ್ನು ವರ್ಣಿಸುವ 'ಸ ವೈ ಮನಃ ಕೃಷ್ಣ ಪದಾರವಿಂದಯೋಃ...' ಎಂಬ ಮೂರು ಶ್ಲೋಕಗಳ ಪ್ರಭಾವವನ್ನು ಕಾಣಬಹುದಾದರೂ ಇದೊಂದು ಸ್ವತಂತ್ರ ಭಾವಗೀತೆಯಂತಿದೆ. ಸ್ವತಃ ಆಚರಣೆಯಿಂದ ಅನುಭವಿಸಿ ಹೇಳುವ ಯಾವುದೇ ಮಾತು ಕೇವಲ ಋಣವಲ್ಲ; ಅದು ವೃದ್ಧಿಯೇ ಸರಿ.

"ಸಗುಣಭಕ್ತಿ ಸಾಧನೆಯಲ್ಲಿ ಇಂದ್ರಿಯಗಳು ಮಾಧ್ಯಮಗಳಾಗಿ ಪರಿಣಮಿಸುತ್ತವೆ. ಕಣ್ಣಿನಿಂದ ಹರಿಯ ರೂಪವನ್ನು ನೋಡಿದರೆ, ಕಿವಿಯಿಂದ ಹರಿಕಥೆ ಕೇಳಬೇಕು. ನಾಲಗೆಯಿಂದ ಹರಿನಾಮೋಚ್ಚಾರಣೆ ಮಾಡಿದರೆ ಕೈಯಿಂದ ಸೇವೆ ಮಾಡಬೇಕು. ಈ ಕೈಂಕರ್ಯಭಾವನೆಯಿಂದ ಆತ ಇಂದ್ರಿಯಗಳೆಲ್ಲವನ್ನೂ ಪರಮಾತ್ಮನಿಗರ್ಪಿಸುತ್ತಾನೆ."(ನಾಗರತ್ನ ಟಿ.ಎನ್. ೧೯೮೬:೯) ಇದು ಭಕ್ತನ ಲಕ್ಷಣ. ಭಕ್ತಿ ಸುಖವನ್ನು ಸವಿದ ಅವರಿಗೆ ಇತರರೂ ಆ ಭಾಗ್ಯವನ್ನು ಪಡೆಯಬೇಕೆನಿಸುತ್ತದೆ. ಮಾನವನ ಇಂದ್ರಿಯಗಳು ಭಗವದರ್ಪಿತವಾಗದಿದ್ದರೆ ವ್ಯರ್ಥವೇ ಸರಿ ಎಂಬಂತಹ ನಿಲುವನ್ನೂ ತಾಳಿದ್ದುಂಟು. ಉದಾ :

ಅಂತರಂಗದಲಿ ಹರಿಯ ಕಾಣದವನೆ
ಹುಟ್ಟು ಕುರುಡನೋ |
ಸಂತತ ಸಿರಿಕೃಷ್ಣ ಚರಿತೆ ಕೇಳದವ
ಜಡಮತಿ ಕಿವುಡನೋ ಎಂದೆಂದಿಗು ||

(ವ್ಯಾಸರಾಯರು)

ಈ ಭಕ್ತಿಯ ಹಿಂದೆ ಯಾವುದೇ ಫಲಾಪೇಕ್ಷೆಯಿಲ್ಲ. ಇಂತಹ ಅಹೈತುಕ ಪ್ರೇಮವನ್ನು 'ನಿಷ್ಕಾಮಭಕ್ತಿ' ಎನ್ನುತ್ತೇವೆ. ನಿಷ್ಕಾಮ ಭಕ್ತಿಯ ಸ್ವರೂಪವನ್ನು ಪರಿಚಯಿಸುವ ಪುರಂದರ ದಾಸರ ಸುಳಾದಿಯೊಂದರ ಕೆಲವು ಸಾಲುಗಳು ಹೀಗಿವೆ :

ನಿರುಪಾಧಿಕವಾಗಿ ಹರಿಸೇವೆ ಮಾಳ್ಪುದಕೆ |
ನರರ ನಿರೀಕ್ಷಿಸಿಕೊಂಡು ಕುಳ್ಳಿರುವ ಪಾ |
ಮರ ಹರಿದಾಸನು ಅವನಲ್ಲ |
ನರವಾನರ ಕಾಣೊ ಪರಮ ಭಕುತಿಯಿಂದ |
ನರಹರಿಯ ಚರಿತೆಯ ವರಸುಧಾರಸ ಸುಖ |
ಸುರಿಯಬೇಕೋ ತನ್ನೊಳು ತಾನೆ ಗುಪ್ತದಿ |
ಇರಬೇಕು ತನ್ನ ಸ್ವರೂಪ ತೋರಗೊಡದೆ |

"ನರಹರಿಯ ಸೇವೆ ಮಾಡುವುದಕ್ಕೆ ನರರ ನಿರೀಕ್ಷಿಸಿಕೊಂಡು ಕುಳಿತರೆ ಅವನು ಹರಿದಾಸನಲ್ಲ - ನರ ವಾನರ" ಎಂಬ ಇಲ್ಲಿಯ ಮಾತುಗಳು ಪರಮಾದರ್ಶದ ಉಪದೇಶ ರೂಪದಲ್ಲಿವೆ. ಹರಿದಾಸರು ಕೇವಲ ಉಪದೇಶಕರಲ್ಲ. ಯಾವುದನ್ನೇ ಆಡುವ ಮೊದಲು ಅದನ್ನು ಮಾಡಿರುತ್ತಾರೆ ಎಂಬಂತಹ ಒಂದು ನಿದರ್ಶನ ಇಲ್ಲಿದೆ.

ಗ್ರಾಸವಾಸಗಳಿಗೆ ಇಲ್ಲವೆಂದು ನಿನ್ನ ಬೇಸರಿಸಿ ಬೇಡ ಬಂದುದಿಲ್ಲ|
ವಾಸುದೇವನೆ ನಿನ್ನ ದಾಸರ ದಾಸರ ದಾಸರ ದಾಸ್ಯವ ಕೊಡುಸಾಕೆಂದರೆ ||

* * *

ಸಾಲವಾಯಿತೆಂದು ಸಂಬಳ ಎನಗೆ ಸಾಲದೆಂದು ಬೇಡಬಂದುದಿಲ್ಲ |
ನಾಲಿಗೆಯಲಿ ನಿನ್ನ ನಾಮದುಚ್ಚಾರಣೆಯ ಪಾಲಿಸಬೇಕೆಂದು ಬೇಡಿದೆನಲ್ಲದೆ ||

* * *

(ಇದನಾದರು ಕೊಡದಿದ್ದರೆ ನಿನ್ನ
ಪದಕಮಲವನಂಬಿ ಭಜಿಸುವದೆಂತೊ)

(ಶ್ರೀಪಾದರಾಜರು)

ಇದು ಭಕ್ತಿಯ ಪರಾಕಾಷ್ಠೆಯ ಹಂತ. ಇಲ್ಲಿಗೆ ತಲುಪಿದ ಹರಿದಾಸರು ತಮ್ಮ ದೇಹದಲ್ಲೇ ಇರುವ ಭಗವಂತನ 'ಬಿಂಬ' ರೂಪವನ್ನು ಸಂತತ ಚಿಂತಿಸುತ್ತಾರೆ. ಇದನ್ನು 'ಬಿಂಬೋಪಾಸನೆ' ಎಂಬ ಪಾರಿಭಾಷಿಕ ಪದದಿಂದ ಕರೆಯುತ್ತಾರೆ.

## ೫. ಬಿಂಬೋಪಾಸನೆ

ಬಿಂಬ ಮೂರ್ತಿಯ ಧ್ಯಾನ ಕ್ರಮವನ್ನು ಪುರಂದರ ದಾಸರ ಈ ಕೀರ್ತನೆಯಲ್ಲಿ ವಿವರಿಸಲಾಗಿದೆ.

ಕಣ್ಣಿನೊಳಗೆ ನೋಡೊ ಹರಿಯ - ಒಳ
ಗಣ್ಣಿನಿಂದಲಿ ನೋಡೊ ಮೂಜಗದೊಡೆಯನ || ಪ ||



ಆಧಾರ ಮೊದಲಾದ ಆರು-ಚಕ್ರ
ಶೋಧಿಸಿ ಸುಡಬೇಕು ಈ ಕ್ಷಣ ಮೂರು ||
ಸಾಧಿಸಿ ಸುಷುಮ್ನ ಏರು ಅಲ್ಲಿ
ಭೇದಿಸಿ ನೀ ಪರಬ್ರಹ್ಮನ ಸೇರು ||೧||

ಎವೆಹಾಕದೆ ಮೇಲೆ ನೋಡು - ಮುಂದೆ
ತವಕದಿಂದಲಿ ವಾಯುಬಂಧನ ಮಾಡು ||
ಸವಿದು ನಾದವ ಪಾನಮಾಡು ಅಲ್ಲಿ
ನವವಿಧ ಭಕ್ತಿಯಲಿ ನಲಿನಲಿದಾಡು ||೨||

ಅಂಡದೊಳಗೆ ಆಡುತಾನೆ ಭಾನು
ಮಂಡಲ ನಾರಾಯಣನೆಂಬುವನೆ ||
ಕುಂಡಲಿ ತುದಿಯೊಳಿದ್ದಾನೆ -ಶ್ರೀಪು-
ರಂದರ ವಿಠಲನು ಪಾಲಿಸುತ್ತಾನೆ ||೩||

ಈ ಕೀರ್ತನೆಯಲ್ಲಿ ಬಿಂಬೋಪಾಸನೆಯು ಯೋಗಸಿದ್ಧಿಯ ಮಟ್ಟಕ್ಕೇರಿರುವುದನ್ನು ಗಮನಿಸಬೇಕು.

ಗುರುಮುಖದ ಉಪದೇಶದಿಂದ ಈ ವಿದ್ಯೆ ಫಲಿಸುವುದರಿಂದ; 'ತಮ್ಮ ಪ್ರತಿಯೊಂದು ಕ್ರಿಯೆಯನ್ನೂ ತಮ್ಮ ಆದಿಗುರುಗಳಾದ ಮಧ್ವಾಚಾರ್ಯರ ಅಂತರ್ಯಾಮಿಯಾದ ಶ್ರೀಕೃಷ್ಣನಿಗೆ ಸಮರ್ಪಿಸಬೇಕು' ಎಂಬ ಸೈದ್ಧಾಂತಿಕ ಕಾರಣಕ್ಕಾಗಿ ಅನೇಕ ಕೀರ್ತನೆಗಳ ನಡುವೆ ಮಧ್ವರ ಹೆಸರನ್ನು ಉಲ್ಲೇಖಿಸುವುದನ್ನು ಕಾಣುತ್ತೇವೆ (ಇದು 'ಗುರುಭಕ್ತಿ'ಯೆಂಬ ಗುಣವೇ ಹೊರತು 'ಮತೀಯತೆ' ಎಂಬ ದೋಷವಲ್ಲ).

ಇಂತಹ 'ಬಿಂಬೋಪಾಸನೆಯ ಪಾರಮಾರ್ಥಿಕ ಶಿಖರವನ್ನೇರಿದ ದಾಸರು ಭಗವಂತನನ್ನು ಮಾನಸಿಕವಾಗಿ ಪೂಜಿಸಬಲ್ಲರು. ಇದನ್ನು 'ಮಾನಸ ಪೂಜೆ' ಎನ್ನುತ್ತೇವೆ. ವ್ಯಾಸರಾಯರು ಈ ಪ್ರೌಢ ಶಾಸ್ತ್ರಪ್ರಕ್ರಿಯೆಯನ್ನು ಇನ್ನಿಲ್ಲವೆಂಬಷ್ಟು ಸರಳವಾಗಿ ಚಿತ್ರಿಸಿರುವುದನ್ನು ಕಾಣಬಹುದು.

ಎನ್ನ ಬಿಂಬ ಮೂರುತಿಯ ಪೂಜಿಪೆ ನಾನು
ಮನಮುಟ್ಟಿ ಅನುದಿನ ಮರೆಯದೆ ಮರೆಯದೆ ||ಪ||

ಗಾತ್ರವೆ ಮಂದಿರ ಹೃದಯವೆ ಮಂಟಪ
ನೇತ್ರವೆ ಮಹದೀಪ ಹಸ್ತ ಚಾಮರವು
ಯಾತ್ರೆ ಪ್ರದಕ್ಷಿಣೆ ಶಯನ ನಮಸ್ಕಾರ
ಶಾಸ್ತ್ರ ಮಾತುಗಳೆಲ್ಲ ದಿವ್ಯ ಮಂತ್ರಗಳು ||೧||

ಮಾತುಗಳೇ ಹೂವು, ನಡೆಯುವುದೇ ನರ್ತನಸೇವೆ. ಈ ಕ್ರಮದಲ್ಲಿ ಮುಂದುವರಿಯುವ ಈ ಪೂಜಾಪದ್ಧತಿಯು ಈ ಕೀರ್ತನೆಯಲ್ಲಿ ತಮಗೆ ತಾನೇ ಹೇಳಿಕೊಂಡ 'ಸ್ವಗತ'ದ ಧಾಟಿಯಲ್ಲಿದೆ.

ಮಾನಸ ಬಿಂಬಪೂಜಾಪದ್ಧತಿಯ ಅನುಸರಣೆಯಿಂದ ಭಕ್ತನ ದೃಷ್ಟಿ ಉದಾರವಾಗಬೇಕು ಎಂಬುದೇ ಹರಿದಾಸರ ಆಶಯ. ಪುರಂದರ ದಾಸರ ಒಂದು ಕೀರ್ತನೆಯಲ್ಲಿ ಇದನ್ನು 'ಉಪದೇಶಾತ್ಮಕವಾಗಿ' ಹೇಳಲಾಗಿದೆ.

ಸುಲಭ ಪೂಜೆಯ ಕೇಳಿ ಬಲವಿಲ್ಲದವರು
ಕಾಲ ಕಾಲದ ಕರ್ಮ ಕಮಲಾಕ್ಷಗರ್ಪಿಸಿರಿ ||ಪ||

* * * *

ನುಡಿವ ಮಾತುಗಳೆಲ್ಲ ಪಾಂಡುರಂಗನ ಜಪವು
ಮಡದಿ ಮಕ್ಕಳು ಎಲ್ಲ ಒಡನೆ ಪರಿವಾರ
ನಡುಮನೆಯು ಅಂಗಳವು ಉಡುಪಿ ಭೂವೈಕುಂಠ
ಎಡಬಲದ ಮನೆಯವರು ಕಡುಭಾಗವತರು

* * * *

ಹೀಗೆ ಹರಿದಾಸರು ನಂಬಿದ ತತ್ವಜ್ಞಾನವು ಮೇಲ್ನೋಟಕ್ಕೆ 'ಜೀವನಾತೀತ' ವಿಷಯಗಳನ್ನೊಳಗೊಂಡಂತೆ ಕಂಡರೂ ಅಂತಿಮವಾಗಿ 'ಜೀವಪರ'ವಾಗಿದೆ. ಮಾನವನ ವ್ಯಕ್ತಿತ್ವಕ್ಕೆ ಅಧ್ಯಾತ್ಮದ ಘನತೆಯನ್ನು ತಂದುಕೊಡುವಂತಿವೆ. ಇಲ್ಲಿಯ ಛಂದೋಪ್ರಕಾರಗಳ ಬಳಕೆಯನ್ನು ಕುರಿತಂತೆ ಹೇಳುವುದಾರೆ "ಕೀರ್ತನೆಗಳಲ್ಲಿ ತತ್ವನಿರೂಪಣೆ ಸಾಮಾನ್ಯವಾಗಿ ಕಂಡುಬಂದರೆ ಸುಳಾದಿ ಉಗಾಭೋಗಗಳಲ್ಲಿ ಅದು ದಟ್ಟವಾಗಿ ವ್ಯಾಪಿಸಿಕೊಂಡು ಗಮನಸೆಳೆಯುತ್ತದೆ."(ಗುಡಿ ಆರ್.ಜಿ.೧೯೯೪:೩) ಎಂಬ ವಿದ್ವಾಂಸರ ಅಭಿಪ್ರಾಯವು ವಸ್ತುನಿಷ್ಠವಾಗಿದೆ. ದಾಸರು ಆಚರಣಾತ್ಮಕ ತತ್ವಗಳನ್ನು ಹೇಳಲು ಉಗಾಭೋಗ ಹಾಗೂ ಕೀರ್ತನೆಗಳನ್ನೂ, ಚಿಂತನಾತ್ಮಕ ತತ್ವಗಳನ್ನೂ ತಿಳಿಸಲು ದೀರ್ಘಪ್ರಕಾರಗಳಾದ 'ದೀರ್ಘಕೀರ್ತನೆ' 'ವೃತ್ತನಾಮ' ಹಾಗೂ ಸುಳಾದಿಗಳನ್ನೂ ಆಯ್ದುಕೊಂಡಿದ್ದಾರೆ. ಈ ಪ್ರಕಾರದ ಆಯ್ಕೆಯು ಅರ್ಥಪೂರ್ಣವಾಗಿದೆ.

ಆರಂಭದ ಓದುಗ(ಕೇಳುಗ)ರಿಗೆ ಪಾರಿಭಾಷಿಕ ಪದಗಳು ಎದುರಾದಾಗ ಇಲ್ಲಿಯ ಭಾಷೆ ಕಷ್ಟವೆನಿಸಬಹುದು. ಯಾವುದೇ ತಾತ್ವಿಕ ವಿಚಾರವನ್ನು ತಿಳಿಯುವಾಗ ಈ ಸಮಸ್ಯೆ ಇದ್ದದ್ದೇ. ಕ್ರಮೇಣ ಪರಿಚಯ ಹೆಚ್ಚುತ್ತ ಹೋದಂತೆ ಸಂವಹನ ಸುಲಭವಾಗುತ್ತದೆ. ಕನ್ನಡ ಸಾಹಿತ್ಯದ ಇತರ ಯಾವುದೇ ತತ್ವಪ್ರತಿಪಾದಕ ಕೃತಿಗಳ ಭಾಷೆಯೊಂದಿಗೆ ಹೋಲಿಸಿ ನೋಡಿದರೆ 'ದಾಸರು ಇಲ್ಲಿ ಬಳಸಿದ ಭಾಷೆ ಸರಳವಾಗಿದೆ ವಿವಿಧ ಅಭಿವ್ಯಕ್ತಿ ತಂತ್ರಗಳಿಂದ ಆಕರ್ಷಕವೂ ಆಗಿದೆ' ಎಂದು ತಿಳಿದುಬರುತ್ತದೆ. ಈ ಅನುಭವವನ್ನು ಪಡೆಯಬೇಕಾದರೆ ಕೃತಿಗಳನ್ನು ಓದುವುದಕ್ಕಿಂತ ಹಾಡಬೇಕು. ಸಾಂಪ್ರದಾಯಿಕ ಹಾಡುಗಾರರು ರಾಗ-ತಾಳ ಬದ್ಧವಾಗಿ ಹಾಡುವುದನ್ನು ಕೇಳಬೇಕು. ಆಗ ಅವುಗಳ ಪರಿಣಾಮ ರಮಣೀಯತೆಯು ಅರಿವಾಗುತ್ತದೆ.

ಇದುವರೆಗೆ ಈ ಅಧ್ಯಾಯದಲ್ಲಿ ತತ್ವಪ್ರತಿಪಾದಕ ವಾದ ಹರಿದಾಸರ ಕೃತಿಗಳನ್ನು ಅವಲೋಕಿಸಿದೆವು. ಈ ತಾತ್ವಿಕ ವಿವೇಚನೆಯಿಂದ ಹರಿದಾಸರ ಕಥನ-ಸಂಕಥನಗಳ ಸ್ವರೂಪವನ್ನು ಹಾಗೂ ಮೌಲ್ಯ

ಪ್ರತಿಪಾದನೆಯ ವಿಧಾನ ಮತ್ತು ಔಚಿತ್ಯಗಳನ್ನು ನಿರ್ಧರಿಸಲು ಅಗತ್ಯವಾದ ಸೈದ್ಧಾಂತಿಕ ಪರಿಪ್ರೇಕ್ಷ್ಯದ ಸ್ಪಷ್ಟ ಪರಿಕಲ್ಪನೆಯನ್ನು ಪಡೆಯಬಹುದಾಗಿದೆ.

**ಕೊನೆಟಿಪ್ಪಣಿಗಳು**

೧. 'ತತ್ವತತ್ವಾಭಿಮಾನಿ ದೇವತೆ'ಗಳ ವಿವರಗಳನ್ನು ಗೊರಾಬಾಳ ಹನುಮಂತರಾಯರು ಸಂಪಾದಿಸಿದ 'ಹರಿಕಥಾಮೃತಸಾರ ಪಂಚರತ್ನ ಪ್ರಕಾಶಿಕಾ' ಗ್ರಂಥದಿಂದ ಸಂಗ್ರಹಿಸಿದೆ.

೨. 'ಐವರಿತ್ತೊಡವೆಯನು ಅವರವರು ಒಯ್ಯುವರು'- ಎಂಬ ದಾಸರ ಪದವನ್ನು ಈ ಅರ್ಥದಲ್ಲಿ ನೋಡಬೇಕು. ನೋಡಬಹುದು. ನಮ್ಮ ದೇಹದ ಅಸ್ಥಿ, ಮಾಂಸ, ಚರ್ಮಗಳಲ್ಲಿ 'ಪೃಥ್ವೀ' ತತ್ವವೂ; ರಕ್ತ, ರಸಾದಿಗಳಲ್ಲಿ 'ಅಪ್'ತತ್ವವೂ; ಕಣ್ಣಿನಲ್ಲಿ 'ತೇಜಸ್'ತತ್ವವೂ; ಶರೀರದಾದ್ಯಂತ ವಾಯುತತ್ವವೂ, ಅನ್ನನಾಳ ಮುಂತಾದ ಎರಡು ಶಾಸ್ವಕೋಶಗಳ ಒಳ ಹೊರಭಾಗಗಳಲ್ಲಿ ಅವಕಾಶ ಇರುವಲ್ಲೆಲ್ಲ 'ಆಕಾಶ' ತತ್ವವೂ- ನೆಲಸಿವೆ. ಮರಣಾನಂತರ ಈ ತತ್ವಗಳು ದೇಹದ ಹೊರಗಿನ ಪಂಚಭೂತಗಳಲ್ಲಿ ಸೇರಿ ಹೋಗುತ್ತವೆ.

೩. ಖಂಡಸ್ಮೃತಿರ್ಧಾರಣಾಸ್ಯಾದಖಂಡಧ್ಯಾನ ಉಚ್ಯತೇ |
.................................ಅಪ್ರಯತ್ನಾ ಸಮಾಧಿತಾ ||
(ತಂತ್ರಸಾರ ಸಂಗ್ರಹ)

ಇದೇ ಅರ್ಥವನ್ನು ಭಾಗವತ ದ್ವಿತೀಯ, ತೃತೀಯ ಸ್ಕಂಧಗಳಲ್ಲೂ ನೋಡಬಹುದು.

೪. ವಾದಿರಾಜರ 'ವೈಕುಂಠ ವರ್ಣನೆ' ಹಾಗೂ 'ಪಂಚೀಕರಣ' ಎಂಬ ದೀರ್ಘಕೃತಿಗಳು ಸೃಷ್ಟಿ-ಸ್ಥಿತಿ-ಲಯಗಳನ್ನು ಉತ್ತಮವಾಗಿ ಚಿಂತಿಸಲು ಸಹಾಯಕವಾಗಿವೆ. (ಅಲ್ಲಿ ಭಾಗವತವಲ್ಲದೆ ಇತರ ಬಹು ಆಕರಗಳ ಬಳಕೆ ಇರುವುದರಿಂದಲೂ; ಅಲ್ಲಿಯ ಸಾರವನ್ನು ಇಲ್ಲಿಯ ಕೃತಿಗಳಲ್ಲಿ ಹೇಳಿರುವುದರಿಂದಲೂ ಆ ಕೃತಿಗಳನ್ನು ಪ್ರತ್ಯೇಕವಾಗಿ ವಿವರಿಸಿಲ್ಲ.)

೫. ಕನಕದಾಸರ 'ಹರಿಭಕ್ತಿಸಾರ'ವು ಒಂದು ಸಂಯೋಜಿತ ಸ್ವರೂಪದ ಕೃತಿಯಾಗಿದೆ. ಅದರಲ್ಲಿ ಈ ಎಲ್ಲ ವಿಚಾರಗಳು ಬಂದಿವೆ. ಟಿಪ್ಪಣಿ-೪ರಲ್ಲಿ ಸೂಚಿಸಿದ ಕಾರಣಕ್ಕಾಗಿ ಆ ಗ್ರಂಥವನ್ನು ಇಲ್ಲಿ ಪ್ರತ್ಯೇಕವಾಗಿ ವಿವರಿಸಿಲ್ಲ.

೬. ದಾಸರು ಮತ್ತೆ ಮತ್ತೆ ಸಂಸಾರದ ಕಷ್ಟಗಳನ್ನು ಚಿತ್ರಿಸಲು ಪ್ರೇರಣೆ ಎಲ್ಲಿಂದ?-ಎಂಬುದನ್ನು ತಿಳಿಯಲು ಇಂಥ ಕೃತಿಗಳ ತೌಲನಿಕ ಅಧ್ಯಯನವು ಅಗತ್ಯವೆನಿಸುತ್ತದೆ.

೭. ಈ ಐದು ರೀತಿಯ ಮಾರ್ಗಗಳು ನೇರವಾಗಿ ಮೋಕ್ಷವನ್ನು ಕೊಡಲಾರವು. ಈ ಐದು ಕಾರಣಗಳಿಗಾಗಿ ನಡೆಯುವ ಭಕ್ತಿಯಿಂದ ಮಾತ್ರ ಮುಕ್ತಿಯೇ ಹೊರತು ಕೇವಲ ದ್ವೇಷಾದಿಗಳಿಂದ ಅಲ್ಲ ಎಂಬುದು ಭಾಗವತ ಸಪ್ತಮಸ್ಕಂಧದಿಂದಲೂ ಹರಿದಾಸರ ಕೀರ್ತನೆಗಳಿಂದಲೂ ತಿಳಿದುಬರುತ್ತದೆ.

೮. ಹೆಚ್ಚಿನ ವಿವರಗಳಿಗೆ ಡಾ.ಟಿ.ಎನ್. ನಾಗರತ್ನ ಅವರ 'ಹರಿದಾಸರ ಭಕ್ತಿಸ್ವರೂಪ' ಎಂಬ ಸಂಶೋಧನ ಮಹಾ

ಪ್ರಬಂಧದಲ್ಲಿ ಅಧ್ಯಾಯ ೫ (ನವವಿಧ ಭಕ್ತಿ ಪ್ರತಿಪಾದನೆ) ಹಾಗೂ ಅಧ್ಯಾಯ ೬ (ಪಂಚವಿಧ ಭಾವಗಳ ಕಲ್ಪನೆ) ಈ ಭಾಗಗಳನ್ನು ನೋಡಬಹುದು.

೯. ಹರಿದಾಸರ ಪರಿಸರದಲ್ಲಿ ಭಾಗವತ ಶ್ರವಣಕ್ಕೆ ಇದ್ದ ಮಹತ್ವವನ್ನು ಪ್ರಸ್ತುತ ಮಹಾಪ್ರಬಂಧದ ಅಧ್ಯಾಯ ೪.೧ ಹಾಗೂ ೪.೨ರಲ್ಲಿ ವಿವರಿಸಲಾಗಿದೆ.

೧೦. ವಾಗ್ಗದ್ಗದಾ ದ್ರವತೇಯಸ್ಯ ಚಿತ್ತಮ್
ರುದತ್ಯಬೀಕ್ಷ್ಣಂ ಹಸತಿ ಕ್ವಚಿತ್ ಚ |
ವಿಲಜ್ಜ ಉದ್ಗಾಯತಿ ನೃತ್ಯತೇ ಚ
ಮದ್ಭಕ್ತಿಯುಕ್ತೋ ಭುವನಂ ಪುನಾತಿ || (ಭಾಗವತ)

ಸ್ತುತಿಸಲಾರದೆ ಕಂಠವು ಸಂತೋಷದಿಂದ ಗದ್ಗದವಾಗುತ್ತದೆ. ಮನಸ್ಸು ಕರಿಗಿ ನೀರಾಗುತ್ತದೆ. ಆನಂದ ಭಾಷ್ಪಗಳು ಹೊರಹೊಮ್ಮುತ್ತವೆ. ತನಗೆ ತಾನೇ ನಗು ಬರುತ್ತದೆ. ಲಜ್ಜೆ ಅಳಿದುಹೋಗುತ್ತದೆ. ಈ ರೀತಿ ಭಗವದ್ಭಕ್ತಿಯನ್ನುಳ್ಳವನು ಭುವನವನ್ನು ಪಾವನಗೊಳಿಸುತ್ತಾನೆ.

## ಅಧ್ಯಾಯ ಏಳು

# ಮೌಲ್ಯ ಪ್ರತಿಪಾದನೆಯಲ್ಲಿ ಋಣ ಮತ್ತು ವೃದ್ಧಿ

೭.೧. ಮೌಲ್ಯಪ್ರತಿಪಾದನೆಯ ಮಾದರಿಗಳು

೭.೨. ಹರಿದಾಸರ ಮೌಲ್ಯ ಪರಿಕಲ್ಪನೆ

೭

# ಮೌಲ್ಯ ಪ್ರತಿಪಾದನೆಯಲ್ಲಿ ಋಣ ಮತ್ತು ವೃದ್ಧಿ

## ೭.೧. ಮೌಲ್ಯ ಪ್ರತಿಪಾದನೆಯ ಮಾದರಿಗಳು

ಶ್ರೀಮದ್ಭಾಗವತದಂತಹ ಪುರಾಣಗಳಲ್ಲಿನ ಪ್ರತಿಯೊಂದು ಕತೆ-ತತ್ವಗಳಲ್ಲಿ ಹುದುಗಿರುವ ವಿಚಾರಗಳ ಸಂದೇಶ-ಶ್ರದ್ಧೆಗಳೇ ಶ್ರೋತೃಗಳ ಮೌಲ್ಯಪ್ರಜ್ಞೆಯನ್ನು ಮುರಿದು ಕಟ್ಟುವ ಮೂಲಕ ವ್ಯಕ್ತಿತ್ವ ಸಂಸ್ಕರಣಕ್ಕೆ ಕಾರಣವಾಗುತ್ತವೆ. ಆದ್ದರಿಂದ ಮೌಲ್ಯ ವಿಚಾರಗಳ ಜಿಜ್ಞಾಸೆ ಅತ್ಯಂತ ಮಹತ್ವದ್ದು ಹಾಗೂ ಉಪಯುಕ್ತವಾದುದು.

ಹರಿದಾಸರಲ್ಲಿ ಕಾಣುವ ಪ್ರಮುಖ ಗುಣವೆಂದರೆ 'ಉನ್ನತ, ನೈತಿಕ ದೃಷ್ಟಿ'(High moral Seriousness). ನೈತಿಕತೆ ಎಂದರೆ 'ಬದುಕಿನ ಬಗೆಗಿರುವ ಅಪಾರ ಶ್ರದ್ಧೆ ಮತ್ತು ಆಸ್ಥೆ'. ಒಂದು ಕೃತಿಯ ಮೌಲ್ಯವನ್ನು ನಿರ್ಧರಿಸುವ ಮೂಲಭೂತ ಪ್ರಶ್ನೆ ಎಂದರೆ 'ಈ ಕೃತಿ ಎತ್ತಿ ಹಿಡಿಯುವ ಮೌಲ್ಯಗಳು ಜೀವನದ ಪರವಾಗಿವೆಯೇ ಅಥವಾ ಜೀವನ ವಿಮುಖವಾಗಿವೆಯೇ' ಎಂಬುದು.[1] ಭಾಗವತವು ತೋರಿದ ಭಕ್ತಿ ಮಾರ್ಗದ ನೆಲೆಯಲ್ಲಿ ವೈಯಕ್ತಿಕ ಶೀಲ ಸಂವರ್ಧನೆಯ ಮೂಲಕ ಮನುಕುಲದ ಒಳಿತನ್ನು ಸಾಧಿಸಲು ಹರಿದಾಸರು ಯತ್ನಿಸಿರುವುದು ಕಂಡುಬರುತ್ತದೆ. ಮನೆ ಮನೆಗೆ ಸಂಚರಿಸಿ ತಾವು ಕಂಡ ಮಾನವ

ಜೀವನದ ಉನ್ನತ ಮೌಲ್ಯಗಳ ಬಗ್ಗೆ ಎಚ್ಚರಿಕೆ ನೀಡಿದ ದಾಸರ ಕೀರ್ತನೆಗಳ ವಿಶ್ಲೇಷಣೆಯು ಅವುಗಳ ಮೌಲ್ಯಮಾಪನದ ದೃಷ್ಟಿಯಿಂದ ಮುಖ್ಯವಾಗುತ್ತದೆ.

ಹರಿದಾಸರು ತಮ್ಮ ಕೀರ್ತನೆಗಳಲ್ಲಿ ಶ್ರೀಮದ್ಭಾಗವತದ ಮೌಲ್ಯಗಳನ್ನು ಮಂಡಿಸುವಾಗ ಅನೇಕ ಬಗೆಯಲ್ಲಿ ವೃದ್ಧಿಯನ್ನು ಸಾಧಿಸಿದ್ದಾರೆ. ಕೆಲವು ಕಡೆ ಮೂಲದ ಶ್ಲೋಕಗಳನ್ನು ಅನುವಾದಿಸಿರಬಹುದು. ಪಾತ್ರಗಳನ್ನು, ಕತೆಗಳನ್ನು ಸ್ಮರಣೆಗೆ ತಂದಿರಬಹುದು. ಇತರ ಬಹುಪಾಲು ರಚನೆಗಳಲ್ಲಿ ಅವು ಸ್ವತಂತ್ರ ಭಾವಗೀತೆಗಳಂತಿವೆ. ಅವರ ಸಮಕಾಲೀನ ಬದುಕಿನ ಯಥಾವತ್ತಾದ ಪ್ರತಿಕೃತಿಯೆಂಬಂತಿರುವ ಆ ಹಾಡುಗಳು ನಮ್ಮ ಇಂದಿನ ಅನೇಕ ವಾಸ್ತವಗಳನ್ನು ಸಶಕ್ತವಾಗಿ ಧ್ವನಿಸುವ ಮೂಲಕ ಪ್ರಸ್ತುತವಾಗಿವೆ. ಆ ಹಾಡುಗಳ ಅನುಭವದ ತಾಜಾತನ ಮತ್ತು ಸಂಹವನ ಕೌಶಲ್ಯಗಳನ್ನು ಪರೀಕ್ಷಿಸುವ ಗಡಿಬಿಡಿಯಲ್ಲಿ, ಅಲ್ಲಿನ ಮೌಲ್ಯಗಳನ್ನು ಕೀರ್ತಿಸುವ ಅಥವಾ ನಿರಾಕರಿಸುವ ತರಾತುರಿಯಲ್ಲಿ ಅನೇಕ ವೇಳೆ ಭಾವುಕರಾಗುತ್ತೇವೆ. ಇಲ್ಲಿ ಉದಾಹರಿಸುವ ಅಂತಹ ಅನೇಕ ಕೀರ್ತನೆಗಳು ಮೂಲವನ್ನು ತಟ್ಟನೆ ಊಹಿಸಲಾರದಷ್ಟು ಕಲಾತ್ಮಕವಾಗಿವೆ. ಈ ಕಾರಣಕ್ಕಾಗಿ ದಾಸರ ಜೀವನಮುಖಿ ಕೀರ್ತನೆಗಳ ಆಕಾರವನ್ನು ವಿಶ್ಲೇಷಿಸುವಾಗ ಅವು ಆಕರದೊಂದಿಗೆ ಹೊಂದಿದ 'ಋಣ ಮತ್ತು ವೃದ್ಧಿ'ಗಳ ಸಂಕೀರ್ಣ ಸಂಬಂಧಗಳತ್ತಲೂ ಸೂಕ್ಷ್ಮ ಅವಲೋಕನ ಅಗತ್ಯವೆನಿಸುತ್ತದೆ.

ಮೌಲ್ಯ ಪ್ರತಿಪಾದನೆಯ ಕೀರ್ತನೆಗಳಲ್ಲಿ ದಾಸರು ಸಾಧಿಸಿದ ವೃದ್ಧಿಯ ಮಾದರಿಗಳನ್ನು ಈ ಕೆಳಗಿನಂತೆ ವರ್ಗೀಕರಿಸಬಹುದು.

೧. ಮೌಲ್ಯ ಸಂಕೇತಗಳಾಗಿ ಪಾತ್ರಗಳ ಬಳಕೆ

೨. ಮೌಲ್ಯ ಸ್ಥಾಪನೆಗಾಗಿ ಕಥಾ ಸಂದರ್ಭಗಳ ಬಳಕೆ

೩. ದೋಷ ರಾಶಿಯಲ್ಲೂ ಗುಣ ಶೋಧದ ಕಾಳಜಿ

೪. ಸ್ಥಾಪಿತ ಮೌಲ್ಯಪ್ರಜ್ಞೆಯ ನಿರಚನೆ

೫. ನಿಷ್ಠುರ ಸತ್ಯ ನಿರೂಪಣೆ

### ೭.೧.೧. ಮೌಲ್ಯ ಸಂಕೇತಗಳಾಗಿ ಭಾಗವತ ಪಾತ್ರಗಳ ಬಳಕೆ

ಯಾವುದೇ ಕತೆಯಲ್ಲಿ ಬರುವ ಪಾತ್ರದ ಸ್ವಭಾವವನ್ನು ಅದರ ವರ್ತನೆಯ ಮೂಲಕ ನಿರ್ಧರಿಸುತ್ತೇವೆ. ಕೊನೆಗೆ ಆ ಪಾತ್ರವನ್ನು ನಿರ್ದಿಷ್ಟ ಸ್ವಭಾವದ ಅಥವಾ ಮೌಲ್ಯದ ಸಂಕೇತವೆಂದೇ ಭಾವಿಸುತ್ತೇವೆ. ಕತೆಯು ಜನಪ್ರಿಯವಾದಂತೆಲ್ಲ ಆಯಾ ಪಾತ್ರ ಮತ್ತು ಮೌಲ್ಯಗಳ ಸಂಬಂಧ ಗಟ್ಟಿಗೊಳ್ಳುತ್ತ ಹೋಗುತ್ತದೆ. ನೂರಾರು ವರ್ಷಗಳಿಂದ ಜನರ ಕಿವಿ-ನಾಲಿಗೆಗಳಲ್ಲಿ ನೆಲೆನಿಂತ ರಾಮಾಯಣ ಮಹಾಭಾರತ ಭಾಗವತ ಕತೆಗಳ ನೂರಾರು ಪಾತ್ರಗಳು ವಿವಿಧ ಸ್ವಭಾವಗಳ, ಮೌಲ್ಯಗಳ ಸಂಕೇತಗಳೇ ಆಗಿವೆ.

ದಾಸರು ತಮ್ಮ ಸುತ್ತಲಿನ ಶ್ರೀಸಾಮಾನ್ಯರಿಗೆ ಹಿತೋಪದೇಶ ಮಾಡುವಾಗ ಪುರಾಣ ಕತೆಗಳನ್ನು ಇಡಿಯಾಗಿ ಹೇಳದೆ ಕೇವಲ ಅಲ್ಲಿಯ ಪಾತ್ರಗಳನ್ನು ಒಂದೊಂದು ಸ್ವಭಾವದ ಅಥವಾ ಮೌಲ್ಯದ ಸಂಕೇತವೆಂಬಂತೆ ಚಿತ್ರಿಸಿ ಹಾಡುವ ಮಾದರಿಯನ್ನು ಅನುಸರಿಸಿದ್ದಾರೆ. ಉದಾ.

ಬಿಗಿಯದಿರು ಬಿಗಿಯದಿರು ಎಲೆ ಮಾನವಾ ||ಪ||
ಧಿಗಿ ಧಿಗಿ ಧಿಗಿಯೆನುತ ನಿನಗೇಕೆ ಗರ್ವ ||ಅ.ಪ||

ವಿರಕ್ತಿಯಲಿ ಹನುಮನೆ ವಿವೇಕದಲಿ ವಸಿಷ್ಠನೆ |
ಶೂರತನದಲಿ ಶಂತನುತನಯನೇನೊ ||
ಸ್ವರದಲ್ಲಿ ತುಂಬುರನೆ ಗೀತದಲಿ ನಾರದನೆ |
ಪರಾಶರ ಮುನಿಯೆ ನೀ ವ್ರತಿ ಪಟ್ಟದಲ್ಲಿ ||೧||

ತ್ಯಾಗದಲಿ ಕರ್ಣನೇ ಭೋಗದಲಿ ಶತಮುಖನೆ |
ಯೋಗದಲಿ ಶುಕಸನಕ ಜನಕನೇನೋ ||
ಭಾಗ್ಯದಲಿ ಬಲಿಚಕ್ರವರ್ತಿಯೋ ದಶಶಿರನೊ |
ದೀರ್ಘದಲಿ ಮೇರುವೇ ಮಂದರವೆ ನೀನು ||೩||

ಭಕ್ತಿಯಲಿ ಭರತನೆ ಭಾವದಲಿ ಲಕ್ಷ್ಮಣನೆ |
ಮುಕ್ತಿಯಲಿ ನೀನಿಂದು ಸೂತನೇನೊ ||
ಶಕ್ತಿಯಲಿ ಕಾಲನೆ ಭುಕ್ತಿಯಲಗಸ್ತ್ಯನೆ |
ಮುಕ್ತಿ ಪಡೆವಲ್ಲಿ ಖಟ್ವಾಂಗರಾಯನೇನೊ ||೪||

* * * *

ಈ ಕೀರ್ತನೆಯಲ್ಲಿ ವ್ಯಾಸರಾಯರು ಗರ್ವಿಷ್ಠನಾದ ಮನುಷ್ಯನಿಗೆ ಸೊಕ್ಕಿ ನಡೆಯದಿರಲು ಸೂಚಿಸಿದ್ದಾರೆ. ಇಲ್ಲಿ 'ಶಕ್ತಿಯಲ್ಲಿ ಕಾಲನೆ' ಎಂದಾಗ 'ಕಾಲನ ಶಕ್ತಿ ಎಂತಹುದು?', 'ಭುಕ್ತಿಯಲಗಸ್ತ್ಯನೆ' ಎಂದಾಗ 'ಅಗಸ್ತ್ಯನ ಭೋಜನ ಶಕ್ತಿಯ ರೀತಿ ಏನು?', 'ಮುಕ್ತಿ ಪಡೆವಲ್ಲಿ ಖಟ್ವಾಂಗರಾಯನು ಅನುಸರಿಸಿದ ಮಾರ್ಗ ಯಾವುದು' ಇತ್ಯಾದಿ ಪ್ರಶ್ನೆಗಳು ಮೂಡುತ್ತವೆ.

ಈ ಪಾತ್ರಗಳ ವಿವರವನ್ನು ಗ್ರಹಿಸಲು ಮೃತ್ಯುವಿನ ಅನಿವಾರ್ಯತೆಯನ್ನು ಸೂಚಿಸುವ ಭಾಗವತದ ಹಿರಣ್ಯಕಶಿಪುವಿನ ಉಪದೇಶ ಪ್ರಸಂಗ, ಚಿತ್ರಕೇತು ಮಹಾರಾಜನ ಪುತ್ರಶೋಕ ಪ್ರಸಂಗಗಳನ್ನು ನೆನಪಿಸಿಕೊಳ್ಳಬೇಕಾಗುತ್ತದೆ. ಅವರಂತೆಯೇ ಅಗಸ್ತ್ಯನು ವಾತಾಪಿಯನ್ನು ಜೀರ್ಣಿಸಿಕೊಂಡದ್ದು, ಖಟ್ವಾಂಗರಾಯನು ತನ್ನ ಆಯುಷ್ಯ, ಇನ್ನು ಎರಡೇ ಮುಹೂರ್ತ ಕಾಲವೆಂದು ತಿಳಿದು ತಕ್ಷಣದಲ್ಲಿ ಧ್ಯಾನ ಪರನಾಗಿ ಮುಕ್ತಿ ಪಡೆದದ್ದು ಮುಂತಾದ ಘಟನೆಗಳ ವಿವರಗಳತ್ತ ನಮ್ಮ ಗಮನ ಹರಿಯುತ್ತದೆ.

ಹೀಗೆ ವೈರಾಗ್ಯ, ವಿವೇಕ, ಪರಾಕ್ರಮ, ವ್ರತನಿಷ್ಠೆ, ತ್ಯಾಗ, ಭೋಗ, ಯೋಗ, ಭಾಗ್ಯ, ಭಕ್ತಿ, ಮುಕ್ತಿ, ಶಕ್ತಿ, ಭುಕ್ತಿ ಮುಂತಾದ ಅನೇಕ ಕ್ಷೇತ್ರಗಳಲ್ಲಿ ಮಹತ್ಸಾಧನೆ ಮಾಡಿದ ಪೌರಾಣಿಕ ಪಾತ್ರಗಳನ್ನು ಒಟ್ಟಿಗೆ

ನೆನಪಿಗೆ ತರುವ ಮೂಲಕ ನಮ್ಮ ಅಹಂಕಾರ ನಿರಸನಗೊಳಿಸಿ ವಿನಯ-ವಿವೇಕದಿಂದ ಬಾಳಲು ಪ್ರೇರಿಸುವ ಈ ಕೀರ್ತನೆಯು ಸ್ವಾರಸ್ಯಕರವಾಗಿದೆ. ಹನುಮನಂತೆ, ವಶಿಷ್ಠನಂತೆ, ಭೀಷ್ಮನಂತೆ-ಒಂದೊಂದು ಗುಣಕ್ಕೆ ಪ್ರತಿನಿಧಿಯಾಗಬಲ್ಲ ಮಹತ್ಕಾರ್ಯವನ್ನು ಮಾಡಿದವರೇ ವಿನಯದಿಂದ ಇರುವಾಗ; ಅಲ್ಪರಾದ ನಾವು ಗರ್ವ ಪಡುವುದು ಉಚಿತವಲ್ಲವೆಂದಿದ್ದಾರೆ. ಏನನ್ನೂ ಸಾಧಿಸದ ಸಾಮಾನ್ಯ ಮನುಷ್ಯರಾದ ನಾವು ಸೊಕ್ಕಿ ನಡೆಯಬಾರದೆಂಬುದು 'ಉಪದೇಶಾತ್ಮಕ' ಮಾದರಿಯ ಈ ಕೀರ್ತನೆಯ ಉದ್ದೇಶವಾಗಿದೆ. ಇದೇ ಮಾದರಿಯ ಮತ್ತೊಂದು ಕೀರ್ತನೆ ಪುರಂದರದಾಸರಲ್ಲಿ ಕಂಡುಬರುತ್ತದೆ.

ಗರುವವ್ಯಾತಕೊ ನಿನಗೆ ಪಾಮರ ಮನುಜನೆ |
ಧರೆಯೊಳಗೆ ಕುರುಪತಿಗೆ ಸರಿಯೆನ್ನಬಹುದೆ ||ಪ||

ಬಲದಲ್ಲಿ ಹಲಧರನೆ, ಛಲದಲ್ಲಿ ರಾವಣನೆ |
ಕುಲದಲ್ಲಿ ವಶಿಷ್ಠ ಗೌತಮನೆ ನೀನು ||
ನೆಲೆಯಲ್ಲಿ ಭೃಗುಮುನಿಯೆ ನೇಮದಲಿ ಗಾಂಗೇಯನೆ
ಒಲುಮೆಯಲಿ ವಾಲ್ಮೀಕಿ ಮುನಿಯೇನೊ ನೀನು ||೧||

ಹಠದಲ್ಲಿ ಪ್ರಹ್ಲಾದನೆ ದಿಟದಲ್ಲಿ ಧ್ರುವರಾಯನೆ |
ಶಠರೊಳಗೆ ವಿಶ್ವಾಮಿತ್ರನೆ ನೀನು ||
ವಿಟರೊಳಗೆ ಮನ್ಮಥನೆ ವೀರರೊಳು ಪಾರ್ಥನೆ |
ಕುಟಿಲತನದಲ್ಲಿ ಶಕುನಿಯೇ ನೀನು ||೨||

ದಾನದೊಳು ಕರ್ಣನೇ ಗಾನದೊಳು ನಾರದನೆ
ಜ್ಞಾನದಲಿ ವ್ಯಾಸ ಶುಕಮುನಿಯೆ ನೀನು
ಧೀನ ರಕ್ಷಕ ನಮ್ಮ ಪುರಂದರ ವಿಠಲನ್ನ
ಧ್ಯಾನದೊಳು ಇದ್ದು ಭವ ನೀಗು ಮನುಜ ||೩||

ಸುಪ್ರಸಿದ್ಧರನ್ನು ಮಾತ್ರವಲ್ಲದೆ 'ಕುಪ್ರಸಿದ್ಧ'ರನ್ನೂ ಗುರುತಿಸಿ ಅವರಲ್ಲೂ ಇರಬಹುದಾದ ಸಾಮರ್ಥ್ಯಗಳನ್ನು ಇತ್ಯಾತ್ಮಕವಾಗಿ ಪರಿಗಣಿಸಿ ಅಹಂಕಾರ ನಿರಸನಕ್ಕೆ ಪ್ರೇರಿಸುವ ಈ ಬಗೆಯು ದಾಸರ ಅದ್ಭುತ ವೃದ್ಧಿಸಾಮರ್ಥ್ಯವನ್ನು ಸೂಚಿಸುತ್ತದೆ.

'ಸದಾಚಾರ ದುರಾಚಾರಗಳನ್ನು ವಿಂಗಡಿಸಿ ಸಾಮಾನ್ಯರಿಗೆ ತಿಳಿಸುವ ಸಂದರ್ಭದಲ್ಲಿ ಹರಿದಾಸರು ಸಾಮಾನ್ಯರ ಚಿತ್ತಭಿತ್ತಿಯಲ್ಲಾಗಲೇ ಅಚ್ಚೊತ್ತಿರುವ ಪುರಾಣ ಪುಣ್ಯಕತೆಗಳನ್ನೇ ಮಾಧ್ಯಮವಾಗಿ ಬಳಸಿಕೊಂಡಿರುವುದು ಅವರ ಪ್ರತಿಭೆಯ ಕುರುಹು. ಆದ್ದರಿಂದ ಹರಿದಾಸ ಸಾಹಿತ್ಯದಲ್ಲಿ ಶಿಷ್ಟ ಗುಣಗಳ ಪ್ರತೀಕಗಳಾಗಿ ಧ್ರುವ, ಪ್ರಹ್ಲಾದ, ಅಜಾಮಿಳ, ವಿಭೀಷಣಾದಿಗಳೂ, ದುಷ್ಟ ಗುಣಗಳ ಪ್ರತೀಕಗಳಾಗಿ ಶಕುನಿ, ಕೀಚಕ, ಬಕ, ಹಿಡಿಂಬಾದಿಗಳೂ ವಿಜೃಂಭಿಸಿದ್ದಾರೆ.'(ನಾಗರತ್ನ.ಟಿ.ಎಸ್) ಎಂಬ ಅಭಿಪ್ರಾಯವು ಸರಿಯೆನಿಸುತ್ತದೆ.



ಪುರಂದರದಾಸರು ಭಾಗವತದ ಕೆಲವು ಪಾತ್ರಗಳನ್ನು ಸ್ಮರಿಸಿಕೊಳ್ಳುವ ಮೂಲಕ ದೈವದ ಸಮ್ಮುಖದಲ್ಲಿ ವಿನಯವನ್ನು ನಿವೇದಿಸಿಕೊಳ್ಳುವ ಮತ್ತೊಂದು ಕ್ರಮವನ್ನು ಬಳಸಿದ್ದಾರೆ.

ಕರುಣಿಸೋ ರಂಗಾ ಕರುಣಿಸೋ ||ಪ||
ಇರುಳು ಹಗಲು ನಿನ್ನ ಸ್ಮರಣೆ ಮರೆಯದಂತೆ ||ಅ.ಪ||

ರುಕುಮಾಂಗದನಂತೆ ವ್ರತವ ನಾನರಿಯೆನು |
ಶುಕಮುನಿಯಂತೆ ಸ್ತುತಿಸಲರಿಯೆ ||
ಬಕವೈರಿಯಂತೆ ಧ್ಯಾನವ ಮಾಡಲರಿಯೆ ದೇ |
ವಕಿಯಂತೆ ಮುದ್ದಿಸಲರಿಯೆನು ರಂಗಾ ||

ಗರುಡನಂತೆ ಪೊತ್ತು ತಿರುಗಲರಿಯೆ ನಾನು |
ಕರಿರಾಜನಂತೆ ಕರೆಯಲರಿಯೆ ||
ವರಕಪಿಯಂತೆ ಸೇವೆಯ ಮಾಡಲರಿಯೆನು |
ಸಿರಿಯಂತೆ ನಿನ್ನ ಮೆಚ್ಚಿಸಲರಿಯೆ ರಂಗಾ ||

ವ್ರತ, ಸ್ತುತಿ, ಧ್ಯಾನ, ವಾತ್ಸಲ್ಯ, ದಾಸ್ಯ, ಶರಣಾಗತಿ, ಹಾಗೂ ಆತ್ಮಸಮರ್ಪಣೆಗಳಂತಹ ಭಕ್ತಜೀವನದ ಉತ್ತಮ ಮೌಲ್ಯಗಳಿಗೆ ಸಂಕೇತವೆನಿಸಬಲ್ಲ ರುಕ್ಮಾಂಗದ ಮೊದಲಾದ ಭಾಗವತರೊಡನೆ ಹೋಲಿಸಿಕೊಳ್ಳುವ ಈ ಕ್ರಮವು ವ್ಯಕ್ತಿಯನ್ನು 'ಸ್ವಯಂ ಮೌಲ್ಯಮಾಪನ'ಕ್ಕೆ ತೊಡಗಿಸುತ್ತದೆ.

ಕನಕದಾಸರು ತಮ್ಮ ಒಂದು ಕೀರ್ತನೆಯಲ್ಲಿ ಭಾಗವಂತನನ್ನು ನಂಬುವಂತೆ ಸಂದೇಶ ನೀಡಿದ್ದಾರೆ. ಈ ಭಗವನ್ನಿಷ್ಠೆಯಿಂದ ತಮ್ಮ ಕಷ್ಟಗಳಿಂದ ಪಾರಾದ, ಇಷ್ಟಾರ್ಥಗಳನ್ನು ಪಡೆದ ಪೌರಾಣಿಕ ಪಾತ್ರಗಳ ನಿದರ್ಶನ ನೀಡಿದ್ದಾರೆ.

ನಂಬು ನಾರಾಯಣನ ನಂಬೊ ನರಹರಿಯ
ನಂಬಿದಾ ಭಕ್ತರ ಕುಟುಂಬ ಸಾರಥಿಯ ||ಪ||

ಅಂಬರೀಷನು ನಂಬಿ ವೈಕುಂಠವೇರಿದನು
ಹಂಬಲಿಸಿ ಶಶಿಧರನು ಉರಿಯ ಗೆದ್ದ
ಕುಂಭಿನೀ ದೇವಿ ತಾ ಬಂಧನವ ಕಳೆದಳು
ಅಂಬುಜಾಕ್ಷಿ ದ್ರೌಪದಿಯು ಮಾನ ಉಳುಹಿಕೊಂಡಳು

* * *

ಒಂದೊಮ್ಮೆ ನಮ್ಮಿಂದ ಸಣ್ಣಪುಟ್ಟ ಅಪರಾಧಗಳು ನಡೆದಿದ್ದರೂ ಭಗವಂತ ಅವುಗಳನ್ನು ಕ್ಷಮಿಸುತ್ತಾನೆ. ನಂಬಿದ ಭಕ್ತರನ್ನು ಉದ್ಧರಿಸುತ್ತಾನೆ ಎಂಬ ಹಿನ್ನಲೆಯಲ್ಲಿ 'ಭಕ್ತಿಯ ಮೂಲಕ ಪಾಪಪ್ರಜ್ಞೆಯನ್ನು ಮೆಟ್ಟಿನಿಂತು ಆತ್ಮವಿಶ್ವಾಸವನ್ನು ಉಳಿಸಿಕೊಳ್ಳಲು ಈ ಕೀರ್ತನೆಯು ಸಹಾಯಕ ವಾಗುತ್ತದೆ.



ಹೀಗೆ ದಾಸರು ಭಾಗವತವನ್ನು ತಮ್ಮ ಮನಸ್ಸಿನಲ್ಲಿಟ್ಟುಕೊಂಡು ಆ ಸ್ಮೃತಿಸಂಪದವನ್ನು ದಿನದಿನದ ಬದುಕಿನ ಹಿತಕ್ಕೆ ಹೇಗೆಲ್ಲ ವಿನಿಯೋಗಿಸಿಕೊಳ್ಳಬಹುದೆಂದು ಆಲೋಚಿಸಿ ಅನೇಕ ತಂತ್ರಗಳನ್ನು ಕಂಡು ಕೊಂಡಿದ್ದಾರೆ.

೧. ಹರಿದಾಸರು ಸದಾ ಸಂಚಾರಿಗಳು. ತೀರ್ಥಕ್ಷೇತ್ರ ಯಾತ್ರೆಯ ಜೊತೆ ಜೊತೆಗೆ ದಾರಿಯ ಹಳ್ಳಿಗಳಲ್ಲಿ ಗ್ರಾಮಪ್ರದಕ್ಷಿಣೆಗೆ ಹೋದಾಗ ಒಂದು ಮನೆಯನ್ನು ದಾಟುವುದರೊಳಗೆ ಒಂದು ಕೀರ್ತನೆಯನ್ನು ಹಾಡುತ್ತಿದ್ದಿರಬೇಕು. ಹೀಗೆ ಅತಿ ಕಡಿಮೆ ಅವಧಿಯಲ್ಲಿ 'ಕಿರು ಗಾತ್ರದ ಕೃತಿ'ಯಲ್ಲಿ ಯಾವುದಾದರೊಂದು ಜೀವನೋಪಯೋಗಿಯಾದ ನೀತಿಯ ಮಾತನ್ನೂ ಹರಿಯ ಪುಣ್ಯನಾಮವನ್ನೂ ಭಾಗವತ ಕತೆಯನ್ನೂ ನಿರೂಪಿಸುವ ಅಗತ್ಯ ಎದುರಾಗಿರಬೇಕು.

೨. ಪುರಾಣ, ಹರಿಕಥೆ, ಕಾವ್ಯವಾಚನ ಭಾಗವತರಾಟಗಳಂತಹ ವಿವಿಧ ಮಾಧ್ಯಮಗಳಿಂದ ಜನರಿಗೆ ಈಗಾಗಲೇ ಚಿರಪರಿಚಿತವಾಗಿರುವ ಕತೆಗಳನ್ನು ಇಡೀಯಾಗಿ ಹೇಳದೆ ಕೇವಲ ಪಾತ್ರಗಳ ಹೆಸರಿನ ಮೂಲಕವೇ ಮೌಲ್ಯಗಳನ್ನು ತಿಳಿಸಿದರೆ ಸಾಕೆಂಬ ಅನಿಸಿಕೆಯೂ ಇರಬಹುದು.

೩. ಮಾತ್ರವಲ್ಲದೆ ಸ್ವಾರಸ್ಯಕರವಾದ ಈ ಕೀರ್ತನೆಯಿಂದ ಕೇಳುವ ಹೊಸ ಕೇಳುಗರು ಪ್ರಭಾವಿತರಾಗಲಿ ಹೆಚ್ಚಿನ ವಿವರಗಳಿಗಾಗಿ ಭಾಗವತವನ್ನು ಬಲ್ಲವರಿಂದ ತಿಳಿಯಲಿ, ಆ ಮೂಲಕ ಅದು ಹೆಚ್ಚು ಪ್ರಸಾರವಾಗಲಿ ಎಂಬ ಉದ್ದೇಶವೂ ಇದ್ದೀತು.

ಕಾರಣಗಳೇನೇ ಇರಲಿ ಕಾರ್ಯವಂತೂ ನಡೆದಿದೆ. ಈ ವಿಧಾನದ ವಿಸ್ತೃತರೂಪವಾಗಿ ಮುಂದಿನ ಮಾದರಿಯು ಕಂಡುಬರುತ್ತದೆ.

### ೭.೧.೨. ಮೌಲ್ಯಸ್ಥಾಪನೆಗಾಗಿ ಕಥಾ ಸಂದರ್ಭಗಳ ಬಳಕೆ

ನಮ್ಮ ವರ್ತನೆಯನ್ನು ನಿರ್ಧರಿಸುವಲ್ಲಿ ಪೂರ್ವಾನುಭವ ನಿರ್ಣಾಯಕವಾಗುತ್ತದೆ. ನಿನ್ನೆಯ ಪಾಠ ಇಂದನ್ನು ನಿಶ್ಚಯಿಸಿ ನಾಳೆಯನ್ನು ರೂಪಿಸುತ್ತದೆ. ಇದನ್ನೇ 'ಪರಂಪರೆ' ಎನ್ನುತ್ತೇವೆ. ನಮ್ಮ ಮತ್ತು ನಮ್ಮಂತೆಯೇ ಇರುವ ಇತರ ಮನುಷ್ಯರ ಅನುಭವದ ಆಧಾರದಿಂದ ಬದುಕಿನಲ್ಲಿ ಒಳಿತು-ಕೆಡಕುಗಳನ್ನು, ಸರಿ-ತಪ್ಪುಗಳನ್ನು, ಹಿತ-ಅಹಿತಗಳನ್ನು ನಿರ್ಣಯಿಸಿಕೊಳ್ಳುತ್ತೇವೆ.

ಹೀಗೆ ವ್ಯಕ್ತಿನಿಷ್ಠ ಅನುಭವವು ಸಾಧಾರಣೀಕರಣಗೊಳ್ಳುವ ಮೂಲಕ ಒಂದು ಮೌಲ್ಯವು ಸಾರ್ವತ್ರಿಕ ವಾಗುತ್ತದೆ. ಈ ವಿಧಾನವನ್ನೇ ಅನುಸರಿಸಿದ ಹರಿದಾಸರು ತಮ್ಮ ಕೆಲವು ಕೀರ್ತನೆಗಳಲ್ಲಿ ಮೌಲ್ಯ ಸ್ಥಾಪನೆಗಾಗಿ ಭಾಗವತ ಪುರಾಣದ ಘಟನೆಗಳನ್ನು ಬಳಸಿಕೊಂಡಿದ್ದಾರೆ. ಉದಾ :

ಅಕಟಕಟ ಸಂಸಾರವನು ನೆಚ್ಚಿ ಕೆಡಬ್ಯಾಡ
ವಿಕಟದಲಿ ಮಾನವರು ಕೆಟ್ಟರೆಲ್ಲರು ನಿಜ ||ಪ||

ಮುನ್ನ ನರಕಾಸುರನು ಬಡಿದು ಚಿಂತಾಮಣಿಯ
ತನ್ನ ಮನೆಯಲಿ ತಂದು ನಿಲ್ಲಿಸಿ ನೃಪರ |
ಕನ್ನೆಯರ ಷೊಡಶ ಸಹಸ್ರವನೆ ತಂದಾತ
ಹೆಣ್ಣನೊಬ್ಬಳನೊಯ್ಯುದಿಲ್ಲವೋ ನೋಡೋ ||೧||

ವರಯಜ್ಞಗಳ ಮಾಡಿ ನಹುಷ ಸುರಪತಿಯೆನಿಸಿ
ಪರಮ ಮುನಿಗಳ ಕೈಲೆ ದಂಡಿಗೆಯ ಹೊರಿಸಿ |
ಉರಗ ಜನುಮವನೈದಿ ಹೋದಾಗ ತನ್ನೊಡನೆ
ಸುರಲೋಕದೊಳಗೇನ ಕೊಂಡ್ಹೋದ ನೋಡೋ ||೨||

ತುಂಗಗುಣ ಧ್ರುವ ವಿಭೀಷಣ ಹನುಮಾದಿಗಳು
ಮಂಗಳಾತ್ಮಕ ಹರಿಯನರಿತು ಭಜಿಸಿ |
ಭಂಗವಿಲ್ಲದೆ ಹೊರೆದರ್ಕೆ ಸಕಲ ಭಾಗ್ಯವನು
ರಂಗವಿಠಲರೇಯನ ನೆರೆ ನಂಬಿರೋ ||೩||

ಶ್ರೀಪಾದರಾಜರ ಈ ಕೃತಿಯಲ್ಲಿ ಮಿತಿ ಅರಿತು ಬಾಳಬೇಕೆಂಬ ಸಂದೇಶವಿದೆ. 'ಬದುಕು ನಮಗೆ ಒಡ್ಡುವ ಆಮಿಷಗಳನ್ನು ಅತಿಯಾಗಿ ನೆಚ್ಚಿದರೆ ಹಾಳಾಗುತ್ತೇವೆ. ತಮ್ಮ ಮಿತಿ ಮೀರಿದ ದುಷ್ಟ ಜನರು ಹೇಗೆ ಕೆಟ್ಟುಹೋದರೆಂಬ ಪೌರಾಣಿಕ ಘಟನೆಗಳನ್ನು ನೆನಪಿಸುವ ಮೂಲಕ ಮೇಲಿನ ಸಂದೇಶವನ್ನು ಒಂದು ಮೌಲ್ಯವನ್ನಾಗಿ ಸ್ಥಾಪಿಸಲು ಪ್ರಯತ್ನಿಸಿರುವುದು ಕಂಡುಬರುತ್ತದೆ. ನರಕಾಸುರನು ಕಂಡವರನ್ನು ಬಡಿದು ತನ್ನದಲ್ಲದ, ದೇವಲೋಕದ ಚಿಂತಾಮಣಿಯನ್ನೂ, ಹದಿನಾರು ಸಾವಿರ ರಾಜಪುತ್ರಿಯರನ್ನೂ ತಂದಿಟ್ಟುಕೊಂಡ. ಕೊನೆಗೆ ಶ್ರೀಕೃಷ್ಣನಿಂದ ಹತನಾಗಿ ಪ್ರಾಣಬಿಡುವಾಗ ಒಬ್ಬ ಹೆಣ್ಣನ್ನೂ ಜೊತೆಗೆ ಒಯ್ಯಲಿಲ್ಲ. ಅಂದರೆ ಅವನು ಗಳಿಸಿದ ಚಿಂತಾಮಣಿ ಮತ್ತು ಮಹಿಳಾ ಸಮೂಹದಿಂದ; ಬದುಕಿದ್ದಾಗಲೂ, ಮರಣಾನಂತರವೂ ಯಾವುದೇ ಪ್ರಯೋಜನವಾಗಲಿಲ್ಲ. ಯುದ್ಧಮಾಡಿದ್ದೆಲ್ಲ ವ್ಯರ್ಥವಾಯಿತು. ಜೊತೆಗೆ ಅವನು ಕೆಟ್ಟವರ ಪಟ್ಟಿಯಲ್ಲಿ ಸೇರಿಹೋದ'. ಹೀಗೆ ಒಂದು ಮೌಲ್ಯವನ್ನು ನಮ್ಮ ಮನಸ್ಸಿನಲ್ಲಿ ನೆಲೆಗೊಳಿಸಲು ಒಂದು ಪುರಾಣ ಪ್ರಸಂಗ ಇಡಿಯಾಗಿ ಹೇಳದೆ ಕೇವಲ ಘಟನೆಯನ್ನು ಪ್ರಸ್ತಾಪಿಸುವ ಮೂಲಕ ಉದ್ದೇಶವನ್ನು ಸಾಧಿಸಿರುವುದು ಕಂಡುಬರುತ್ತದೆ.

ನಹುಷನ ಪಾಡೂ ಹೀಗೆಯೇ ಆಯಿತು. ಅವನು ಇಂದ್ರ ಪದವಿಯನ್ನು ಹೊಂದಿದರೂ, ಸಪ್ತ ಋಷಿಗಳು ಹೊತ್ತ ಪಲ್ಲಕ್ಕಿಯಲ್ಲಿ ಕುಳಿತರೂ, ತೃಪ್ತನಾಗದೆ ಅಧಿಕಾರದ ಅತಿ ವ್ಯಾಮೋಹದಿಂದ ಶಚಿಯನ್ನು ಬಯಸಿ, ಅಗಸ್ತ್ಯರನ್ನು ಅವಮಾನಿಸಿ ಅವರ ಶಾಪದಿಂದ ಹೆಬ್ಬಾವಾಗಿ ಭೂಮಿಗೆ ಬಿದ್ದನು. ನೂರಾರು ಯಜ್ಞಗಳನ್ನು ಮಾಡಿಗಳಿಸಿದ ಸ್ವರ್ಗದಿಂದ ಅವನಿಗೆ ಯಾವುದೇ ಪ್ರಯೋಜನವಾಗಲಿಲ್ಲ. ಅವನು ಅಲ್ಲಿಂದ ಏನನ್ನೂ ಕೊಂಡೊಯ್ಯಲಿಲ್ಲ.

ಇದಕ್ಕೆ ವಿರುದ್ಧವಾಗಿ ಭೋಗಗಳಿಗೆ ಮರುಳಾಗದೆ ತಮ್ಮ ಮಿತಿ ಅರಿತು ಹರಿಸೇವಕರಾದ ಧ್ರುವ, ವಿಭೀಷಣ, ಹನುಮಂತ ಮೊದಲಾದವರು ಸರ್ವಭಾಗ್ಯಗಳನ್ನೂ ಪಡೆದರು. ಮತ್ತು ಹಾಗೆ ಪಡೆದದ್ದನ್ನು ಅಡೆತಡೆ ಇಲ್ಲದೆ ದೀರ್ಘಕಾಲ ಉಳಿಸಿಕೊಳ್ಳಲು ಸಾಧ್ಯವಾಯಿತು.

ಹೀಗೆ ದುರ್ಗುಣದಿಂದ ಹಾಳಾದ - ಭಕ್ತಿಯಿಂದ ಉದ್ಧೃತರಾದ ಪಾತ್ರಗಳ ಚರ್ಯೆಗಳನ್ನು ಜೊತೆ ಜೊತೆಗೆ ವರ್ಣಿಸುವ ಮೂಲಕ 'ಯೋಗ್ಯಾಯೋಗ್ಯ ನಿರ್ಣಯ'ವನ್ನು ಕೇಳುಗರ ವೈಯಕ್ತಿಕ ವಿವೇಚನೆಗೆ ಬಿಟ್ಟಿದ್ದಾರೆ.

ಆವನಾವನ ಕಾಯ್ವ ಅವನಿಯೊಳಗೆ |
ದೇವದೇವೇಶ ಶ್ರೀಹರಿಯಲ್ಲದೆ || ಪ ||

ಆವ ತಂದೆಯು ಸಲಹಿದನು ಪ್ರಹ್ಲಾದನ |
ಆವ ತಾಯಿ ಸಲಹಿದಳು ಧ್ರುವರಾಯನ ||
ಆವ ಸುತ ಸಲಹಿದನು ಆ ಉಗ್ರಸೇನನ |
ಜೀವರಿಗೆ ಪೋಷಕನು ಹರಿಯಲ್ಲದೆ ||

ಆವ ಬಂಧುವು ಸಲಹಿದನು ಗಜರಾಜನನು |
ಆವ ಪತಿ ಕಾಯ್ದ ದ್ರೌಪದಿಯ ಮಾನ ||
ಆವ ಸೋದರರು ಸಲಹಿದರು ವಿಭೀಷಣನ |
ಜೀವರಿಗೆ ದಾತೃ ಶ್ರೀಹರಿಯಲ್ಲದೆ ||

ಆವನಾಧಾರ ಅಡವಿಯೊಳಿಪ್ಪ ಮೃಗಗಳಿಗೆ |
ಆವ ರಕ್ಷಕ ಪಕ್ಷಿ ಜಾತಿಗಳಿಗೆ ||
ಆವ ಪೊಷಕನು ಗರ್ಭದಲಿದ್ದ ಶಿಶುಗಳಿಗೆ |
ದೇವ ಶ್ರೀ ಪುರಂದರ ವಿಠಲನಲ್ಲದಲೆ ||

ಜೀವನದಲ್ಲಿ ಮಾನವ ಸಂಬಂಧಗಳು ಒಮ್ಮೊಮ್ಮೆ ಕೈಕೊಡುತ್ತವೆ. ಈ ಬಗ್ಗೆ ಎಚ್ಚರಿಕೆ ಇಲ್ಲದೆ 'ಅತಿವಿಶ್ವಾಸ'(Over Confidence) ಮಾಡಿದರೆ ತೊಂದರೆಯಾಗುತ್ತದೆ. ಆದ್ದರಿಂದ ವ್ಯಕ್ತಿಯು ಸ್ವಾವಲಂಬಿಯಾಗಬೇಕು-ಎಂಬ ಮೌಲ್ಯವನ್ನು ದೃಢೀಕರಿಸಲು ಈ ಮೇಲಿನ ಕೀರ್ತನೆಯಲ್ಲಿ ಪೌರಾಣಿಕ ಘಟನೆಗಳನ್ನು ಬಳಸಿದ್ದಾರೆ.

### ೭.೧.೩. ದೋಷರಾಶಿಯಲ್ಲೂ ಗುಣಶೋಧದ ಕಾಳಜಿ

ಪ್ರತಿಯೊಂದು ವಸ್ತು-ವಿಷಯಕ್ಕೂ ತನ್ನದೇ ಆದ ಗುಣದೋಷಗಳಿರುತ್ತವೆ. ವಿವೇಕಿಯಾದವನು ಅದರ ಉಭಯ ಮುಖಗಳನ್ನೂ ಪರೀಕ್ಷಿಸಿ ನೋಡಬೇಕು. ಗುಣವನ್ನು ಹೇಳುವಾಗ ದೋಷವನ್ನು

ಮುಚ್ಚಿಡಬೇಕಿಲ್ಲ. ದೋಷವನ್ನು ವೈಭವೀಕರಿಸಿ ಗುಣಗಳನ್ನು ಕಡೆಗಣಿಸಬೇಕಿಲ್ಲ. ದೋಷಗಳೇ ಹೆಚ್ಚಾಗಿದ್ದರೂ ಗುಣವನ್ನು ಕೈಬಿಡುವಂತಿಲ್ಲ. ದೋಷರಾಶಿಯ ಮಧ್ಯೆಯೂ ಗುಣ ಯಾವುದು? ಅದನ್ನು ಮಾನವನ ಉನ್ನತಿಗಾಗಿ ಬಳಸಿಕೊಳ್ಳುವ ಬಗೆ ಯಾವುದು? ಎಂಬ ಮೌಲ್ಯ ಚಿಂತನೆ ನಡೆಸಬೇಕು. ಇದು ಎಲ್ಲ ಕಾಲದ ಮಾನವತಾವಾದಿಗಳ ಮುಂದಿರುವ ಸವಾಲಾಗಿದೆ.

ಹರಿದಾಸರು ಇಂತಹ ಸಂದರ್ಭದಲ್ಲಿ ಭಾಗವತ ತೋರಿದ ಮಾರ್ಗವನ್ನು ಅನುಸರಿಸಿದ್ದಾರೆ. ದೋಷಗಳ ಮಧ್ಯೆಯೂ ಗುಣದ ಶೋಧನೆ ನಡೆಸಿದ್ದಾರೆ. ಇದನ್ನೇ ಮೌಲ್ಯ ಪ್ರತಿಪಾದನೆಯ ಒಂದು ಮಾರ್ಗವನ್ನಾಗಿ ಬಳಸಿಕೊಂಡಿದ್ದಾರೆ. ಈ ಮಾದರಿಯನ್ನು ತಿಳಿಯಲು ಅನೇಕ ಕೀರ್ತನೆಗಳ ವಿವಿಧ ಭಾಗಗಳನ್ನು ಜೊತೆಗಿಟ್ಟು ನೋಡಬೇಕಾಗುತ್ತದೆ. ಪರ-ವಿರೋಧ-ಸಮನ್ವಯದ ಅಭಿಪ್ರಾಯಗಳನ್ನು ತಪ್ಪಿಲ್ಲದೆ ಗುರುತಿಸಬೇಕಾಗುತ್ತದೆ. ಹಾಗಿಲ್ಲದೆ ಕೇವಲ ದೋಷವನ್ನು ಹೇಳುವ ಸಾಲುಗಳನ್ನಷ್ಟೇ ಗಮನಿಸಿದರೆ, ಗುಣವನ್ನು ಹೇಳುವ ಸಾಲುಗಳನ್ನು ನೆನಪಿಡದಿದ್ದರೆ ದಾಸರ ಒಟ್ಟಾರೆ ಮೌಲ್ಯ ನಿರ್ಣಯವನ್ನು ಗ್ರಹಿಸಲು ತೊಡಕಾಗುತ್ತದೆ.

**ಉದಾ : (ದೇಹದ ಗುಣ ದೋಷಗಳು)**

ಮನುಷ್ಯನಿಗೆ ರೂಪ, ಯೌವ್ವನ, ಶಕ್ತಿಗಳ ಮದವನ್ನು ಹುಟ್ಟಿಸುವ ದೇಹವು ಸಕಲರೋಗಗಳ ಆಗರ. ಇದರ ಘಟಕಗಳಾದ ಅಸ್ಥಿ, ರಕ್ತ, ಮಾಂಸ, ಮೇಧ, ಮಜ್ಜೆಗಳು ಚರ್ಮದ ಹೊದಿಕೆಯಲ್ಲಿದ್ದರೆ ಚಂದ. ಒಮ್ಮೆ ಹೊರಬಂದರೆ ದೇಹಕ್ಕೆ ಹಿಂಸೆಯಾಗುತ್ತದೆ. ಮನಸ್ಸಿಗ ಅಸಹ್ಯವಾಗುತ್ತದೆ.

ಕೂದಲು, ಉಗುರು, ಶ್ಲೇಷ್ಮ ಶುಕ್ಲ, ಮಲ, ಮೂತ್ರ, ಕೀವು ಇತ್ಯಾದಿಗಳು ದೇಹದಲ್ಲಿದ್ದಾಗ ಸಹ್ಯ, ದೇಹದಿಂದ ಹೊರಬಂದಾಗ ಪರಮ ಅಸಹ್ಯ. ದೇಹವನ್ನು ಎಷ್ಟೇ ಚೆನ್ನಾಗಿ ಪೋಷಿಸಿದರೂ ದಿನಗಳೆದಂತೆ ವಿಕಾರಹೊಂದಿ ಎಂದೋ ಒಂದುದಿನ ಬಿದ್ದುಹೋಗುತ್ತದೆ. ಇದನ್ನು ಪೂರ್ತಿ ನಂಬುವಂತಿಲ್ಲ. ನೆಚ್ಚುವಂತಿಲ್ಲ. ಆದ್ದರಿಂದ ಈ ದೇಹದ ಬಗ್ಗೆ ಅತಿಮೋಹ-ಒಣಹೆಮ್ಮೆ ಬೇಕಿಲ್ಲವೆನಿಸುತ್ತದೆ. ಇದನ್ನು ತಿಳಿದವನೇ ಜ್ಞಾನಿ ಎಂಬುದು ಕನಕದಾಸರ ಅಭಿಪ್ರಾಯ:

ಅಸ್ಥಿಪಂಜರದ ನರಗಳ ತೊಗಲಿನ ಹೊದಿಕೆಯ |
ವಿಸ್ತರಿಸಿಬಿಗಿದ ಮಾಂಸದ ಬೊಂಬೆಯು |
ರಕ್ತಮಲ ಮೂತ್ರ ಕೀವಿನ ಪ್ರಳಯದೊಡಲೆಂದು |
ಸ್ವಸ್ಥದಿಂ ತಿಳಿದಾತ ಪರಮಯೋಗಿ ||
(ತಾನ್ಯಾರು ದೇಹವ್ಯಾರು)

ಪರಸ್ತ್ರೀಯರ ಹೊರ ರೂಪಕ್ಕೆ ಮರುಳಾಗುವಾಗ, 'ಹೇಯವಾದ ದೇಹ ಶ್ಲಾಘನೀಯ'ವೆಂದು ಬಣ್ಣಿಸುವಾಗ ಮನುಷ್ಯನ ನೈಜ ಜ್ಞಾನ ಮರೆಯಾಗುವುದನ್ನು ಕಂಡು ಆಶ್ಚರ್ಯಪಡುತ್ತಾರೆ.

ನೀರ ಗುಳ್ಳೆ ಎನಿಪ ಕಣ್ಣ ನೀರಜಾಕ್ಷಿ ಎಂದು ಮತ್ತೆ |
ಸೋರುವ ಜಘನ ಕರಿಯ ಕುಂಭ, ಸುರಿವ ಶ್ಲೇಷ್ಮದ ||
ಮೋರೆ ಚಂದ್ರಬಿಂಬ, ಮಾಂಸವಿಕಾರವಾದ ಕುಚವ ಕನಕ ಕಲಶ |
ಸಾರವೆಂದು ನರಕರೂಪಿನ ನಾರಿಯರಿಗೆ ಭ್ರಮಿಸಿಬಾಳ್ವುದು ||
(ಎಷ್ಟು ಪ್ರೀತಿಯೋ ಮನಕೆ)

-ಕನಕದಾಸರು

ಇಲ್ಲಿಯ ವರ್ಣನೆ ಜುಗುಪ್ಸೆ ತರಿಸುವಂತಿದ್ದರೂ ಸತ್ಯವಾಗಿದೆ ಮತ್ತು ಸಹಜವಾಗಿದೆ. ಇದೇ ಭಾವನೆ ಇತರ ದಾಸರಲ್ಲೂ ಕಂಡುಬರುತ್ತದೆ.

ಹಿಗ್ಗುವೆ ಏಕೋ-ಏ ಮನುಜ | ಹಿಗ್ಗುವೆಯೇಕೋ |
ಹಿಗ್ಗುವ ತಗ್ಗುವ ಮುಗ್ಗುವ ಕುಗ್ಗುವ
ಅಗ್ನಿಯೊಳಗೆ ದಗ್ಧವಾಗುವ ದೇಹಕ್ಕೆ ||

ಎಂದು ಪ್ರಶ್ನಿಸುವ ಪುರಂದರದಾಸರು 'ಅಸ್ಥಿರದ ದೇಹವನ್ನು ನೆಚ್ಚಿ ನೀ ಕೆಡಬೇಡ' ಎಂದದ್ದೂ ಉಂಟು.

"ಹರಿದಾಸರ ಕೃತಿಗಳಲ್ಲಿ ಮಾನವನ ದೇಹವನ್ನು ಖಂಡಿಸುವ ಸಂದರ್ಭಗಳೂ ಕಂಡುಬರುವುದಿಲ್ಲವೆ ಎಂದು ಯಾರಾದರೂ ಆಕ್ಷೇಪಿಸಬಹುದು. ನಿಜ ಎಲ್ಲ ಹರಿದಾಸರೂ ಈ ಶರೀರವನ್ನು ಕುರಿತು ಖಂಡಿಸುವ ಮಾತುಗಳನ್ನೇ ಆಡಿರುತ್ತಾರೆ. "ನಂಬದಿರು ಈ ದೇಹ ನಿತ್ಯವಲ್ಲ ಮನುಜ ಶರೀರವಿದೇನು ಸುಖ", "ಹಿಗ್ಗುವೆ ಏಕೋ ಈ ದೇಹಕ್ಕೆ" ಎನ್ನುವ ಮಾತುಗಳು ಬಹುಮುಖ್ಯವಾದುವೇ ಸರಿ. ಇಲ್ಲಿ ವಿಚಾರಪರರಾದವರು ಒಂದು ಅಂಶವನ್ನು ನೆನಪಿನಲ್ಲಿಡಬೇಕು. ಮೇಲಿನ ಪಲ್ಲವಿಗಳಲ್ಲಿ ಅಲ್ಲಗಳೆದಿರುವುದು ಮನುಷ್ಯನ ಜೀವನವನ್ನಲ್ಲ ಮಾನವನ ಶರೀರವನ್ನು. ದೇಹ ಶಾಶ್ವತವಲ್ಲ ದೇಹಿ ಶಾಶ್ವತ. ಶರೀರಾಭಿಮಾನ ಮಾನವನನ್ನು ಬಹಳ ಬೇಗ ಮರುಳು ಮಾಡುತ್ತದೆ. ವ್ಯಾಮೋಹಕ್ಕೆ ಸಿಕ್ಕಿಬೀಳುವುದೇ ತಡ. ಆದರಿಂದ ಪಾರಾಗುವುದು ಕಷ್ಟ."(ವರದರಾಜರಾವ್, ೧೯೬೭:೧೨೫) ಎಂಬ ವಿಶ್ಲೇಷಣೆಯನ್ನು ಒಪ್ಪಿಕೊಳ್ಳಬಹುದಾಗಿದೆ. ಅಂದಮಾತ್ರಕ್ಕೆ ದಾಸರು, ಮಾನವ ಶರೀರದ ಮಹತ್ವವನ್ನು ಗಮನಿಸಿಲ್ಲವೆಂದೇನಲ್ಲ.

ಈ ದೋಷರಾಶಿಯ ಮಧ್ಯವೂ ದೇಹಕ್ಕೆ ತನ್ನದೇ ಆದ ಗುಣವಿದೆ, ಅದರ ಬಗ್ಗೆ ಕುರುಡಾಗಬಾರದು. ದೇಹವಿಲ್ಲದೆ ಜೀವಿಗೆ ನೆಲೆಯಿಲ್ಲ. ಜೀವಿಯು ತನ್ನ ಅಗತ್ಯಗಳಾದ ಕಾಣುವ, ಕೇಳುವ, ಮುಟ್ಟುವ ಮೂಸುವ, ಸವಿಯುವ ಅನುಭವಗಳನ್ನು ಪಡೆಯಲು: ನುಡಿಯುವ. ನಡೆಯುವ, ಮಾಡುವ, ಕೂಡುವ, ದೂಡುವ ಕ್ರಿಯೆಗಳನ್ನು ಸಾಧಿಸಲು ದೇಹವೇ ಆಧಾರವಾಗಿದೆ. ಇಂತಹ ಮಹತ್ವಪೂರ್ಣವಾದ ದೇಹವನ್ನು ಕುರುಣಿಸಿದ ಭಗವಂತನ ಕರುಣೆಯನ್ನು ಮರೆಯಬಾರದು.

ಎಲ್ಲ ಜೀವಿಗಳಿಗೂ ದೇಹವಿದೆ. ಆದರೆ ತರು, ಲತೆ, ಕ್ರಿಮಿ. ಕೀಟ, ಪ್ರಾಣಿ ಪಕ್ಷಿ ಶರೀರಗಳಲ್ಲಿ ಸಾಮಾನ್ಯವಾಗಿ ತತ್ವಜ್ಞಾನ ಪಡೆಯಲು ಅವಕಾಶವಿಲ್ಲ. ಸರ್ವಕರ್ತನಾದ ಭಗವಂತನ ಮಹಿಮೆಗಳನ್ನು

ಅರಿತು, ಚಿಂತಿಸಿ, ಸ್ತುತಿಸಿ, ಒಲಿಸಿಕೊಳ್ಳಲು ಮನುಷ್ಯ ಶರೀರವೇ ಸಾಧನ. ಈ ಅರ್ಥದಲ್ಲಿ 'ಮಾನವ ಜನ್ಮ ದೊಡ್ಡದು'. ಇದರ ಬೆಲೆಯನ್ನು ತಿಳಿದೂ ದೈವಭಕ್ತಿ ಮಾಡದಿದ್ದರೆ ಮನುಷ್ಯನಿಗಿಂತ ಪ್ರಾಣಿ ಜನ್ಮವೇ ಲೇಸೆನ್ನುತ್ತಾರೆ. ಪುರಂದರದಾಸರು :

ಜ್ಞಾನಭಕುತಿ ವೈರಾಗ್ಯವಿಲ್ಲದ |
ಮಾನವ ಜನ್ಮವದೇತಕೆ ಸುಡುಸುಡು |
ಆಹಾರ ಭಯ ನಿದ್ರೆ ಸ್ತ್ರೀಗೋಷ್ಠಿ ಎಂಬುವು |
ವಿಹಾರ ಪಶು-ಪಕ್ಷಿ-ಮೃಗಕೆ ದಕ್ಕಲು ಸರಿ |
ದೀನ ವತ್ಸಲ ಪುರಂದರ ವಿಠಲನ |
ನೆನೆವ ಕ್ರಿಮಿಕೀಟ ಜನುಮವೆ ಸಾಕು ||

ವಿವೇಕದಿಂದ ಸದ್ವಿನಿಯೋಗ ಮಾಡಿಕೊಂಡರೆ ವಿಕಾರವಾದ ದೇಹವೂ 'ವೈಕುಂಠ'ವೆನಿಸುತ್ತದೆ.

ಶರೀರ ಹರಿಯಪಟ್ಟಣ - ಹೃದಯ
ಸರೋಜವಾತನ ಅರಮನೆ
ಸೂರ್ಯಾದಿ ದೇವರು ಚಕ್ಷುರಾದಿಗಳಲ್ಲಿ
ದ್ವಾರಪಾಲಕರಾಗಿ ಇಪ್ಪರೆಂದು ||೧||

(ಬಲ್ಲವರಿಗಿಲ್ಲಿದೆ ವೈಕುಂಠ
ಬಲ್ಲವರಿಗೆಲ್ಲೂ ಶ್ರೀ ಹರಿಪೂಜೆ)

ಪ್ರತಿಯೊಬ್ಬರ ದೇಹದಲ್ಲಿ ನೆಲೆಸಿರುವ ಭಗವಂತನ ವಿಶಿಷ್ಟ ರೂಪವನ್ನು 'ಬಿಂಬ' ಎನ್ನುತ್ತಾರೆ. ಬಿಂಬವನ್ನು ಸಾಕ್ಷಾತ್ಕರಿಸಿಕೊಳ್ಳುವ ವಿದ್ಯೆಯೇ 'ಬಿಂಬೋಪಾಸನೆ'. ಬಿಂಬೋಪಾಸಕರಾದ ಹರಿದಾಸರು ದೇಹದ ಮಹತ್ವದ ಬಗ್ಗೆ ಜಾಗೃತರಾಗಿದ್ದಾರೆ.

ಸಾಧನ ಶರೀರವಿದು ನೀದಯದಿ ಕೊಟ್ಟದ್ದು
ಸಾಧಾರಣವಲ್ಲ ಸಾಧುಪ್ರಿಯನೆ

ಎಂಬಲ್ಲಿ ನಮಗೆ ಇಂತಹ ಅಮೂಲ್ಯ ಶರೀರವನ್ನು ಕೊಟ್ಟು ಅದರಲ್ಲಿ ವಿವಿಧ ಕ್ರಿಯೆಗಳನ್ನು, ಅವುಗಳನ್ನು ನಿಯಂತ್ರಿಸುವ ತಾತ್ವಿಕ ದೇವತೆಗಳನ್ನು ಇಟ್ಟು(ಕಣ್ಣಿನಲ್ಲಿ ಸೂರ್ಯ, ಮೂಗಿನಲ್ಲಿ ಅಶ್ವಿನೀ ದೇವತೆಗಳು, ಕಿವಿಯಲ್ಲಿ ದಿಗ್ದೇವತೆಗಳು ಮತ್ತು ಚಂದ್ರ ಇತ್ಯಾದಿ) ಅವರೊಳಗೆ ಭಗವಂತನು ತಾನೇ ನಿಂತು ಸಮಸ್ತ ಕ್ರಿಯೆಗಳನ್ನು ಮಾಡಿ ಮಾಡಿಸುವನೆಂದು ತಿಳಿದು ಸ್ತುತಿಸುವ ಹರಿದಾಸ ಪರಂಪರೆಯು; ದೋಷ ರಾಶಿಯಾದ ದೇಹದಲ್ಲೂ ಗುಣದ ಅನ್ವೇಷಣೆ ನಡೆಸಿರುವುದನ್ನು ಎಚ್ಚರಿಕೆಯಿಂದ ಗುರುತಿಸ ಬೇಕಾಗುತ್ತದೆ.

ತತ್ವಜ್ಞಾನವು ಶುದ್ಧ ಜಲವಾದರೆ ಶರೀರವೇ ಅದನ್ನು ತುಂಬುವ ಬಿಂದಿಗೆ. ದೇಹವಿಲ್ಲದೆ ಜ್ಞಾನದ ಅನುಭವವಿಲ್ಲ. ಆದ್ದರಿಂದ ದಾಸರು ಪ್ರಕೃತಿಯ ಅಭಿಮಾನಿಯಾದ ಲಕ್ಷ್ಮೀದೇವಿಯನ್ನು

ತಾರಕ್ಕ ಬಿಂದಿಗೆ ನಾನೀರಿಗ್ಹೋಗುವೆ ತಾರೇ ಬಿಂದಿಗೆಯ |
ಬಿಂದಿಗೆ ಒಡೆದರೆ ಒಂದೇ ಕಾಸು ತಾರೇ ಬಿಂದಿಗೆಯ ||

ಎಂದು ಪ್ರಾರ್ಥಿಸಿದ್ದಾರೆ. ಶರೀರ ಇರುವುದರೊಳಗೆ ಭಗವತ್ಸೇವೆ ಮುಗಿಯಬೇಕು.(ಪುರಂದರವಿಠಲನ ಅಭಿಷೇಕ ಮುಗಿಯಬೇಕು. ಒಮ್ಮೆ ಶರೀರ ನಾಶವಾದರೆ ಇದಕ್ಕೆ ಮೂರು ಕಾಸಿನ ಬೆಲೆಯೂ ಇಲ್ಲ. (ಅಂತ್ಯ ಸಂಸ್ಕಾರವೆಂಬ ಒಂದೇ ಕಾಸಿನ ಬೆಲೆ) ಇತ್ಯಾದಿಯಾಗಿ ದೇಹದ ಮಿತಿ ಮಹತ್ವಗಳನ್ನು ಒಟ್ಟಿಗೆ ಚಿಂತಿಸಿದ್ದಾರೆ.

ಮತ್ತೊಂದು ಕಡೆ ತತ್ವಜ್ಞಾನವನ್ನು ತುಪ್ಪವೆಂದೂ ದೇಹವು ಅದನ್ನು ತುಂಬುವ ಬಿಂದಿಗೆಯೆಂದೂ ಕರೆದು, ಇರುವಷ್ಟು ಕಾಲದಲ್ಲಿಯೇ ಉದ್ದೇಶಿತ ಸಾಧನೆಯನ್ನು ಮುಗಿಸಿಕೊಳ್ಳದಿದ್ದರೆ

ತುಪ್ಪದ ಬಿಂದಿಗೆ ತಿಪ್ಪಿಯ ಮೇಲೆ
ಧೊಪ್ಪನೆ ಬಿತ್ತಲ್ಲ ||
ಗೂಡು ಸಿಕ್ಕದಲ್ಲ ಗೂಡಿನ ಜಾಡು ಸಿಕ್ಕದಲ್ಲ |

ಎಂದು ಹಲುಬುವ ಸ್ಥಿತಿ ತಪ್ಪಿದ್ದಲ್ಲವೆಂದು ಎಚ್ಚರಿಸಿದ್ದಾರೆ. 'ಅಮೂಲ್ಯವಾದ ಈ ಶರೀರವನ್ನು ದುರ್ನಡತೆಗೆ ಬಳಸಿಕೊಳ್ಳಬಾರದು' ಎಂಬುದೇ ಈ ಸುದೀರ್ಘ ಚರ್ಚೆಯ ಫಲಿತವಾಗಿದೆ.

**ಉದಾ ೨. (ಕಲಿಯುಗದ ಮಿತಿ-ಮಹತ್ವಗಳು)**

ನಮ್ಮ ಬದುಕಿನ ಗತಿಯನ್ನು ನಿಯಂತ್ರಿಸುವ ಅಂಶಗಳಲ್ಲಿ ಕಾಲವೂ ಒಂದು. ಕಾಲಬಲಕ್ಕೆ ತಲಬಾಗದವರಿಲ್ಲ. ಕಾಲದ ಘಟಕಗಳಾದ ಹಗಲು-ರಾತ್ರಿಗಳು, ಮಳೆ-ಚಳಿ ಬೇಸಿಗೆಗಳು ನಮ್ಮ ಚಟುವಟಿಕೆಗಳನ್ನು ಬದಲಿಸುವಂತೆಯೇ, ಅದರ ದೀರ್ಘ ಅವಧಿಗಳಾದ ಯುಗಗಳು ಮನುಷ್ಯನ ಮೌಲ್ಯಗಳನ್ನು ಪಲ್ಲಟಿಸುತ್ತವೆಯೆಂಬ ನಂಬಿಕೆಯಿದೆ. ವೈದಿಕರಂತೆಯೇ ಜೈನರೂ[೨] ಸಹ ಮಾನವನ ನಡತೆಯು ಕಾಲಗತಿಯನ್ನು ಅವಲಂಬಿಸಿದೆ ಎಂದು ನಂಬಿದ್ದಾರೆ.

ಕೃತಯುಗದಲ್ಲಿ ಪೂರ್ಣಧರ್ಮವು ನೆಲೆಸಿದ್ದು, ಅದು ಸತ್ಯಯುಗವೆಂದು ಖ್ಯಾತವಾಗಿದೆ. ತ್ರೇತ, ದ್ವಾಪರ, ಕಲಿಯುಗಗಳಲ್ಲಿ ಧರ್ಮವು ಕ್ರಮವಾಗಿ ಒಂದೊಂದು ಪಾದದಷ್ಟು ಕುಗ್ಗುತ್ತದೆ ಎಂಬುದು ಪುರಾಣಗಳ ನಿಲುವು. ಈ ಪ್ರಕಾರ ಕಲಿಯುಗದಲ್ಲಿ ಒಂದೇ ಪಾದ ಧರ್ಮ; ಅಧರ್ಮವೇ ಹೆಚ್ಚು. ಇದನ್ನು ದಾಸರೂ ಒಪ್ಪಿದ್ದಾರೆ. ತಮ್ಮ ಅನೇಕ ಕೀರ್ತನೆಗಳಲ್ಲಿ ಈ ವಿಚಾರವನ್ನು ಹೇಳಿದ್ದಾರೆ.

ಕಲಿಯುಗದ ಮಹಿಮೆಯನು ಕಾಣಬೇಕಿಂತು || ಪ ||

ಹರಿಸ್ಮರಣೆಯನು ಬಿಟ್ಟು ಹೀನರನೆ ಸ್ತುತಿಸುವರು |
ಗುರುಹಿರಿಯರೊಳು ದೋಷವೆಣಿಸುತಿಹರು |
ಪೊರೆದ ತಾಯ್ತಂದೆಗಳ ಮಾತ ಕೇಳದೆ ತಮ್ಮ |
ತರುಣಿಯರ ನುಡಿಗಳನು ಲಾಲಿಸುತ್ತಿಹರು |

* * *

ಕಂಡುದನೆ ಹೇಳರು ಕಾಣದನೆ ಹೇಳುವರು |
ಉಂಡಮನೆಗೆರಡನ್ನೆ ಎಣಿಸುತಿಹರು ||
ಕೊಂಡಾಡಿ ಬೇಡಿದರೆ ಕೊಡರೊಂದು ರುವ್ವಿಯನು |
ದಂಡಿಸುವರಿಂಗೆ ಧನಗಳನು ಕೊಡುತಿಹರು |

ಕಳ್ಳರೊಳು ಕಡುಸ್ನೇಹ ಸುಳ್ಳರೊಳು ಸೋಲುವರು |
ಒಳ್ಳೆಯವರೊಡನೆ ವಂಚನೆ ಮಾಳ್ಪರು ||
ಇಲ್ಲದ ಅನಾಥರಿಗೆ ಇದ್ದಷ್ಟು ತಾವ್ ಕೊಡರು|
ಬಲ್ಲಿದವರಿಗೆ ಬಾಯ ಸವಿಯನುಣಿಸುವರು||

ಪಟ್ಟದರಸಿಯನಗಲಿ ಮೋಸದಲ್ಲಿ ತಪ್ಪುವರು|
ಕೊಟ್ಟ ಸಾಲವ ನುಂಗಿ ಕೊಡದಿಪ್ಪರು||
ಮುಟ್ಟಿ ಪರಹೆಣ್ಣಿಂಗೆ ಮೋಸದಲಿ ಕೂಡುವರು|
ಬಿಟ್ಟು ಕುಲಸ್ವಾಮಿಯನು ಬಡದೈವಕೆರಗುವರು|

ಮಾಡಿದುಪಕಾರವನು ಮರೆತು ಕಳೆವರು ಮತ್ತೆ|
ಕೂಡಾಡಿ ಬೇಡುವರು ಕುಟಿಲತ್ವದಿಂದ||

* * *

-ಪುರಂದರದಾಸರು

ಇಲ್ಲಿಯ ಪ್ರತಿಯೊಂದು ಮಾತಿಗೂ ಜನರ ವರ್ತನೆಗೂ ತಾಳೆಯಾಗುತ್ತದೆ. ಯಾವುದನ್ನೂ ಉತ್ಪ್ರೇಕ್ಷೆಯೆನ್ನುವಂತಿಲ್ಲ. ಎಲ್ಲ ದೋಷಗಳೂ ಒಬ್ಬರಲ್ಲೇ ಕಾಣುವುದಿಲ್ಲವಾದರೂ ಒಟ್ಟು ಸಮಾಜದಲ್ಲಿ ಮೇಲಿನ ಎಲ್ಲ ತಪ್ಪುಗಳು ನಡೆಯುತ್ತಿವೆ. ನೈತಿಕ ಅಧಃಪತನವನ್ನು ಕಂಡು ಮರುಗುವ ದಾಸರು ಅದಕ್ಕೆ ಕಾರಣವಾದ ಕಾಲವನ್ನು ಅನೇಕ ರೀತಿಗಳಲ್ಲಿ ವಿವರಿಸುತ್ತಾರೆ.

ಧರ್ಮಕ್ಕೆ ಕೈಬಾರದೀ ಕಾಲ-ಪಾಪ-
ಕರ್ಮಕ್ಕೆ ಮನ ಬಾಹುದೀ ಕಲಿಕಾಲ || ಪ ||

ದಂಡದೋಷಕೆ ಉಂಟು ಪುಂಡುಪೋಕರಿಗುಂಟು |
ಹೆಂಡಿರು-ಮಕ್ಕಳಿಗಿಲ್ಲವೀ ಕಲಿಗಾಲ ||
ಭಂಡೆಯರಿಗುಂಟು ದಿಂಡೆಯರಿಗುಂಟು ಬೇಡಿ |
ಕೊಂಡವರಿಗಿಲ್ಲವು ಈ ಕಲಿಕಾಲ ||

-ಪುರಂದರದಾಸರು

'ಕಲಿಯುಗದ ಮಹಿಮೆಯನು ಕಂಡಷ್ಟು ಪೇಳುವೆನು' ಎಂಬ ಕೀರ್ತನೆಯಲ್ಲಿ ಕನಕದಾಸರು ತಮ್ಮ ಕಾಲದ ಬದುಕಿನ ದುರ್ಭರತೆಯನ್ನು ಇನ್ನಿಲ್ಲವೆಂಬಂತೆ ಚಿತ್ರಿಸಿದ್ದಾರೆ.[೬]

ಸತ್ಯಧರ್ಮಗಳೆಲ್ಲ ಎತ್ತ ಪೋದವೊ ಕಾಣೆ |
ಉತ್ತಮರ ಜೀವನಕೆ ದಾರಿಯಿಲ್ಲ ||

ನಿತ್ಯದಲಿ ಕಳವು ವ್ಯಭಿಚಾರವುಳ್ಳವರೆಲ್ಲ |
ಅರ್ಥ ಸಂಪನ್ನರಾಗನುಭವಿಸುತಿಹರು ||

ಅತ್ತೆ ಸೊಸೆಯರು, ತಂದೆ ಮಕ್ಕಳು, ಗಂಡ ಹೆಂಡತಿಯರು ಎಂಬ ವಾವೆ ವರಸೆಗಳು (ಮಾನವೀಯ ಸಂಬಂಧಗಳು) ತಪ್ಪಿ ಎಲ್ಲರೂ ತಮಗೆದುರಿಲ್ಲವೆಂದು ವರ್ತಿಸುತ್ತಾರೆ. ಅಯೋಗ್ಯರೆಲ್ಲ ಸಂಪತ್ತಿನ ಮದದಿಂದ ಸೊಕ್ಕಿನಡೆಯುತ್ತಾರೆ. ಸರಳ ಸ್ವಭಾವದ ಸಾಧು ಸಜ್ಜನರನ್ನು ರಕ್ಷಿಸುವವರೇ ಇಲ್ಲ.

ಕಾದುವ ಶೂರರಿಗೆ ಕಾಸುಕೊಡುವವರಿಲ್ಲ
ಮೇದಿನಿಗೆ ಬೀಳ್ವ ಮಳೆ ಖಂಡಮಂಡಲವು

* * *

ಅನ್ನವಸ್ತ್ರಗಳಿಂದ ಚೆನ್ನಾಗಿ ಬಾಳುವರ|
ಭಿನ್ನ ತಂತ್ರವ ಮಾಡಿ ಕೆಡಿಸುತಿಹರು|
ಗನ್ನಗತಕವ ಮಾಳ್ಪ ಗ್ರಾಮಣ್ಯಗಳ ಕಲಿತು|
ಕುನ್ನಿಗಳು ಹೆಚ್ಚಿದರು ಕ್ರೂರಫಣಿಯಂತೆ||

ಆಳಿದೊಡೆಯಂಗೆರಡು ಬಗೆಯುವಾತಗೆ ಒಳ್ಳೆ|
ಮಾಳಿಗೆಯ ಮನೆ ತುರುವು ಧನಧಾನ್ಯವು|
ವೇಳೆ ವೇಳೆಗೆ ಬರುವ ಹೆಂಡತಿಯ ಲೆಕ್ಕಿಸದೆ|
ಸೂಳೆಯನು ನೆಚ್ಚಿ ಕಾಲವ ಕಳೆವರಯ್ಯ||

ಸೇರಿದ್ರೋಹವ ಮಾಳ್ಪ ಕೂರಕರ್ಮಿಗಳಮತ|
ಪೂರೈಸಿಕೊಡುವರರಸುಗಳೆಲ್ಲರು|
ಧಾರಿಣಿಯ ಭಾರವನು ತಾಳಲಾರದೆ ದೇವಿ|
ಶ್ರೀರಾಮರಾಮೆಂದು ಶಿರವ ತೂಗುವಳು||

ಉತ್ತಮ ಪತಿವ್ರತೆಯು ಪತಿನೀನೆ ಗತಿಯೆನಲು|
ಮುತ್ತೈದೆಗುಡುವುದಕೆ ವಸ್ತ್ರವಿಲ್ಲ|
ಮತ್ತೆ ವ್ಯಭಿಚಾರಿಣಿಗೆ ತೊಡುಗೆ ಬಂಗಾರಗಳು|
ವರ್ತನೆಯಿದೇನಯ್ಯ ಕಲಿಯುಗದ ಮಹಿಮೆ||
ಪತಿವ್ರತೆಯರೆಂಬುವರು ಶತಸಹಸ್ರಕೊಬ್ಬರು|
ಮಿತಿಮೀರಿಯಿಹರಯ್ಯ ಇತರ ಜನರು||
ಮತಿಗೆಟ್ಟು ಮನಸೋತು ಅನ್ಯಪುರುಷರ ಕೂಡಿ|
ಗತಿಗೆಟ್ಟು ಹೋಗುವರು ಮೂರುತೊರೆದು||

ಹರಿಹರರ ಪೂಜೆಗಳೇ ಹಗರಣಗಳಾಗಿ ಹೋಗಿವೆ. ಉಗ್ರದೇವತೆಗಳಿಗೆ ಪ್ರಾಣಿಬಲಿ ನೀಡುವುದೇ ಶ್ರೇಷ್ಠಭಕ್ತಿಯೆಂಬಂತಾಗಿದೆ; ಮುಂತಾಗಿ ವಿವರಿಸುವ ಕನಕದಾಸರು ಕೊನೆಗೆ :

ನಡೆವ ಕಾರ್ಯಗಳೆಲ್ಲ ನುಡಿಲೆನ್ನಳವಲ್ಲ
ಒಡೆಯ ನೀನೇ ಬಲ್ಲೆ ಕಲಿಯುಗದ ಮಹಿಮೆ|
ತಡವ ಮಾಡಲಿ ಬೇಡ ತಾಳಲಾರದು ಲೋಕ
ಮೃಡನ ವೈರಿಯ ಪೆತ್ತ ಆದಿಕೇಶವನೇ||

ಎಂದು ಕಲ್ಕಿಯ ಶೀಘ್ರ ಅವತಾರಕ್ಕೆ ಮೊರೆಯಿಟ್ಟಿದ್ದಾರೆ.

ಹೀಗೆ ಅನ್ಯಾಯಗಳ ಸರಮಾಲೆಯನ್ನು ಪಟ್ಟಿ ಮಾಡುವಲ್ಲಿ ಅವರಿಗಿರುವ ಅಪಾರವಾದ ಜೀವನಶ್ರದ್ಧೆ ವ್ಯಕ್ತವಾಗುತ್ತದೆ. 'ನಮ್ಮ ವರ್ತನೆ ಹೀಗಿರಬಾರದಿತ್ತು' ಎಂಬ ವಿಷಾದ ಎದ್ದು ಕಾಣುತ್ತದೆ. ಕನಕದಾಸರ 'ಕಲಿಹೆಚ್ಚಿ ಬಂದಿತಲ್ಲ', 'ಏಕೆ ನಡುಗಿದೆ ತಾಯಿ', ಪುರಂದರದಾಸರ 'ಜನರ ನಡತೆಕೇಳಿರಯ್ಯ', 'ಸತ್ಯವಂತರಿಗಿದು ಕಾಲವಲ್ಲ' ಮೊದಲಾದ ಕೀರ್ತನೆಗಳಲ್ಲಿ ಈ ಚಿತ್ರಣವು ಮತ್ತಷ್ಟು ಗಾಢವಾಗಿದೆ.

ಇಷ್ಟೊಂದು ದೋಷಗಳ ಆಗರವಾದ ಕಲಿಯುಗದಲ್ಲಿ ಒಂದು ಅಮೂಲ್ಯವಾದ ಗುಣವಿದೆ ಎನ್ನುತ್ತಾರೆ ಶ್ರೀಪಾದರಾಜರು.

ಕಲಿಕಾಲಕೆ ಸಮ ಯುಗವಿಲ್ಲವಯ್ಯ
ಕಲುಷಹರಿಸಿ ಕೈವಲ್ಯವೀವುದಯ್ಯ
ಸಲೆ ನಾಮಕೀರ್ತನೆ ಸ್ಮರಣೆ ಸಾಕಯ್ಯ
ಸ್ಮರಿಸಲು ಸಾಯುಜ್ಯ ಪದವೀವುದಯ್ಯ
ಬಲವಂತ ಶ್ರೀರಂಗವಿಠಲನ ನೆನೆದರೆ
ಕಲಿಯುಗವೆ ಕೃತಯುಗವಾಗುವುದಯ್ಯ||

* * *

ಧ್ಯಾನವು ಕೃತಯುಗದಿ
ಯಜನಯಜ್ಞವು ತ್ರೇತಾಯುಗದಿ
ದಾನವಾಂತಕನ ದೇವತಾರ್ಚನೆಯು ದ್ವಾಪರಯುಗದಿ
ಆ ಮಾನವರಿಗೆಷ್ಟು ಫಲವೊ ಅಷ್ಟುಫಲವು
ಕಲಿಯುಗದಿ ಗಾನದಲಿ ಕೇಶವಯೆನಲು
ಕೈಗೂಡುವನು ರಂಗವಿಠಲ||

ಈ ಎರಡು ಉಗಾಭೋಗಗಳಿಗೆ ಹರಿದಾಸ ಪರಂಪರೆಯಲ್ಲಿ ವಿಶೇಷ ಮಹತ್ವವಿದೆ. 'ಕಲಿಯುಗದಲ್ಲಿ ನಾಮಸ್ಮರಣೆಯಿಂದ ಉದ್ಧಾರ'ವೆಂಬ ಶ್ರದ್ಧೆಯಿಂದಲೇ ಅಂದಿನಿಂದ ಇಂದಿನವರೆಗೆ ನೂರಾರು ಹರಿದಾಸರು; ಅವರನ್ನು ಅನುಸರಿಸಿದ ಕೋಟ್ಯಂತರ ಜನಸಾಮಾನ್ಯರು ಭಕ್ತಿಯಿಂದ ಭಗವಂತನನ್ನು ನೆನೆಯುತ್ತ ಬಂದಿದ್ದಾರೆ. ಪುರಂದರರು-ಕನಕದಾಸರು ಮನೆಮನೆ ತಿರುಗಿ :

ಕಲಿಯುಗದೊಳು ಹರಿನಾಮವ ನೆನೆದರೆ
ಕುಲಕೋಟಿಗಳುದ್ಧರಿಸುವುವು ||

ಸುಲಲಿತ ಭಕ್ತಿಗೆ ಸುಲಭನೆಂದೆನಿಸುವ |
ಜಲರುಹನಾಭನ ನೆನೆ ಮನವೆ ||

ಎಂದು ಕರೆಕೊಟ್ಟಿದ್ದಾರೆ. ಅವರ ಉಪದೇಶದಿಂದ ಸಾವಿರಾರು ಕುಟುಂಬಗಳು ತಮ್ಮ ವರ್ತನೆಯನ್ನು ಸುಧಾರಿಸಿಕೊಂಡು ದೈವಭಕ್ತರಾಗಿ, ಪರೋಪಕಾರದ ಸಾರ್ಥಕ ಜೀವನ ನಡೆಸುತ್ತಿದ್ದಾರೆ.

ಕಲಿಯುಗದ ದೋಷ ಚಿತ್ರಣವು ಭಾಗವತ ೧೨ನೇ ಸ್ಕಂದ ೩ನೇ ಅಧ್ಯಾಯದಲ್ಲಿ ವಿಸ್ತಾರವಾಗಿ ಬಂದಿದೆ. ಅಲ್ಲಿಯ ಕೊನೆಯ ಶ್ಲೋಕಗಳಲ್ಲಿ ಗುಣವನ್ನು ಪ್ರಶಂಸಿಸುವ ಮಾತುಗಳು ಹೀಗಿವೆ

ಕಲೇರ್ದೋಷನಿಧೇರಾಜನ್ ಅಸ್ತಿಹ್ಯೇಕೋ ಮಹಾನ್‌ಗುಣಃ|
ಕೀರ್ತನಾದೇವ ಕೃಷ್ಣಸ್ಯ ಮುಕ್ತಸಂಗಃ ಪರಂ ವ್ರಜೇತ್||
ಕೃತೇ ಯದ್ಧ್ಯಾಯತೋ ವಿಷ್ಣುಃ ತ್ರೇತಾಯಾಂ ಯಜತೋಮಖೈಃ|
ದ್ವಾಪರೇ ಪರಿಚರ್ಯಾಯಾಂ ಕಲೌತದ್ಧರಿ ಕೀರ್ತನಾತ್||

(ಭಾಗವತ ೧೨:೩:೫೧-೫೨)

ಕಲಿಯುಗವು ದೋಷಗಳ ಗಣಿ ನಿಜ. ಆದರೆ ಅದರಲ್ಲಿ ಒಂದು ದೊಡ್ಡಗುಣವಿದೆ. ಶ್ರೀಕೃಷ್ಣನನ್ನು ಭಕ್ತಿಯಿಂದ ಕೀರ್ತಿಸಿ ನರನು ಮುಕ್ತನಾಗಿ ಶ್ರೀಹರಿಲೋಕವನ್ನೈದಬಹುದಾಗಿದೆ. ಕೃತಯುಗದಲ್ಲಿಧ್ಯಾನ, ತ್ರೇತೆಯಲ್ಲಿ ಯಜನ, ದ್ವಾಪರೆಯಲ್ಲಿ ಪರಿಚರಣವಾದರೆ ಕಲಿಯಲ್ಲಿ ಕೀರ್ತನೆಯೇ ಮೋಕ್ಷಕ್ಕೆ ಸುಲಭ ಸಾಧನವಾಗಿದೆ.

ಇಂತಹ ಕಡೆಗಳಲ್ಲಿ 'ಭಜನೆಯ ಪದಗಳನ್ನು ಹಾಡುತ್ತ ಕುಳಿತರೆ ಕಲಿಯುಗದ ಎಲ್ಲ ಅನ್ಯಾಯಗಳು ನಿಂತು ಹೋಗುತ್ತವೆಯೆ?' ಎಲ್ಲ ಸಾಮಾಜಿಕ ಸಮಸ್ಯೆಗಳು ಪರಿಹಾರವಾಗುತ್ತವೆಯೆ? ಎಂಬ ಪ್ರಶ್ನೆಗಳನ್ನು ಕೇಳಿಕೊಳ್ಳದೆ ಇರಲು ಸಾಧ್ಯವಿಲ್ಲ. ಆದರೆ ಶ್ರೀಪಾದರಾಜರು

ಬಲವಂತ ಶ್ರೀರಂಗವಿಠಲನ ನೆನೆದರೆ
ಕಲಿಯುಗವೆ ಕೃತಯುಗವಾಗುವುದಯ್ಯ

ಎಂದು ಹೇಳಿದ ಮಾತುಗಳ ಆಶಯವನ್ನು ಸ್ವಲ್ಪ ವಿವರಿಸಿಕೊಳ್ಳಬೇಕಾಗುತ್ತದೆ. ಹರಿನಾಮ ಸ್ಮರಣೆ ಎಂದರೆ ಕೇವಲ ಯಾಂತ್ರಿಕವಾಗಿ 'ರಾಮ-ರಾಮ' 'ಕೃಷ್ಣ-ಕೃಷ್ಣ' ಜಪಿಸುವುದಲ್ಲ. ನಾಮಸ್ಮರಣೆಗೆ ಭಗವದ್ಭಕ್ತಿಯ ಬೆಂಬಲಬೇಕು. ಅದು ಮೂಢಭಕ್ತಿಯಲ್ಲ. ಭಗವಂತನೇ ನೀತಿ ನಡತೆಗಳ ನಿಯಾಮಕನೆಂದೂ, ಧರ್ಮ, ನ್ಯಾಯ, ನೀತಿಗಳನ್ನು ಗೌರವಿಸುವುದು ಭಕ್ತನ ಕರ್ತವ್ಯವೆಂದೂ ತಿಳಿದು ಆಚರಿಸಬೇಕು.

'ಹಂಬಲವ ಬಿಡದವಗೆ ಹರಿನಾಮವೇಕೆ'
'ಸಟೆಯನ್ನಾಡುವ ಮನುಜರು ಮನದಲಿ ವಿಠಲನ ನೆನೆದರೆ ಏನು ಫಲ'

ಎಂದು ದಾಸರು ಪ್ರಶ್ನಿಸಿದ್ದಾರೆ. ಆದರೆ ನಾಮಸ್ಮರಣೆಯು ವೈಯಕ್ತಿಕ ನೆಲೆಯಲ್ಲಿ ಶೀಲಸಂವರ್ಧನೆಯ ಪರಿಕರವಾಗಿ ದುಡಿಯಬೇಕು. ಇದು ಸಾಧ್ಯವಾದರೆ ಪಾಪಿಯು ಪಾವನನಾಗುತ್ತಾನೆ. ಕಲಿಯುಗವು ಕೃತಯುಗವಾಗುತ್ತದೆ ಎಂಬುದು ಶ್ರೀಪಾದರಾಜರ ಅಭಿಪ್ರಾಯವಾಗಿರಬೇಕು.

ಈ ಎಲ್ಲ ಭಾಗಗಳನ್ನು ಒಟ್ಟಿಗೆ ತಂದು, ಹೋಲಿಸಿ ನೋಡಿದಾಗ ದಾಸಸಾಹಿತ್ಯದಲ್ಲಿ ದೋಷದ ಮಧ್ಯೆಯೂ ಗುಣವನ್ನು ಅರಸುವ ಪ್ರಾಮಾಣಿಕ ಮೌಲ್ಯಪ್ರಿಯತೆಯನ್ನು ಗುರುತಿಸಬಹುದಾಗಿದೆ. ಆಕರದ ಅನುಸರಣೆಯ ಮಧ್ಯೆಯೂ ತಮ್ಮ ಜೀವನಾನುಭವವನ್ನು ಅಳವಡಿಸಿ 'ವೃದ್ಧಿ' ಸಾಧಿಸಿರುವುದನ್ನು ಮರೆಯುವಂತಿಲ್ಲ.

### ೭.೧.೪. ಸ್ಥಾಪಿತ ಮೌಲ್ಯಪ್ರಜ್ಞೆಯ ನಿರಚನೆ

ಜೀವನದ ಕೆಲವು ಘಟನೆಗಳನ್ನು ಆಧರಿಸಿ; ಲೋಕ, ಶಾಸ್ತ್ರ, ಕಾವ್ಯಗಳು ಮನುಷ್ಯನ ಒಳಿತುಕೆಡಕುಗಳನ್ನು ನಿರ್ಧರಿಸುತ್ತದೆ. ಹೀಗೆ ಒಪ್ಪಿತವಾಗುವ ಮೌಲ್ಯಪ್ರಜ್ಞೆಯು ಬಹುಮಟ್ಟಿಗೆ ಸಾರ್ವತ್ರಿಕ ಸಮ್ಮತಿಯನ್ನು ಪಡೆದಿರುತ್ತದೆ. ಇಂತಹ ನಿರ್ಣಯಗಳಿಲ್ಲದಿದ್ದರೆ ಯಾವ ಸಮಾಜವೂ ಬದುಕಲಾರದು. ಅಂದಮಾತ್ರಕ್ಕೆ ಅವೇ ಅಂತಿಮವಾಗಬೇಕಾಗಿಲ್ಲ.

ಕೆಲವೊಮ್ಮೆ ಇಂತಹ ಪೂರ್ವನಿರ್ಧಾರಗಳು ಪ್ರಗತಿ ವಿರೋಧಿಯಾಗಿರುತ್ತವೆ. ಗತಕಾಲದ ಅನುಭವವನ್ನೇ ಅತಿಯಾಗಿ ಆಧರಿಸುವುದಕ್ಕಿಂತ ಬದುಕನ್ನು ಹಸನಾಗಿಸಬಲ್ಲ ವಿಭಿನ್ನ ಸಾಧ್ಯತೆಗಳ ಶೋಧವು ಅಗತ್ಯವೆನಿಸುತ್ತದೆ. ಧೀಮಂತ ಚಿಂತಕರು ಇಂತಹ ಸ್ಥಾಪಿತ ಮೌಲ್ಯಗಳನ್ನು ಪ್ರಶ್ನಿಸುವ ಮೂಲಕ, ಸಂಪೂರ್ಣ ನಿರಾಕರಿಸುವ ಮೂಲಕ ಆಘಾತ ನೀಡುತ್ತಾರೆ.

ಇಂತಹ ವೈಚಾರಿಕ ಪ್ರಹಾರದಿಂದ ಸಮಾಜದ ಪೂರ್ವನಿರ್ಧಾರಿತ ಮೌಲ್ಯಪ್ರಜ್ಞೆಯು ಶಿಥಿಲಗೊಂಡು ಹೊಸ ತಿಳುವಳಿಕೆಯತ್ತ ಮುಖ ಮಾಡುವ ಅನಿವಾರ್ಯತೆ ಎದುರಾಗುತ್ತದೆ. ಈ ಕ್ರಿಯೆಯಿಂದ ವಿನೂತನವಾದ ಮತ್ತೊಂದು ಬಗೆಯ ಮೌಲ್ಯಪ್ರಜ್ಞೆ ನೆಲೆಗೊಳ್ಳುತ್ತದೆ.

**ಉದಾ.೧ (ಮಾನ-ಅಪಮಾನ)**

ಮನುಷ್ಯನ ಸ್ಥೈರ್ಯವನ್ನು ಕುಂದಿಸಿಬಿಡುವ ವಿಚಾರಗಳಲ್ಲಿ ಅಪಮಾನವೂ ಒಂದು. ಪ್ರಶಂಸೆ, ತಾತ್ಸಾರ, ಆಕ್ಷೇಪ, ನಿಂದೆ, ಅಪಮಾನಗಳು ಅವನನ್ನು ಧೃತಿಗೆಡಿಸಿ ಕರ್ತವ್ಯಚ್ಯುತನನ್ನಾಗಿ ಮಾಡುತ್ತವೆಂದು ನಂಬಲಾಗಿದೆ. ಅಂದರೆ ಅಪಮಾನವು ಪ್ರಗತಿಗೆ ಮಾರಕವೆಂದು ಭಾವಿಸಲಾಗಿದೆ. ಆದರೆ ಪುರಂದರದಾಸರ ಕೀರ್ತನೆಯೊಂದು ಈ ಸ್ಥಾಪಿತ ಮೌಲ್ಯಪ್ರಜ್ಞೆಗೆ ವಿರುದ್ಧವಾದ ದಿಕ್ಕಿನಲ್ಲಿ ಆಲೋಚಿಸಿದೆ

ಅಪಮಾನವಾದರೆ ಒಳ್ಳಿತು|
ಅಪರೂಪ ಹರಿನಾಮ ಜಪಿಸುವ ಮನುಜಗೆ ||ಪ||

ಮಾನದಿಂದಲಿ ಅಭಿಮಾನ ಪುಟ್ಟುವುದು |
ಮಾನದಿಂದಲಿ ತಪ ಹಾನಿಯಾಗುವುದು ||
ಮಾನಿ ಕೌರವನಿಗೆ ಹಾನಿಯಾಯಿತು ಅನು-|
ಮಾನವಿಲ್ಲವು ಮಾನಅಪಮಾನ ಸಮರಿಗೆ ||೧||



ಇಲ್ಲಿ ದಾಸರ ಪ್ರಕಾರ ಕೇವಲ ಸನ್ಮಾನವು ದುರಭಿಮಾನಕ್ಕೆ ಕಾರಣವಾಗಿ ಮನುಷ್ಯನ ಆಲೋಚನಾಶಕ್ತಿ ಹಾಗೂ ಕಷ್ಟ-ಸಹಿಷ್ಣುತೆಗಳನ್ನು (ತಪವನ್ನು) ಹಾಳುಮಾಡುತ್ತದೆ. ದುರ್ಯೋಧನನ ನಾಶಕ್ಕೆ ಅಭಿಮಾನದ ಅತಿರೇಕವೇ ಕಾರಣವಾಗಿದೆ. ಆದ್ದರಿಂದ ಮಾನವನ್ನು ಒಳಿತೆಂದು ನಿರ್ಧರಿಸಬೇಕಾಗಿಲ್ಲ. ಅದಕ್ಕೆ ಬದಲಾಗಿ ಅಪಮಾನವಾದರೂ ಅದನ್ನು 'ಒಳಿತು' ಎಂದು ಸ್ವೀಕರಿಸುವ ಸಮತ್ವವನ್ನು ಅಭ್ಯಾಸಮಾಡಬೇಕೆನ್ನುತ್ತಾರೆ.

ಮಾನಾಪಮಾನಗಳ ಒಳಿತು ಕೆಡುಕುಗಳನ್ನು ಮತ್ತೊಂದು ದಿಕ್ಕಿನಿಂದಲೂ ಯೋಚಿಸಬಹುದಾದ ಸಾಧ್ಯತೆಯನ್ನು ವಿವರಿಸುತ್ತಾರೆ.

ಅಪಮಾನದಿಂದಲಿ ತಪವೃದ್ಧಿಯಾಹುದು|
ಅಪಮಾನದಿಂ ಪುಣ್ಯ ಸಫಲವಾಗುವುದು||
ಅಪಮಾನದಿಂದಲಿ ನೃಪ ಧ್ರುವರಾಯಗೆ|
ಕಪಟನಾಟಕ ಕೃಷ್ಣ ಅಪರೋಕ್ಷನಾದನು ||೨||

ಅಪಮಾನಿತನಾದ ವ್ಯಕ್ತಿ ತನ್ನ ಆಲೋಚನೆ ಹಾಗೂ ಸಹಿಷ್ಣುತೆಗಳನ್ನು ವೃದ್ಧಿಸಿಕೊಳ್ಳಲು ಸಾಧ್ಯವಿದೆ. ಧ್ರುವನಿಗೆ ಸುರುಚಿಯಿಂದಾದ ಅಪಮಾನವೇ ಭಗವದಪರೋಕ್ಷಕ್ಕೆ ಕಾರಣವಾದುದನ್ನು ಉದಾಹರಿಸಿ ಭಗವದ್ಭಕ್ತಿಯೊಂದಿದ್ದರೆ ಎಂತಹ ಅಪಮಾನವನ್ನಾದರೂ ಎದುರಿಸಬಲ್ಲ ಮನಸ್ಥೈರ್ಯ ಉಂಟಾಗುತ್ತದೆ ಎಂದು ತಿಳಿಸಿದ್ದಾರೆ. ಸಮಾಜದ ಮಧ್ಯೆಯೇ ಬದುಕಬೇಕಾಗಿರುವ ನಾವು ಇತರರಿಂದ ಅಪಮಾನವಾದಾಗಲೂ ಅದಕ್ಕೆ ಯಾವುದೇ ಪ್ರತೀಕಾರದ ಪ್ರಯತ್ನವನ್ನು ಮಾಡಬೇಕಾಗಿಲ್ಲವೆಂಬುದು ಇಲ್ಲಿಯ ಧ್ವನಿಯಾಗಿದೆ.

ಅದುವರೆಗೆ ಮಾನವನ್ನು ಅಭಿವೃದ್ಧಿಗೆ ಪೂರಕವೆಂದು, ಗುಣಾತ್ಮಕವಾಗಿಯೂ; ಅಪಮಾನವನ್ನು ಪ್ರಗತಿಯ ಶತ್ರುವೆಂದು ನಿಷೇಧಾತ್ಮಕವಾಗಿಯೂ ಪರಿಗಣಿಸುತ್ತಿದ್ದ ತಿಳುವಳಿಕೆಯನ್ನು ನಿರಚಿಸಲು ಈ ಕೀರ್ತನೆಯು ಭಾಗವತವನ್ನು ಬಳಸಿಕೊಂಡಿದೆ.

ಹಾಗೆ ಬಳಸುವಾಗ, ಮೂಲದಲ್ಲಿ ಹೇಳಿರದ ಹೊಸ ರೀತಿಯಲ್ಲಿ ಧ್ರುವ ಚರಿತ್ರೆಯನ್ನು ವ್ಯಾಖ್ಯಾನಿಸುವ ಮೂಲಕ ದಾಸರು ಅಪಮಾನಿತರ ಪರವಾಗಿ ನಿಂತು, ಅಪಮಾನವನ್ನು ಒಂದು ಗುಣಾತ್ಮಕ ಮೌಲ್ಯವನ್ನಾಗಿ ಉನ್ನತ ಸಾಧನೆಗೆ ಪ್ರಚೋದಕವನ್ನಾಗಿ ನೋಡಬೇಕಾದ ಹೊಸ ಮೌಲ್ಯ ಪ್ರಜ್ಞೆಯನ್ನು ಸ್ಥಾಪಿಸಿದ್ದಾರೆ.

**ಉದಾ.೨ (ಪ್ರಾಣಿ ಬಲಿ)**

ದೇವರನ್ನು ಪ್ರಾಣಿಬಲಿಯಿಂದ ಪ್ರೀತಿಪಡಿಸಬಹುದೆಂಬ ನಂಬಿಕೆ ತುಂಬ ಹಳೆಯದು. ಮಾನವ ಸಮುದಾಯದಲ್ಲಿ ರೂಢಮೂಲವಾದ ಈ ಸ್ಥಾಪಿತ ಮೌಲ್ಯವನ್ನು ಖಡಾಖಂಡಿತವಾಗಿ ನಿರಾಕರಿಸುವ ಮೂಲಕ ಕನಕದಾಸರು ಪ್ರಾಣಿಬಲಿಯ ನಂಬಿಕೆಯನ್ನು ಒಡೆಯುತ್ತಾರೆ.

ಕ್ಷೀಣಶಾಸ್ತ್ರಾರ್ಥವನು ಪರಿಗ್ರಹಿಸಿ ನಿಖಿಲ ಕುರಿ
ಕೋಣಗಳ ತಲೆಚಂಡ ಕುಟ್ಟಿಸುತ್ತ

ಪ್ರಾಣಹತ್ಯವ ಮಾಳ್ಪುದಾವಸತ್ಕರ್ಮ-ನಾರಾ
ಯಣನ ನಾಮಸ್ಮರಣೆ ಮಾಡು ಮನವೆ
(ಗೋವಿಂದ ಗೋವಿಂದ ಎನ್ನಲರಿಯದೆ....)

ಕುರಿ ಕೋಣಗಳ ತಲೆ ಕಡಿತ ಪ್ರಾಣಿಹತ್ಯವೇ ಹೊರತು ಸತ್ಕರ್ಮವಾಗಲಾರದು ಎಂದು ಹೇಳುವ ಮೂಲಕ ಪ್ರಾಣಿಬಲಿಯ ಒಪ್ಪಿತ ಪದ್ಧತಿಯನ್ನು ಒಡೆಯುವ ಕನಕದಾಸರು ಆ ಕ್ರಮಕ್ಕೆ ಪ್ರಮಾಣವೆಂದು ತಿಳಿದ ಶಾಸ್ತ್ರದ ಅರ್ಥವನ್ನೂ ನೇರ ನುಡಿಗಳಿಂದ ನಿರಾಕರಿಸುತ್ತಾರೆ. ಪ್ರಾಣಿ ಬಲಿಯನ್ನು ಹೇಳುವುದು ಶಾಸ್ತ್ರವಾಕ್ಯವೇ ಆದರೂ ಅದು ಕ್ಷೀಣವಾದುದು ಅಥವಾ ಆ ವಾಕ್ಯಕ್ಕೆ ಜನರು ಗ್ರಹಿಸುತ್ತಿರುವ ಅರ್ಥವು ಕ್ಷೀಣವಾದುದು ಎಂಬ ತರ್ಕವನ್ನು ಮುಂದೊಡ್ಡಿ ಸ್ಥಾಪಿತ ಆಚರಣಾತ್ಮಕ ಮೌಲ್ಯವನ್ನು ನಿರಚನಗೊಳಿಸುತ್ತಾರೆ. ಮಾತ್ರವಲ್ಲದೆ 'ಭಗವಂತನ ಪ್ರೀತಿ ಸಂಪಾದಿಸಲು ನಾರಾಯಣನ ನಾಮಸ್ಮರಣೆಯೇ ಸಾಕು' ಎಂಬ ಬೇರೊಂದು ಸಾತ್ವಿಕ ಮೌಲ್ಯವನ್ನು ಸ್ಥಾಪಿಸುವ ಮೂಲಕ ಆರೋಗ್ಯಕರ ಸಲಹೆಯನ್ನು ನೀಡಿದ್ದಾರೆ.

ಭಾಗವತದ ಜಡಭರತೋಪಾಖ್ಯಾನದ ನರಬಲಿ ಪ್ರಸಂಗದಲ್ಲಿ ಭದ್ರಕಾಳಿಯು ಬಲಿಕೊಡಬಂದ ಜನರನ್ನೇ ಚಂಡಾಡಿದ ಕತೆಯಲ್ಲಿ ಅಹಿಂಸೆಯನ್ನು ಸಾರಲಾಗಿದೆ. ಇಂತಹ ಭಕ್ತಿಶಾಸ್ತ್ರದ ಬೆಂಬಲದಿಂದ ಉಳಿದ ಕ್ಷೀಣ ಶಾಸ್ತ್ರಾರ್ಥಗಳನ್ನು ನಿರಾಕರಿಸಬೇಕೆಂದು ಕರೆಕೊಡುವ ಮೂಲಕ ದಾಸರು ತಮ್ಮ ಸುತ್ತಲೂ ನಡೆಯುತ್ತಿದ್ದ ಪೂಜೆಯ ಹೆಸರಿನ ಹಿಂಸಾಕಾಂಡವನ್ನು ಅಲ್ಲಗಳೆಯುತ್ತಾರೆ.[೪]

ಹೀಗೆ ಭಾಗವತ ಮಹಾಗಾಥೆಯ ಮಾಹಿತಿರಾಶಿಯಲ್ಲಿ ಸಾಧಾರಣ ವಿಷಯವೆಂದು ಉಪೇಕ್ಷಿಸಬಹುದಾಗಿದ್ದ ಮೌಲ್ಯವೊಂದರ ಮಹತ್ವವನ್ನು ಗ್ರಹಿಸಿ ತಮ್ಮ ಪದದಲ್ಲಿ ಅದಕ್ಕೆ ಅದ್ಭುತವಾದ ವೃದ್ಧಿ ನೀಡಿದ್ದಾರೆ. ಅದನ್ನು ಸೂಕ್ತವಾಗಿ ಬಳಸುವ ಮೂಲಕವೂ ವೃದ್ಧಿಸಿದ್ದಾರೆ.

### ೭.೧.೫. ನಿಷ್ಠುರ ಸತ್ಯ ನಿರೂಪಣೆ

ದಾಸಸಾಹಿತ್ಯದಲ್ಲಿ ಅಂದಿನಿಂದ ಇಂದಿನವರೆಗೆ ಹೇಳುತ್ತಲೇ ಬಂದ ಕೆಲವು ಮಾತುಗಳಿವೆ. 'ಚಿಂತೆಬೇಕಿಲ್ಲ', 'ಹೆಣ್ಣು ಹೊನ್ನು ಮಣ್ಣಿಗಾಗಿ ಹಂಬಲಿಸಬೇಡ' ಮುಂತಾದ ವಿಚಾರಗಳನ್ನು ಹತ್ತಾರು ಬಗೆಯಲ್ಲಿ ಪುನರಾವರ್ತಿಸಿದ್ದಾರೆ. ಭಾಗವತದಲ್ಲೂ ಮತ್ತೆ ಮತ್ತೆ ಬಳಕೆಯಾದ ಈ ಆಶಯಗಳು ಅನುರಕ್ತರಿಗೆ ಕಹಿಯಾಗಿ ಕಾಣಬಹುದು, ವಿರಕ್ತರಿಗೆ ಪ್ರಿಯವೆನಿಸಬಹುದು. ಆದರೆ ಈ ವಿಚಾರಸರಣಿಯ ಹಿಂದಿನ ನಿಷ್ಠುರಸತ್ಯವನ್ನು ಮಾತ್ರ ಯಾರೂ ಅಲ್ಲಗಳೆಯಲು ಸಾಧ್ಯವಿಲ್ಲ.

ಭಗವಂತನ ನಾಮಸ್ಮರಣೆ ಈ ಎಲ್ಲ ಸಮಸ್ಯೆಗಳಿಗೆ ಏಕೈಕ ಪರಿಹಾರವೆಂಬ ಅವರ ಭಾಗವತ ಮನೋಧರ್ಮವನ್ನು ಒಪ್ಪದೆ, ಭಿನ್ನವಾದ ತಾತ್ವಿಕ ವೈಚಾರಿಕ ದೃಷ್ಟಿಕೋನ ಹೊಂದಿದವರೂ ಸಹ ದಾಸರ ಕೆಲವು ನಿಷ್ಠುರ ಸತ್ಯ ನಿರೂಪಣೆಯ ಹಿಂದಿನ ಮೌಲ್ಯಪ್ರಿಯತೆಯು ಪ್ರಾಮಾಣಿಕತೆಯನ್ನು ಸಂದೇಹಿಸುವಂತಿಲ್ಲ.

ಉದಾ.೧ (ವ್ಯರ್ಥ ಚಿಂತೆಯ ನಿರಾಕರಣೆ)

ಸಾಮಾನ್ಯವಾಗಿ 'ಚಿಂತೆ' ಯಾರಿಗೂ ಬಿಟ್ಟಿದ್ದಲ್ಲ. ಇದು ಹೆಚ್ಚಿದಂತೆ ಮನುಷ್ಯನ ದೇಹ-ಮಾತು-ಮನಸ್ಸುಗಳ ಆರೋಗ್ಯವನ್ನು ಹದಗೆಡಿಸುತ್ತದೆ. ಕ್ರಿಯಾ ಸಾಮರ್ಥ್ಯವನ್ನು ತಗ್ಗಿಸುತ್ತದೆ. ಚಿಂತೆಗೆ ಬಿದ್ದವನು ಅಧೀರನಾಗುವ, ಕರ್ತವ್ಯಚ್ಯುತನಾಗುವ ಅಪಾಯವಿದೆ. ಬದುಕಿನ ನೆಮ್ಮದಿಯನ್ನು ಹಾಳುಮಾಡುವ ಈ ಪಿಡುಗಿನ ಹಿಡಿತದಿಂದ ಪಾರಾಗುವ ಉಪಾಯವನ್ನು ಶೋಧಿಸಬೇಕೆಂಬ ಹಂಬಲವು ಎಲ್ಲ ಕಾಲದ ಜೀವನ ಪ್ರೇಮಿಗಳನ್ನು ಕಾಡುತ್ತ ಬಂದಿದೆ. ದಾಸರು ಈ ದಿಕ್ಕಿನಲ್ಲಿ ಆಲೋಚಿಸುವಾಗ ಚಿಂತೆಯ ವ್ಯಾಪಕತೆಯನ್ನು ಹೇಳಿ ಅದನ್ನು ಮೀರಲು ಕರೆಕೊಟ್ಟಿದ್ದಾರೆ.

ಅನುಗಾಲವು ಚಿಂತೆ ಜೀವಕೆ ತನ್ನ
ಮನವು ಶ್ರೀರಂಗನೊಳು ಮೆಚ್ಚುವ ತನಕ ||

ಸತಿಯು ಇದ್ದರೂ ಚಿಂತೆ ಸತಿಯು ಇಲ್ಲದ ಚಿಂತೆ
ಮತಿಹೀನ ಸತಿಯಾದರೂ ಚಿಂತೆಯು |
ಪೃಥಿವಿಯೊಳಗೆ ಸತಿ ಅತಿ ಚೆಲ್ವೆಯಾದರೆ
ಮಿತಿ ಮೇರೆಯಿಲ್ಲದ ಮೋಹದ ಚಿಂತೆ ||

ಪುತ್ರರಿದ್ದರೂ ಚಿಂತೆ ಪುತ್ರರಿಲ್ಲದ ಚಿಂತೆ
ಅತ್ತು ಅನ್ನಕೆ ಕಾಡುವ ಚಿಂತೆಯು |
ತುತ್ತಿನ ಆಸೆಗೆ ತುರುಗಳ ಕಾಯ್ದರು
ಸುತ್ತೇಳು ಕಡೆಯಿಲ್ಲದ ಚಿಂತೆಯು ||

ಬಡವನಾದರು ಚಿಂತೆ ಬಲ್ಲಿದನಾದರು ಚಿಂತೆ
ಹಿಡಿ ಹೊನ್ನು ಕೈಯೊಳಿದ್ದರು ಚಿಂತೆಯು |
ಪೊಡವಿಯೊಳಗೆ ಸಿರಿ ಪುರಂದರ ವಿಠಲನ
ಬಿಡದೆ ಚಿಂತಿಸಿದರೆ ಚಿಂತ ನಿಶ್ಚಿಂತೆ ||

* * *

ಕೆಲವು ಅಪರಿಹಾರ್ಯ ಸಮಸ್ಯೆಗಳಿಗಾಗಿ ಚಿಂತಿಸಿ ಫಲವಿಲ್ಲ. ವಿಶ್ವದ ಸರ್ವಕಾರ್ಯಗಳ ಹೊಣೆ ಹೊತ್ತ ಭಗವಂತನು ಎಲ್ಲರನ್ನೂ ರಕ್ಷಿಸುತ್ತಿದ್ದಾನೆ. ಎಲ್ಲರೂ ಅವನ ಕರುಣೆಯ ಪರಿಧಿಗೆ ಒಳಗಾಗಿ ಬದುಕುತ್ತಿರುವಾಗ ವ್ಯರ್ಥಚಿಂತೆ ಬೇಡವೆಂಬುದು ದಾಸರ ಅಭಿಪ್ರಾಯ. ಇದರ ಸಮರ್ಥನೆಗಾಗಿ ಕೆಲವು ನೈಸರ್ಗಿಕ ವಿಶ್ವಾತ್ಮಕ ಪ್ರಕ್ರಿಯೆಗಳನ್ನು ನಿದರ್ಶನವಾಗಿ ಉಲ್ಲೇಖಿಸಿದ್ದಾರೆ.

ಸಡಗರದಲಿ ನಾರಿಜನರು |
ಹಡೆಯುವಾಗ ಸೂಲಗಿತ್ತಿ ||
ಅಡವಿಯೊಳಗೆ ಹೆರುವ ಮೃಗವ |
ಪಿಡಿದು ರಕ್ಷಣೆ ಮಾಳ್ಪರಾರು ||

ಹೆತ್ತ ತಾಯಿ ಸತ್ತ ಶಿಶುವು।
ಮತ್ತೆ ಕೆಟ್ಟಿತೆಂಬರು ಜನರು॥
ಹುತ್ತಿನ ಹಾವಿಗೆ ಗುಬ್ಬಿಗೆ ಮೊಲೆಯ।
ನಿತ್ತು ರಕ್ಷಣೆ ಮಾಡುವರಾರು॥

ಮತ್ತೊಂದು ಕೀರ್ತನೆಯಲ್ಲಿ ಅವರು ಚಿಂತೆಯ ನಿಷ್ಫಲತೆಯನ್ನು ಬಹುಮಾರ್ಮಿಕವಾಗಿ ನಿರೂಪಿಸಿದ್ದಾರೆ.

ಹುಟ್ಟಿದಾಗುತ್ಪತ್ತಿಗಾರು ಚಿಂತಿಸಿದರು।
ಕಟ್ಟಕಡೆಯಲಿ ಲಯಕೆ ಏನು ಚಿಂತೆ॥
ನಟ್ಟನಡುವಿನ ಬದುಕಿಗೇಕೆ ಚಿಂತಿಸುತಿರುವೆ।
ಕಟ್ಟಕಡೆಯಲಿ ಮೂರು ಬಟ್ಟೆ ತಾನಲ್ಲವೆ।

ಬಸಿರೊಳಗೆ ಇದ್ದಾಗ ಶಿಶುವ ಹೊರೆದವರಾರು।
ವಸುಧೆಯನು ಬಸಿರೊಳಗೆ ಹೆತ್ತರಾರು।
ವಸುದೇವಸುತ ನಮ್ಮ ಪುರಂದರ ವಿಠಲನ।
ಪೆಸರ ಬಸಿರೊಳಗಿಟ್ಟು ಸ್ತುತಿಸುತಿರು ಮನವೆ॥

ಚಿಂತೆ ಮನುಷ್ಯನನ್ನು ಜೀವಂತವಾಗಿ ಸುಡುತ್ತದೆ. ಆದರೆ ಚಿಂತನೆಯು ಅವನ ಚಿಂತೆಯನ್ನು ದೂರಮಾಡುತ್ತದೆ. ಮತ್ತು ದೂರಮಾಡಬೇಕು. ಆದ್ದರಿಂದಲೇ ದಾಸರು "ವಿಶಾಲ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಂತಹ ಸುದೀರ್ಘ ಕಾಲದ ಬೃಹತ್ಕಾರ್ಯಗಳನ್ನು ಲೀಲಾ ಜಾಲವಾಗಿ ನಡೆಸುವ ಅಗಮ್ಯ ಮಹಿಮನಾದ ಶ್ರೀಹರಿಯು ಜಗದ್ರಕ್ಷಕನಾಗಿರುವಾಗ ನಾವು ಮೂರು ದಿವಸಗಳ ಒಂದು ಗೇಣೋಡಲ ಬಾಳಿಗಾಗಿ ಇಷ್ಟೊಂದು ಚಿಂತಿಸಬೇಕೆ?" ಎಂಬ ನೆಲೆಯಲ್ಲಿ ಆಲೋಚಿಸಲು ಸಲಹೆ ನೀಡಿದ್ದಾರೆ.

ಕೊಡುವ ಕರ್ತ ಬೇರೆ ಇರುತಿರೆ।
ಬಿಡುಬಿಡು ಚಿಂತೆಯನು।

ಒಡೆಯನಾಗಿ ಮೂಜಗವನು ಪಾಲಿಪ।
ಬಡವರಾಧಾರಿಯು ಭಕ್ತರ ಪ್ರಿಯನು॥

ಎಂಬ ಕೀರ್ತನೆಯಲ್ಲಿ ದಾಸರ ಕಾಳಜಿ ಯಾರ ಪರವಾಗಿದೆ ಎಂಬುದು ಸುಸ್ಪಷ್ಟವಾಗಿದೆ. ಅವರು ಶ್ರೀಪತಿಯಾದ ಭಗವಂತನನ್ನು ಕೇವಲ ಶ್ರೀಮಂತರ ದೈವವೆಂದು ಎಲ್ಲೂ ವ್ಯಾಖ್ಯಾನಿಸಿಲ್ಲ. ಎಲ್ಲರಿಗೂ ಕೊಡುವ ಕರ್ತ ದೇವರೆಂದಾದ ಮೇಲೆ 'ಉಳ್ಳವ'-'ಇಲ್ಲದವ'ರೆಲ್ಲರೂ ಅವನ ಋಣಿಗಳು. 'ಬಡವರ ಆಧಾರಿ' ಎಂದು ಹೇಳುವ ದಾಸರ ಮಾತುಗಳು ಇಲ್ಲದವರ ಕೀಳರಿಮೆಯನ್ನು ನಿವಾರಿಸುವ, ಅವರಲ್ಲಿ ಬದುಕಿನ ಭರವಸೆ ತುಂಬುವ ಯತ್ನವಾಗಿ ಕಂಡುಬರುತ್ತವೆ. 'ಚಿಂತಿಸಬೇಡಿ- ದೇವರಿದ್ದಾನೆ-ಎಲ್ಲರನ್ನೂ ರಕ್ಷಿಸುತ್ತಾನೆ' ಎಂಬುದು ಹರಿದಾಸಮನೋಧರ್ಮವು ಕಂಡುಕೊಂಡ ನಿಚ್ಚಳ - ನಿಷ್ಠುರ ಸತ್ಯ.

ಬದುಕಿನ ನಿರಂತರತೆಯಲ್ಲಿ ಶ್ರದ್ಧೆಗುಂದಿದರೆ ಚಿಂತೆ ಮತ್ತಷ್ಟು ಹೆಚ್ಚುವುದೆಂಬ ಅಪಾಯವನ್ನು ಗ್ರಹಿಸಿದರೆ ಹರಿದಾಸರ ಮೌಲ್ಯಪ್ರಸಾರಾದ ಈ ಮಾದರಿಯ ಗುಣಾತ್ಮಕ ಮುಖದ ಉಪಯುಕ್ತತೆಯನ್ನು ಅರಿಯಬಹುದು.

**ಉದಾ : ೨ (ವ್ಯರ್ಥ ಕಾಲಹರಣದ ಖಂಡನೆ)**

ಭಾಗವತವು ಕಾಲದ ಸದುಪಯೋಗಕ್ಕೆ ಬಹಳ ಮಹತ್ವ ನೀಡಿದೆ. ಇತರ ಮೂರು ಯುಗಗಳಿಗಿಂತ ಕಲಿಯುಗದಲ್ಲಿ ಆಯುಷ್ಯ ಕಡಿಮೆ, ಬುದ್ಧಿಶಕ್ತಿ ಮಂದವಾಗಿರುತ್ತದೆ. ಜನರು ಅತಿಕಷ್ಟ ಪಡುತ್ತಿರುತ್ತಾರೆ.

ಪ್ರಾಯೇಣಾಲ್ಪಾಯುಷೋ ಮರ್ತ್ಯಾ ಕಲಾವಸ್ಮಿನ್ ಯುಗೇ ಜನಾಃ |
ಮಂದಾಃ ಸುಮಂದಮತಯಃ ಮಂದ ಭಾಗ್ಯಾಹ್ಯುಪದ್ರುತಾಃ ||

(ಭಾಗವತ : ೧-೧-೧೦)

ಅಜಿತೇಂದ್ರಿಯರಾದ ಮನುಷ್ಯರು ಕಾಲವನ್ನು ವ್ಯರ್ಥವಾಗಿ ಕಳೆಯುತ್ತಾರೆ. ನಿದ್ರೆಯಿಂದ ಹಗಲನ್ನೂ, ಭೋಗಲಾಲಸೆಯಿಂದ ಯೌವ್ವನವನ್ನೂ, ಅರ್ಥಸಂಪಾದನೆ ಹಾಗೂ ಕುಟುಂಬ ರಕ್ಷಣೆಯ ಜಂಜಡಗಳಿಂದ ಹಗಲನ್ನೂ ಕಳೆದುಬಿಡುತ್ತಾರೆ.

ನಿದ್ರಯಾಹ್ರಿಯತೇ ನಕ್ತಂ ವ್ಯವಾಯೇನ ನವಂ ವಯಃ |
ದಿವಾ ಚಾರ್ಥೇಹಯಾ ರಾಜನ್ ಕುಟುಂಬ ಭರಣೇನ ವಾ ||

(ಭಾಗವತ : ೨-೧-೩)

ಹರಿದಾಸರ ಸುತ್ತಲಿನ ಬದುಕೂ ಇದಕ್ಕೆ ಹೊರತಾಗಿರಲಿಲ್ಲ. ಆದ್ದರಿಂದ ವ್ಯರ್ಥ ಕಾಲಹರಣವಾಗದಂತೆ ಜನರನ್ನು ಎಚ್ಚರಿಸುವುದು ಅಗತ್ಯವೆನಿಸಿರಬಹುದು. ಆದರೆ ಈ ನಿಷ್ಠುರ ಸತ್ಯವನ್ನು ನೇರವಾಗಿ ಹೇಳುವುದಕ್ಕಿಂತ ಪರೋಕ್ಷವಾಗಿ ಹೇಳುವುದು ಹೆಚ್ಚು ಪ್ರಯೋಜನವೆಂದು ತಿಳಿದು. ಕಾಲದ ಸದ್ವಿನಿಯೋಗವಾಗುವಂತೆ ಪ್ರಚೋದಿಸಲು ದೇವರಲ್ಲಿ ಮೊರೆ ಇಡುವ ಧಾಟಿಯ ಕೀರ್ತನೆಗಳನ್ನು ರಚಿಸಿದ್ದಾರೆ.

ಉದಯವಾದರೆ ಊಟದ ಚಿಂತೆ ಉಂಡ ಮೇಲೆ ಭೋಗದ ಚಿಂತೆ
ಅದರ ಮೇಲೆ ಹದಿನಾಲ್ಕು ಲೋಕಗಳನು ಆಳ್ವಚಿಂತೆ ||೧||

* * *

ತಿಳಿದು ತಿಳಿದು ಪತಂಗದ ಹುಳುವು ಕಿಚ್ಚಿನಲ್ಲಿ ಬಿದ್ದ ಹಾಗೆ
ಕಾಲ ಕಳೆದೆ ಮೂರ್ಖನಂತೆ ಮುದ್ದು ಹಯವದನನೆ ||೨||
(ಎನ್ನಮನದ ಡೊಂಕ ತಿದ್ದಯ್ಯ)

ಎಂದು ವಾದಿರಾಜರು ಪ್ರಾರ್ಥಿಸಿದ್ದಾರೆ. ಪುರಂದರದಾಸರು ಸಹ

ಹಗಲು ನಿನ್ನ ನೆನೆಯಲಿಲ್ಲವು ಹಸಿವೆ ತೃಷೆಯಿಂದ
ಇರುಳು ನಿನ್ನ ನೆಲೆಯಲಿಲ್ಲವು ನಿದ್ರೆಭರದಿಂದ
ಇವೆರಡರ ಬಾಧೆಗೆ ನಾ ಒಳಗಾದೆ ಪುರಂದರ ವಿಠಲ ||

ಎಂಬ ಸಾಲುಗಳಲ್ಲಿ ಭಕ್ತನೊಬ್ಬನ ಕಾಲವು ವೃಥಾ ಹರಣವಾದರೆ ಹೇಗೆ ದುಃಖಿಸುವನೆಂಬುದನ್ನು ಚಿತ್ರಿಸಿದ್ದಾರೆ.

ಇಂತಹ ಮಾತುಗಳಿಂದ ಜನರು ತಿದ್ದಿಕೊಳ್ಳದೇ ಇರುವಾಗ ದಾಸರು ನೇರನುಡಿಗಳಿಯುತ್ತಾರೆ. ಹೊಟ್ಟೆಯ ಪಾಡಿಗೆ ಹಲವು ಮೋಸದ ಹಾದಿಯನ್ನು ಹಿಡಿದ ವಂಚಕನನ್ನು ಕಂಡ ಕನಕದಾಸರು

ಅವರಿವರ ಕೈಯ ನೋಡಿ
ಹಲವು ಕೆಲವು ಮಾತನಾಡಿ |
ಹಲವು ಹಂಬಲಲಿಸಿ ದಿನವ
ಕಳೆದು ಉಳಿದು ಬಾಳುವವಗೆ ||
(ದಾಸ ಪಟ್ಟವೋ ಸನ್ಯಾಸಪಟ್ಟವೋ)

ಎಂದು ಕೇಳುವ ಮೂಲಕ ಇಂತಹ ಮನುಷ್ಯನು ಎರಡಕ್ಕೂ ಅರ್ಹನಲ್ಲವೆಂದು ತೀರ್ಮಾನಿಸಿದ್ದಾರೆ.

ಬದುಕಿನ ಅರ್ಧಭಾಗವು ರಾತ್ರಿಯಲ್ಲೂ, ಆರಂಭದ ಕಾಲವು ಬಾಲ್ಯದಲ್ಲೂ, ಅಂತ್ಯಕಾಲವು ವೃದ್ಧಾಪ್ಯದಲ್ಲೂ ಮಧ್ಯದ ಕಾಲವು ಭೋಗ, ರೋಗ, ಚಿಂತೆಗಳಲ್ಲೂ ಸರಿದು ಹೋಗುವುದನ್ನು ಲೆಕ್ಕಿಸಿದಾಗ ಒಂದೊಂದು ಕ್ಷಣದ ಆಯುಷ್ಯವೂ ಸಾಧಕನಿಗೆ ಮಹತ್ವದ್ದೆನಿಸುತ್ತದೆ. ಕಾಲಸೂಚಕವಾದ ಗಂಟೆಯು, 'ಕಾಲಪ್ರಜ್ಞೆಯ' ಸೂಚಕವೂ ಆಗಬೇಕೆಂಬುದು ಪುರಂದರದಾಸರ ಆಶಯವಾಗಿದೆ.

ತಾಸು ಬಾರಿಸುತಿದೆ ಕೇಳಿ-ಹರಿದಾಸರೆಲ್ಲ |
ತಾಸು ಬಾರಿಸುತಿದೆ ಕೇಳಿ ||ಪ||

ಹಾಸುಮಂಚ ಸುಪ್ಪತ್ತಿಗೆಯಲಿ ಹಗಲು ಇರಳು |
ಹೇಸರಗತ್ತೆಯಂತೆ ಹೊರಳಿ - ಸ್ತ್ರೀಯರ ಗೂಡ |
ಬೇಸರದೆ ನಿತ್ಯವೂ ಉರುಳಿ ||
ಈ ಪರಿ ಕಾಲವ ಕಳೆದೆಯೊ ಕಾಲ ಸ|
ಮೀಪವಾಯಿತು ಎಂದೀಗಲೆ ||೧||

ವೃದ್ಧ ಯೌವನ ಬಾಲ್ಯಕಾಲ ವಿವೇಕವಿಲ್ಲದ |
ಬುದ್ಧಿಮಾಂದ್ಯವು ಹಲವು ಕಾಲ - ಆಹಾರಸಂಗ |
ನಿದ್ರೆಯಿಂದಲಿ ಅತಿಲೋಲ ||
ಈ ಜನ ಭಜಕರ ಭಜಿಸದೆ ಮಾನುಷಾ |
ಯುಷ್ಯವೆಲ್ಲವು ವ್ಯರ್ಥವಾಯಿತಾಯಿತೆಂದು ||೨||

ಇಲ್ಲಿ ವಸ್ತುವಿನ ದೃಷ್ಟಿಯಿಂದ ಭಾಗವತ ಸಪ್ತಮ ಸ್ಕಂಧದ ಪ್ರಹ್ಲಾದೋಪದೇಶದ ಭಾಗಕ್ಕೆ ಋಣಿಗಳಾಗಿರುವ ದಾಸರು, ಕಾಲಹರಣವನ್ನು ಖಂಡಿಸುವಾಗ ಸಾಕಷ್ಟು ವೃದ್ಧಿಯನ್ನು ಸಾಧಿಸಿರುವುದನ್ನು ಈ ಕೆಳಗಿನ ಪದ್ಯಗಳಲ್ಲಿ ಕಾಣಬಹುದು.

ಲೆತ್ತ ಪಗಡೆ ಚದುರಂಗಗಳಾಡುತ ಹೊತ್ತು ಕಳೆವುದೇತಕೆ ನೀನು ।
ಕತ್ತೆಯಂದದಿ ಕಾಲವ ಕಳೆದು ಉನ್ಮತ್ತನಾಗಿ ಬಾಳುವೆ ನೀನು ॥
ಇರುಳು ಹಗಲು ನರಹರಿಯನು ಸ್ತುತಿಸದೆ ನರಪಶುಗಳ ಕೊಂಡಾಡುತೀ ।
ಯಾತಕೆ ನೋಡುತಿ? ಯಮನ ಪಾಶಕೆ ಬೀಳುತಿ ॥

ಇಂತಹ ಕಡೆಗಳಲ್ಲಿ ಅವರ ಮಾತುಗಳು ಹರಿತವಾಗುತ್ತವೆ. ಕಾಲದ ಬೆಲೆ ಅರಿಯದವನನ್ನು ಕತ್ತೆಗೆ, ಹುಚ್ಚನಿಗೆ ಹೋಲಿಸಲು ಅವರು ಹಿಂಜರಿಯುವುದಿಲ್ಲ. ಲೆತ್ತ, ಪಗಡೆ, ಚದುರಂಗ ಹಾಗೂ ನರಸ್ತುತಿಗಳನ್ನು ಖಂಡಿಸುವ ಮೂಲಕ ದಾಸರು ತಮ್ಮ ಮೌಲ್ಯ ಪ್ರಜ್ಞೆಯನ್ನು ಮೆರೆದಿದ್ದಾರೆ. ಇಂತಹ ಮಾತುಗಳು ಇಂದಿಗೂ ಸತ್ಯವೆನಿಸುತ್ತದೆ.

**ಉದಾ : ೩ (ಮೃತ್ಯುಮುಖದಲ್ಲಿ ಮಾನವ ಸಂಬಂಧಗಳು)**

ಸಾವಿನ ಸನ್ನಿವೇಶದಲ್ಲಿ ಎಲ್ಲ ಸಂಬಂಧಗಳು ಸ್ಥಗಿತಗೊಳ್ಳುತ್ತವೆ. ದೇಹ ಸಂಬಂಧಿಗಳು ಬಂಧು-ಮಿತ್ರರು ದೂರವಾಗುತ್ತಾರೆ. ವ್ಯಕ್ತಿಯು ಗಳಿಸಿದ ಧನ, ಕನಕ, ವಸ್ತು ವಾಹನಗಳೆಲ್ಲ ಅಲ್ಲಲ್ಲಿಯೇ ಉಳಿಯುತ್ತವೆ. ತನ್ನದೇ ಆದ ದೇಹವನ್ನೂ ಬಿಟ್ಟು ಜೀವಿಯು ಹೊರಡಬೇಕಾಗುತ್ತದೆ. ಇದು ಅನಿವಾರ್ಯ. ಇದೊಂದು ನಿಷ್ಠುರ ಸತ್ಯ. ಈ ಸ್ಥಿತಿಯನ್ನು ಭಾಗವತವು

ಧನಾನಿಭೂಮೌ ಪಶವಶ್ಚ ಗೋಷ್ಠೇ ।
ಭಾರ್ಯಾ ಗೃಹದ್ವಾರಿ ಜನಾಃ ಶ್ಮಶಾನೇ ॥
ದೇಹಶ್ಚಿತಾಯಾಂ ಪರಲೋಕ ಮಾರ್ಗೇ ।
ಜೀವಾನುಗೋ ಗಚ್ಛತಿ ಧರ್ಮ ಏಕಃ ॥

ಮುಂತಾದ ಅನೇಕ ಶ್ಲೋಕಗಳಲ್ಲಿ ವಿವರಿಸಿದೆ. ಅಲ್ಲಿಯ ಭಾವವನ್ನು ಒಟ್ಟಾಗಿ ಚಿಂತಿಸಿ ದಾಸರು ಅನೇಕ ಕೀರ್ತನೆಗಳಲ್ಲಿ ಕನ್ನಡೀಕರಿಸಿದ್ದಾರೆ.

ಆರು ಸಂಗಡ ಬಾಹೋರಿಲ್ಲ. ॥ಪ॥
ನಾರಾಯಣ ನಾಮ ನೆರೆ ಬಾಹೋದಲ್ಲದೆ ॥ಅ.ಪ॥

ಹೊತ್ತು ನವಮಾಸ ಪರಿಯಂತ ಗರ್ಭದಲಿ
ಹೆತ್ತು ಅತ್ಯಂತ ನೋವು ಬೇನೆಗಳಿಂದಲಿ
ತುತ್ತು ವಸ್ತ್ರವನಿಕ್ಕಿ ಸಲಹಿದಾ ತಾಯ್ತಂದೆ
ಹೊತ್ತು ಗಳೆವರಲ್ಲದೆ ಬೆನ್ ಹತ್ತಿ ಬಹರೆ ॥೧॥

ಗುರು ಬಂಧು ಬುಧಜನರು ನಿಂತಗ್ನಿ ಸಾಕ್ಷ್ಯಾಗಿ
ಕರವಿಡಿದು ಧಾರೆಯನೆರೆಸಿಕೊಂಡ
ತರುಣಿ ಇನಿಯನ ಹರಣ ಹೋಗಲು ತಾ ಕಂಡು
ಬರುವುದಕಂಜಿ ದಾರು ಗತಿಯೆಂದಳುವಳು ||೨||

ಮನೆ ಮಕ್ಕಳು ತಮ್ಮ ಧನಕೆ ಬಡಿದಾಡುವರು
ಧನಕಾಗಿ ನಿನ್ನನೆ ನಂಬಿದವರು
ಅನುಮಾನವೇಕೆ ಜೀವನು ತೊಲಗಿದಾಕ್ಷಣದಿ
ಇನ್ನೊಂದು ಅರಗಳಿಗೆ ನಿಲ್ಲಗೊಡರು ||೩||

ಸುತ್ತಲು ಕುಳ್ಳಿರ್ದ ಮಿತ್ರ ಬಾಂಧವರೆಲ್ಲ |
ಹೊತ್ತು ಹೋದೀತು ಹೊರಗೆ ಹಾಕೆನುವರು ||
ಹಿತ್ತಲಾ ಕಸಕ್ಕಿಂತ ಅತ್ತತ್ತ ಈ ದೇಹ |
ಹೊತ್ತು ಕೊಂಡೊಯ್ದು ಅಗ್ನಿಯಲಿ ಬಿಸುಡುವರು ||೪||

* * *

'ಹರಿದಾಸರು ಇಂತಹ ನೂರಾರು ಕೀರ್ತನೆಗಳನ್ನು ರಚಿಸಿದ್ದಾರೆ. ಅಧಿಕಾರದಾಹ, ಯುದ್ಧಗಳು, ಬರಗಾಲ, ಭೂಕಂಪ, ರೋಗ-ರುಜಿನಗಳಿಂದ, ಪೀಡಿತರಾಗಿ ವಯಸ್ಸಿನ ಭೇದವಿಲ್ಲದೆ ಮಡಿದ ಅನೇಕರ ಸಾವು-ನೋವನ್ನು ಕಂಡ ಅವರಿಗೆ ಬದುಕಿನಲ್ಲಿ ಕೊನೆಗೂ ಉಳಿಯುವುದೇನು? ಎಂಬ ಜಿಜ್ಞಾಸೆ ಎದುರಾದುದು ಸಹಜವೆನಿಸುತ್ತದೆ. ವಿಜಯನಗರ ಸಾಮ್ರಾಜ್ಯದ ಏಳು ಬೀಳುಗಳನ್ನು ಕಣ್ಣಾರೆ ಕಂಡದ್ದು ಅವರಲ್ಲಿ ಈ ವಿಷಯ ಅನೇಕ ಬಾರಿ ಪುನರಾವರ್ತಿತವಾಗಲು ಕಾರಣವಾಗಿದೆ ಎನಿಸುತ್ತದೆ.

ಅಂತಕನ ದೂತಕರಿಗೆ ಕಿಂಚಿತ್ತು ದಯವಿಲ್ಲ
ಚಿಂತೆಯನು ಬಿಟ್ಟು ಶ್ರೀಹರಿಯ ನೆನೆ ಮನವೆ ||ಪ||

ದಿವ ರಾತ್ರಿಯೆನ್ನದೆ ವಿಷಯ ಲಂಪಟನಾಗಿ |
ಸವಿಯೂಟಗಳನುಂಡು ಭ್ರಮಿಸಬೇಡ ||
ಅವನ ಕೊಂದಿವನಕೊಂದರ್ಥವನು ಗಳಿಸುವೊಡೆ |
ಜವನದೂತರು ಬರುವ ಹೊತ್ತ ನೀನರಿಯೆ ||೧||

ಹೊಸ ಮನೆಯ ಕಟ್ಟಿದೆನು ಗೃಹಶಾಂತಿ ಮನೆಯೊಳಗೆ
ಬಸುರಿ ಹೆಂಡತಿ ಮಗನ ಮದುವೆ ನಾಳೆ |
ಹಸನಾಗಿ ಇದೆ ಬದುಕು ಸಾಯಲಾರೆನು ಎನಲು
ಕುಸುರಿದರಿಯದೆ ಬಿಡರು ಯಮನವರು ಆಗ ||೩||

ಪುತ್ರ ಹುಟ್ಟಿದ ದಿವಸ ಹಾಲು ಊಟದ ಹಬ್ಬ
ಮತ್ತೊಬ್ಬ ಮಗನ ಉಪನಯನ ನಾಳೆ

ಅರ್ತಿಯಾಗಿದೆ ಬದುಕು ಸಾಯಲಾರೆನು ಎನಲು
ಮೃತ್ಯು ಹೆಡತಲೆಯಲ್ಲಿ ನಗುತಿರ್ಪುದರಿಯೆ ||೪||

ಎಂಬಲ್ಲಿ ಬದುಕಿನ ಅನಿಶ್ಚಿತತೆಯನ್ನು, ಮೃತ್ಯುವಿನ ನಿಷ್ಕರುಣೆಯನ್ನು ಈ ಕೀರ್ತನೆಯು ಅನನ್ಯವೆಂಬಂತೆ ಚಿತ್ರಿಸಿದೆ. ನಮಗೆ ಎಷ್ಟೇ ಜೀವನ ಪ್ರೇಮವಿದ್ದರೂ ದಾಸರು ಚಿತ್ರಿಸಿದ ಈ ವಾಸ್ತವವನ್ನು ಅಲ್ಲಗಳೆಯಲು ಸಾಧ್ಯವಾಗುವುದಿಲ್ಲ. "The teaching of the Haridasas is characterised by the devaluation of all the worldly by possessions from stand pcint of death. Death is inevitable and imminent; it 'disrelates' the individual from all his worldly possessions and thereby reduces them to nothing; the worldly possessions are thus ultimately worthless and are not worth pursuing"(Srinivasan G., 1972:42).

'ಸಾವನ್ನು ಇಷ್ಟೊಂದು ವೈಭವೀಕರಿಸುವ ಅಗತ್ಯವೇನಿತ್ತು?' ಎಂದು ವಿಚಾರಿಸಬೇಕು. ಮಾನವನು ಬದುಕಿರುವ ಅಲ್ಪಾವಧಿಯಲ್ಲೇ ತನಗೆ ಸಾಧ್ಯವಿರುವ ಉತ್ತಮ ಕಾರ್ಯಗಳನ್ನು ಮಾಡಿ ಮುಗಿಸಬೇಕೆಂಬ ತುಡಿತವು ಇಂತಹ ಕೀರ್ತನೆಗಳ ರಚನೆಗೆ ಪ್ರೇರಕವಾಗಿರಬೇಕೆನಿಸುತ್ತದೆ. ಇರುವ ಅಲ್ಪ ಆಯುಷ್ಯದಲ್ಲಿ ಅವನ ಕೊಂದಿವನ ಕೊಂದರ್ಥವನ್ನು ಗಳಿಸುವುದನ್ನು ನಿಷೇಧಿಸುವುದೂ ಅವರ ಉದ್ದೇಶವಾಗಿರುವಂತಿದೆ.

ನಾಳೆ ಮಾಡುವ ಧರ್ಮವಿಂದೆಗೈಯಲಿಬೇಕು |
ನಾಳ್ಯಾರೋ ನೀನ್ಯಾರೋ ನುಡಿ ಮಾನವ ||

* * *

ಧರ್ಮವೆಂಬ ಸಂಬಳವ ಗಳಿಸಿಕೊಳ್ಳಿರೊ |
ಹೆಮ್ಮೆಯಿಂದ ಈ ಶರೀರ ನಂಬಬೇಡಿ ಕಾಣಿರೊ ||

* * *

ಇತ್ಯಾದಿ ಕಡೆಗಳಲ್ಲಿ ಜನರನ್ನು ಉತ್ತಮ ನಡತೆಯತ್ತ ಪ್ರಚೋದಿಸುವುದೇ ದಾಸರ ಉದ್ದೇಶವೆಂಬುದು ಸ್ಪಷ್ಟವಾಗಿ ಕಂಡುಬರುತ್ತದೆ.

ಕಾಕು ಜನರ ಚಾಡಿ ನೀಕೇಳಿ ಕೋಪೋದ್ರೇಕ ಬೇಡೆಚ್ಚರಿಕೆ ||
ಅಳಿವುದು ಕಾಯವು ಉಳಿವುದೊಂದೇ ಕೀರ್ತಿ ಇಳೆಯೊಳಗೆಚ್ಚರಿಕೆ ||
ಅಳಲಿಸಿ ಪರರನು ಗಳಿಸಿ ತಂದರ್ಥವು ಉಳಿಯದು ಎಚ್ಚರಿಕೆ ||
ಉಳಿದಲ್ಪ ಕಾಲದಿ ಧರ್ಮದ ಹಾದಿಯ ಹಳಿಯಬೇಡೆಚ್ಚರಿಕೆ ||
ಪರರ ಪಾತಕಗಳ ನಾಲಿಗೆಯೊಳು ಉಚ್ಚರಿಸದಿರೆಚ್ಚರಿಕೆ ||
ಹೀನಮಾನಿನಿಯರ ಧ್ಯಾನ ಕಾನನದೊಳು ನರಳದಿರೆಚ್ಚರಿಕೆ ||
ನಡೆನುಡಿ ನಡೆವಾಗ ಗಿಡವೆಲ್ಲ ನೆಂಟರು ಕಡೆಗಿಲ್ಲ ಎಚ್ಚರಿಕೆ ||
ಕೊಡುಗೈಯ ಮಾಡದೆ ಮಡಗಿದ ಧನ | ಸಂಗಡಬಾರದೆಚ್ಚರಿಕೆ ||
ಬಾಳುವಾಗ ಸಿರಿಸ್ಥಿರವಾಗಿ ಇಹುದೆಂದು ಬೆಡಗು ಬೇಡೆಚ್ಚರಿಕೆ ||
ಹಾಳು ಬದುಕಿಗಾಗಿ ಹಲವರ ಕೂಡಣ | ಹಗೆಯು ಬೇಡೆಚ್ಚರಿಕೆ ||

(ಪುರಂದರದಾಸರು)

ಇಂತಹ ಸಂದೇಶದ ಮಹತ್ವವನ್ನು ವಿಚಾರಿಸಿದಾಗ ಹರಿದಾಸರು ಮತ್ತು ಅವರ ಪ್ರಧಾನ ಆಕರವಾದ ಭಾಗವತವು ಮೃತ್ಯುಮುಖದಲ್ಲಿ ಮಾನವ ಸಂಬಂಧಗಳನ್ನು ಮತ್ತೆ ಮತ್ತೆ ವಿಶ್ಲೇಷಿಸುವ ವಿಧಾನದ ಔಚಿತ್ಯವನ್ನು ಮನಗಾಣಬಹುದಾಗಿದೆ.

ಹರಿದಾಸರ ಮೌಲ್ಯ ಪ್ರತಿಪಾದಕ ಕೀರ್ತನೆಗಳಲ್ಲಿ ಕಂಡುಬರುವ ಋಣ ಮತ್ತು ವೃದ್ಧಿಯ ಇತರ ಎಲ್ಲ ಸನ್ನಿವೇಶಗಳನ್ನು ಈ ಐದು ಮಾದರಿಗಳಲ್ಲೇ ಅಳವಡಿಸಬಹುದೆಂಬ ಅಭಿಪ್ರಾಯದಿಂದ ಹೆಚ್ಚಿನ ವರ್ಗೀಕರಣಕ್ಕೆ ಹೋಗದೆ; ಅಲ್ಲಿಯ ಸಂದೇಶಗಳು ಇಂದಿನ ಓದುಗರಾದ ನಮಗೆ ಎಷ್ಟು ಪ್ರಸ್ತುತ ಎಂದು ಚರ್ಚಿಸುವುದು ಮುಖ್ಯವೆನಿಸುತ್ತದೆ.

## ೭.೨. ಹರಿದಾಸರ ಮೌಲ್ಯ ಪರಿಕಲ್ಪನೆ

ಹರಿದಾಸ ಪರಂಪರೆಯ ಜೀವನದೃಷ್ಟಿಯನ್ನು ಸ್ಪಷ್ಟವಾಗಿ ವಿವರಿಸುವುದು ಸುಲಭದ ಕೆಲಸವಲ್ಲ. ಕಾರಣವೆಂದರೆ ಇಲ್ಲಿಯ ಕೆಲವರು ಸನ್ಯಾಸಿಗಳು, ಮತ್ತೆ ಕೆಲವರು ಗೃಹಸ್ಥರಾದರೂ ವಿರಕ್ತರು. ಪ್ರಾಪಂಚಿಕ ಸಂಬಂಧಗಳನ್ನು ಹೆಚ್ಚು ಹಚ್ಚಿಕೊಳ್ಳದ ನಿವೃತ್ತಿ ಮಾರ್ಗಿಗಳು- ಎಂಬುದು ಸತ್ಯವಾದರೂ; ಅವರನ್ನು ಜೀವನವಿರೋಧಿಗಳು, ಇಹದ ಬದುಕನ್ನು ಅಸಹನೆಯಿಂದ ಕಾಣುವವರು ಎಂದು-ಅರ್ಥೈಸಲು ಸಾಧ್ಯವಿಲ್ಲ. ಅವರ ಜೀವನ ನಿಷ್ಠೆಯನ್ನೂ ಅಪಾರ ಮಾನವ ಪ್ರೇಮವನ್ನೂ ಅನುಮಾನಿಸಬೇಕಾಗಿಲ್ಲ. ತಾವು 'ನಾನಿನ್ನೊಳೇನ ಬೇಡುವುದಿಲ್ಲ ಎನ್ನ ಹೃದಯ ಕಮಲದಲಿ ನೆಲಸಿರು ಹರಿಯೆ' ಎಂದು ಬೇಡುವ ನಿಷ್ಕಾಮ ಭಕ್ತರಾದರೂ ಶ್ರೀಪಾದರಾಜರು ಜನರ ಬದುಕಿನ ಆಸಕ್ತಿಗಳನ್ನು ಆಕ್ಷೇಪಿಸುವುದಿಲ್ಲ. ಬದಲಾಗಿ 'ಅವರವರ ಸಂತೋಷ ಅವರವರಿಗಾಗಲಿ' ಎಂಬ ಹೃದಯವೈಶಾಲ್ಯವನ್ನು ಮೆರೆದಿದ್ದಾರೆ.

ಮನೆಯಿಂದ ಸಂತೋಷ ಕೆಲವರಿಗೆ ಲೋಕದಲಿ
ಧನದಿಂದ ಸಂತೋಷ ಕೆಲವರಿಗೆ ಲೋಕದಲಿ
ವನಿತೆಯಿಂ ಸಂತೋಷ ಕೆಲವರಿಗೆ ಲೋಕದಲಿ
ತನಯರಿಂ ಸಂತೋಷ ಕೆಲವರಿಗೆ ಲೋಕದಲಿ
ಇನಿತು ಸಂತೋಷ ಅವರವರಿಗಾಗಲಿ
ನಿನ್ನ ನೆನವೇ ಸಂತೋಷ ಎನಗಾಗಲಿ ನಮ್ಮ ರಂಗವಿಠಲ

ಈ ಉಗಾಭೋಗದಲ್ಲಿ ಅವರು ಜನಜೀವನದ ಅಪೇಕ್ಷೆಗಳನ್ನು ಪ್ರೀತಿಯಿಂದ ಮನ್ನಿಸುತ್ತಲೇ ಅವುಗಳ ಜೊತೆಗೆ ಹರಿಸ್ಮರಣೆಯ ಅಗತ್ಯವನ್ನೂ ಪ್ರತಿಪಾದಿಸಿದ್ದಾರೆ.

ಹರಿದಾಸರಿಗೆ ಆಕರವಾದ ಭಾಗವತವು 'ಪರಮಹಂಸ ಸಂಹಿತೆ' ಎಂದೇ ಖ್ಯಾತವಾಗಿದ್ದರೂ ವಿಷಯ ವಿರಕ್ತಿ-ಭಗವದ್ಭಕ್ತಿಗಳನ್ನೇ ಉಪದೇಶಿಸಿದರೂ; ಕೌಟುಂಬಿಕ ಬದುಕನ್ನು ಎಲ್ಲೂ ಅವಮಾನಿಸಿಲ್ಲ. ಬದಲಾಗಿ ಅಲ್ಲಿಯ 'ಪ್ರಿಯವ್ರತ ಚರಿತ್ರೆ', 'ಕರ್ದಮ ಚರಿತ್ರೆ', 'ಸುಧಾಮ ಚರಿತ್ರೆ'ಗಳಲ್ಲಿ ದಾಂಪತ್ಯ

ಜೀವನದ ಬಗ್ಗೆ, ಅಪೂರ್ವವಾದ ಗೌರವ ಹೊಂದಿರುವುದನ್ನು ಕಾಣುತ್ತೇವೆ. ಪುರಂದರದಾಸರೂ ಈ ಮಾತಿಗೆ ಹೊರತಲ್ಲ. ನವಕೋಟಿ ದ್ರವ್ಯವನ್ನು ದಾನಮಾಡಿ ಮಧುಕರ ವೃತ್ತಿಯನ್ನು ಅವಲಂಬಿಸಿದ್ದ ಅವರು ಬದುಕಿನ ಸೌಲಭ್ಯಗಳನ್ನು ಕೋರುವುದನ್ನೂ ಗಮನಿಸಬೇಕು.

ಶ್ರೀಪತಿಯು ನಮಗೆ ಸಂಪದವೀಯಲಿ ವಾ-
ಣೀಪತಿಯು ನಮಗೆ ಧೀರ್ಘಾಯುಕೊಡಲಿ ||ಪ||

ಸುರರ ಗಣವನು ಪೊರೆಯೆ ವಿಷವ ಕಂಠದಲ್ಲಿಟ್ಟ
ಹರ ನಿತ್ಯ ನಮಗೆ ಸಹಾಯಕನಾಗಲಿ |
ನರರೊಳುನ್ನತವಾದ ನಿತ್ಯಭೋಗಂಗಳನು
ಪುರುಹೂತ ಪೂರ್ಣ ಮಾಡಿಸಲಿ ನಮಗೆ ||೧||

ನಿನುತಸಿದ್ಧಿಪ್ರದನು ವಿಘ್ನೇಶ ದಯದಿಂದ
ನೆನೆದ ಕಾರ್ಯಗಳೆಲ್ಲ ನೆರವೇರಿಸಲಿ |
ದಿನ ದಿನದಿ ಅಶ್ವಿನಿಗಳಾಪತ್ತುಗಳ ಕಳೆದು
ಮನಕೆ ಹರುಷವನಿತ್ತು ಮನ್ನಿಸಲಿ ಬಿಡದೆ ||೨||

ವಿವಿಧ ದೇವತೆಗಳಿಂದ ಐಹಿಕ ಭಾಗ್ಯಗಳನ್ನು ಬೇಡುವ ಈ ಕೀರ್ತನೆಯನ್ನು ಹರಿದಾಸ ಪಂಥೀಯರೆಲ್ಲ ದಿನನಿತ್ಯ ಹಾಡುತ್ತಾ ಬಂದಿದ್ದಾರೆ. ಇದರಿಂದಾಗಿ ಈ ಮೇಲಿನ ಹಾರೈಕೆಗಳು ಅವರ ಜೀವನದೃಷ್ಟಿಯನ್ನು ತಿಳಿಸುತ್ತವೆ ಎನ್ನಬೇಕಾಗುತ್ತದೆ.

ದಾಸರಲ್ಲಿ ಏಕಕಾಲಕ್ಕೆ ಕಂಡುಬರುವ ಜೀವನಪ್ರೇಮ-ಜೀವನಪರಾಙ್ಮುಖತೆಗಳನ್ನು ಒಟ್ಟಾಗಿ ಅರ್ಥೈಸಿಕೊಳ್ಳುವುದು ಸಂಕೀರ್ಣ ಪ್ರಕ್ರಿಯೆಯಾಗಿದೆ. ಅವರ ಮೌಲ್ಯಪರಿಕಲ್ಪನೆಯನ್ನು ಸ್ಪಷ್ಟವಾಗಿ ಗ್ರಹಿಸಬೇಕಾಗುತ್ತದೆ. ಅದಕ್ಕೆ ಈ ಕೆಳಕಂಡ ಅಂಶಗಳ ನಿಚ್ಚಳ ಅರಿವು ಅನಿವಾರ್ಯವಾಗುತ್ತದೆ.

### ೭.೨.೧ ಪರಿಭಾಷೆಯ ಅರಿವು

ಹರಿದಾಸರ ಮೌಲ್ಯಪ್ರತಿಪಾದಕ ಕೃತಿಗಳ ವಿಮರ್ಶೆಗೆ ತೊಡಗುವಾಗ ಅವರ ಪರಿಭಾಷೆಯ ಸಂಕೀರ್ಣತೆಯನ್ನು ಖಚಿತವಾಗಿ ತಿಳಿಯದಿದ್ದರೆ ಓದುಗರು ಅನ್ಯಾರ್ಥ, ಅಪಾರ್ಥಗಳನ್ನು ಕಲ್ಪಿಸುವ ಅಪಾಯ ತಪ್ಪಿದ್ದಲ್ಲ. ಈ ಮಾತಿಗೆ ನಿದರ್ಶನವಾಗಿ 'ಸಂಸಾರ' ಮತ್ತು 'ಹೆಣ್ಣು'ಗಳ ಬಗ್ಗೆ ದಾಸರ ನಿಲುವೇನು? ಎಂಬ ಪ್ರಶ್ನೆಗೆ ಸೂಕ್ತ ಉತ್ತರ ಕಂಡುಕೊಳ್ಳಲು ಅವರ ಕೃತಿಗಳ ಸೂಕ್ಷ್ಮ ಅಧ್ಯಯನ ಅವಶ್ಯಕವೆಂಬುದನ್ನು ನೋಡಬಹುದು.

**೧. (ಸಂಸಾರ) :** ಸಂಸಾರವೆಂಬ ಪದವನ್ನು ಸಾಮಾನ್ಯ ಸಂದರ್ಭದಲ್ಲಿ 'ಕುಟುಂಬ' ಎಂಬ ಅರ್ಥದಲ್ಲಿ ಬಳಸುತ್ತೇವೆ. 'ಸಂಸಾರವೆಂಬಂಥ ಭಾಗ್ಯವಿರಲಿ' ಎಂಬಲ್ಲಿ ದಾಸರು ಇದೇ ಅರ್ಥವನ್ನು ಅನುಸರಿಸಿದ್ದಾರೆ.

ಆದರೆ ವೈದಿಕ ತತ್ವಶಾಸ್ತ್ರದಲ್ಲಿ ಇದೊಂದು ಪಾರಿಭಾಷಿಕ ಪದ. ಸಂಕ್ಷಿಪ್ತವಾಗಿ ಹೇಳುವುದಾದರೆ 'ಸಂಸಾರ'ವೆಂಬುದಕ್ಕೆ ವಿಶಿಷ್ಟಾದ್ವೈತಿಗಳು 'ಜನನ-ಮರಣ ಚಕ್ರ', 'ಪ್ರಕೃತಿ ಬಂಧನ' 'ಸುಖ-ದುಃಖ ಸಂವೇದನೆ', ಎಂದೂ; ಅದ್ವೈತಿಗಳು 'ಮಿಥ್ಯಾಜ್ಞಾನದಿಂದ ಉಂಟಾದ ಸಂಸ್ಕಾರರೂಪವಾಸನೆ', 'ಅದೃಷ್ಟದಿಂದ ಉಂಟಾಗುವ ಪುನರ್ಜನ್ಮ', 'ಅವಿದ್ಯೆ', 'ಕೌಟುಂಬಿಕ ಸಂಬಂಧ'ಗಳೆಂದೂ; ದ್ವೈತಿಗಳು ಆತ್ಮನು 'ಪಂಚಭೂತಗಳೊಂದಿಗೆ ಮತ್ತು ಇತರ ಜೀವಿಗಳೊಂದಿಗೆ ಹೊಂದಿದ ಸಂಬಂಧ'ವೆಂದೂ ತಿಳಿದಿದ್ದಾರೆ.(ಚಕ್ರವರ್ತಿ ೧೯೮೭ : ೨೬೪೬)

ಹೀಗಾಗಿ ದಾಸರು 'ಸಂಸಾರ' ಎಂಬ ಪದವನ್ನು ಕೆಲವು ಕಡೆ 'ಕುಟುಂಬ' ಎಂಬ ಅರ್ಥದಲ್ಲೂ, ಮತ್ತೆ ಕೆಲವು ಕಡೆ ವ್ಯಕ್ತಿಯು ಪಂಚಭೂತಾತ್ಮಕ ಜೀವ ಜಗತ್ತುಗಳೊಂದಿಗೆ ಬೆಳೆಸಿಕೊಂಡಿರುವ ಸಂಬಂಧವೆಂಬ ಅರ್ಥದಲ್ಲೂ ಬಳಸಿದ್ದಾರೆ ಎಂಬುದನ್ನು ತಿಳಿಯಬೇಕು.

ಕಾಡ ಬೆಳದಿಂಗಳು ಈ ಸಂಸಾರ
ಕತ್ತಲೆ ಬೆಳದಿಂಗಳು | (ಶ್ರೀಪಾದರಾಜರು)

* * *

ಹೇಸಿಗೆ ಸಂಸಾರದಲ್ಲಿ ಆಸೆಲೇಶ ಮಾಡದ್ಹಾಂಗೆ
ಈಸಬೇಕು ಇದ್ದು ಜಯಿಸಬೇಕು | (ಪುರಂದರದಾಸರು)

ಈ ಸಾಲುಗಳಲ್ಲಿ ಸಂಸಾರವನ್ನು ಅಸಾರ, ಹೇಸಿಗೆ ಎನ್ನುವಲ್ಲಿ ದಾಸರು ಜೀವನವನ್ನು ನಿರಾಕರಿಸುತ್ತಿಲ್ಲ ಬದಲಾಗಿ ಪ್ರಪಂಚದ ನಿಷ್ಠುರ ವಾಸ್ತವಗಳನ್ನು ಯಥಾವತ್ತಾಗಿ ಹೇಳುತ್ತ ಅಜ್ಞಾನದಲ್ಲಿ ಸುಖಿಸದೆ ಜ್ಞಾನದ ಬೆಳಕಿನಲ್ಲಿ ಬಾಳಲು ಕರೆಕೊಡುತ್ತಾರೆ. (ಸಂಸಾರವು)ಬದುಕು ಹೇಸಿಗೆ ಎನಿಸುವ ಸಂದರ್ಭವಿದ್ದರೂ ಪಲಾಯನ ಮಾಡದೆ, ವಿದಾಯ ಹೇಳದೆ ಕಷ್ಟಗಳಿಗೆ ಎದೆಗೊಟ್ಟು ನಿಂತು ಜಯಿಸಬೇಕು, ಹೋರಾಡಬೇಕು ಎನ್ನುತ್ತಾರೆ ದಾಸರು.

ಕನಕದಾಸರು ಶ್ರೀಮದ್ಭಾಗವತ ತೃತೀಯ ಸ್ಕಂಧದಲ್ಲಿ ಬರುವ ಕಪಿಲಗೀತೆಯ ಜೀವಸಂಸಾರ ಕಥನವನ್ನು :

ಸಾಕುಸಾಕಿನ್ನು ಸಂಸಾರ, ಸುಖವು
ಶ್ರೀಕಾಂತ ನೀನೊಲಿದು ಕರುಣಿಸೈ ಹರಿಯೆ

ಎಂಬ ೧೫ ನುಡಿಯ ಕೀರ್ತನೆಯಲ್ಲಿ ವಿಶ್ಲೇಷಿಸಿದ್ದಾರೆ. ಇಲ್ಲಿಯ ವಿವರಗಳನ್ನು ನೋಡಿದಾಗ ದಾಸರು ಸಂಸಾರವೆಂದು ಬಳಸಿದಲ್ಲೆಲ್ಲ 'ಕುಟುಂಬ' ಎಂಬ ಅರ್ಥದಲ್ಲಿ ವ್ಯವಹರಿಸುವುದಿಲ್ಲ. ಬದಲಾಗಿ ಬದುಕಿನ ಚರಾಚರ ಸಂಗತಿಗಳ ಸಂಬಂಧ ಜಾಲವನ್ನು ಸಂಸಾರ ಎನ್ನುತ್ತಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ.

"ಸಂಸಾರದ ಅಸಾರತೆ ಕೇವಲ ವೈಯಕ್ತಿಕವಲ್ಲ. ಸಂಸಾರದ ಅನಿತ್ಯತೆಯಿಂದ ಅದು ಭೀಕರವಾಗುತ್ತದೆ. ರೋಗ, ದಾರಿದ್ರ್ಯ, ಏಕಾಕಿತನ, ಇಚ್ಛೆಯ ಅತೃಪ್ತಿ ಇವುಗಳಿಂದ ಸಂಸಾರವು ಅಸಾರ ಎನ್ನಿಸಿದರೆ

ಮೃತ್ಯುವಿನಿಂದ ಅದು ಭಯಾನಕ ಎನಿಸುತ್ತದೆ. ಜೀವಿಯ ಅಸಹಾಯಕತೆ, ಅಜ್ಞಾನ ಇವುಗಳಿಂದ ತುಂಬಿದ ಭೀಕರ ಲೋಕವು ಕಾವ್ಯದಲ್ಲಿ ವಾಸ್ತವ ಲೋಕವಾಗಿದೆ.'' (ದಿವಾಣಜಿ, ೧೯೭೨:೧೬೦)ಎಂಬ ವಿದ್ವಾಂಸರ ಅಭಿಪ್ರಾಯವು ದಾಸರ ಈ ಪರಿಕಲ್ಪನೆಯನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗಿದೆ. ಇದರಂತೆ ಹೆಣ್ಣನ್ನು ಕುರಿತ ಅವರ ಪರಿಕಲ್ಪನೆಯನ್ನು ತಿಳಿಯಬಹುದು.

ಉದಾ : ೨(ಹೆಣ್ಣು)

ಹೆಣ್ಣುಹಿತವಲ್ಲ, ನಂಬಬೇಡ ಇತ್ಯಾದಿ ಮಾತುಗಳು ದಾಸರಲ್ಲಿ ಅನೇಕ ಕಡೆ ಕಂಡುಬರುತ್ತವೆ.

ಆರು ಹಿತವರು ನಿನಗೆ ಈ ಮೂವರೊಳಗೆ
ನಾರಿಯೋ ಧಾರಿಣಿಯೊ ಬಲು ತನದ ಸಿರಿಯೋ |

ಮುಂತಾದ ಸಾಲುಗಳನ್ನು ನೆನಪಿಸಿಕೊಳ್ಳಬಹುದು. ಪುರಂದರದಾಸರ ಮತ್ತೊಂದುಗೀತೆ ಹೀಗಿದೆ :

ನಂಬಬೇಡ ನಾರಿಯರನು
ಹಂಬಲಿಸಿ ಹಾರಯಿಸಬೇಡ|
ಅಂಬುಜಾಕ್ಷಿಯರೊಲುಮೆ ಬಯಲು
ಡಂಬಕವೆಂದು ತಿಳಿಯಿರೊ ॥ ॥ಪ॥

ಎಂಬಂತಹ ಕಡೆಗಳಲ್ಲಿ ಇವರು ಹೆಣ್ಣನ್ನು ಇಷ್ಟೇಕೆ ಕೀಳಾಗಿ ಕಾಣುತ್ತಾರೆ ಎಂಬುದು ಬಿಡಿಸಲಾರದ ಕಗ್ಗಂಟಾಗುತ್ತದೆ. ಆದರೆ ಮೇಲಿನ ಪಲ್ಲವಿಯ ಮುಂದುವರಿದ ರೂಪವಾದ ಕೀರ್ತನೆಯ ನುಡಿಗಳನ್ನು ನೋಡಿದರೆ ಉತ್ತರ ದೊರಕೀತು.

ಸೋತೆನೆಂದು ವಿಟಗೆ ದೈನ್ಯ ಮಾತನಾಡಿ ಮರುಳುಗೊಳಿಸಿ |
ಕಾತರವ ಹುಟ್ಟಿಸಿ ಅವನ ಮಾತೆ - ಪಿತರ ತೊಲಗಿಸಿ |
ಪ್ರೀತಿಬಡಿಸಿ ಹಣವ ಸೆಳೆದು ರೀತಿಗೆಡಿಸಿ ಕಡೆಯಲವನ |
ಕೋತಿಯಂತೆ ಮಾಡಿ ಬಿಡುವ ಜಾರಕಾರ್ತಿ ಹೆಂಗಳೆಯರ ॥

ಎಂಬಲ್ಲಿ ಅವರು ವೇಶ್ಯಾಸ್ತ್ರೀಯರಿಂದ ಆಗುವ ಅನರ್ಥಗಳನ್ನು ಹೇಳಿದ್ದಾರೆಂಬುದನ್ನು ಗಮನಿಸಬೇಕು.

ಭಾಗವತದಲ್ಲೂ ಗೃಹಸ್ಥನಿಗೆ ಸ್ತ್ರೀಯರ ಸಹವಾಸವನ್ನು ನಿಷೇಧಿಸುವ ಕಡೆಗಳಲ್ಲಿ ಅವಳು 'ಪರಸತಿ' ಅಥವಾ 'ಅಸತಿ'ಯಾಗಿರುತ್ತಾಳೆ. ಅದನ್ನು ಅನುಸರಿಸಿದ ದಾಸರು ಸಹ ಇಂತಹ ಕಡೆಗಳಲ್ಲಿ ಹೇಳ ಹೊರಟಿರುವುದು ದುಷ್ಟ ಸ್ತ್ರೀಯರ ವಿಚಾರವನ್ನೇ ಹೊರತು ಗೃಹಿಣಿಯಾದ ಧರ್ಮಪತ್ನಿಯ ವಿಷಯವನ್ನಲ್ಲ. ವಿಜಯನಗರದ ವೈಭವದ ಕಾಲವು ವೇಶ್ಯಾವೃತ್ತಿಯ ಸಾಮಾಜಿಕ ಸಮಸ್ಯೆಯ ಕರಾಳಮುಖವನ್ನು ಹೊಂದಿತ್ತು. ಅಂತಹ ಸಾಮಾಜಿಕಸಂದರ್ಭದಲ್ಲಿ ನೈತಿಕತೆಯ ಪ್ರಶ್ನೆ ದಾಸರನ್ನು ಕಾಡಿರಬೇಕು. ಸಮಾಜದ ಶೀಲಸಂವರ್ಧನೆಗಾಗಿ ದುಷ್ಟ ಸ್ತ್ರೀಯರ ಆಕರ್ಷಣೆಯಿಂದ ಹೊರಬರುವಂತೆ ಕರೆಕೊಡುವುದು ಅವರ ಆರೋಗ್ಯಕರ ಚಿಂತನೆಯ ಅನಿವಾರ್ಯ ಭಾಗವೇ ಆಗಿತ್ತು ಎಂಬ ಹಿನ್ನೆಲೆಯಲ್ಲಿ ಈ ಮಾತುಗಳನ್ನು ನೋಡಬೇಕಾಗುತ್ತದೆ.

‘ಸತಿಪತಿಗಳೊಂದಾಗ ಇರುತಿಪ್ಪುದೇ ಹಬ್ಬ’

‘ಮದಗಜಗಮನೆಯೊಳ್ ಸರಸವಾಡುತಲೊಮ್ಮೆ ಕೃಷ್ಣಾ ಎನ ಬಾರದೆ’

ಇತ್ಯಾದಿ ಉಕ್ತಿಗಳಲ್ಲಿ ಹರಿದಾಸರು ದಾಂಪತ್ಯವನ್ನು ಆಕ್ಷೇಪಿಸಿಲ್ಲವೆಂಬುದು ತಿಳಿದುಬರುತ್ತದೆ.

ಪಿತ ಮಾತೆ ಸತಿ ಸುತರನಗಲಿರಬೇಡ |
ಯತಿಯಾಗಿ ಅರಣ್ಯ ಚರಿಸಲು ಬೇಡ ||
ವ್ರತ-ನೇಮವ ಮಾಡಿ ದಣಿಯಲು ಬೇಡ |
ಸತಿಯಿಲ್ಲದವಗೆ ಸದ್ಗತಿಯಿಲ್ಲೋ ಮೂಢ ||

ಹೊನ್ನು-ಹೆಣ್ಣು-ಮಣ್ಣು ಜರೆದಿರಬೇಡ |
ಅನ್ನ-ವಸ್ತ್ರಗಳನ್ನು ತೊರೆದಿರಬೇಡ ||
ಬಣ್ಣದ ದೇಹವ ನೆಚ್ಚಲು ಬೇಡ |
ತಣ್ಣೀರೊಳಗೆ ಮುಳುಗಿ ನಡುಗಲು ಬೇಡ ||

ಮಹಾವಿಷ್ಣುಮೂರ್ತಿಯ ಮರೆತಿರಬೇಡ |
ಕುಹಕಬುದ್ಧಿಯಲಿ ಕುಣಿದಾಡಬೇಡ |
ಮಹಿಮ ಪುರಂದರ ವಿಠಲನ ಮರೆಯದಿರೊ ಮೂಢ

(ಜ್ಞಾನ ಒಂದೇ ಸಾಕು ಮುಕ್ತಿಗೆ)

ಈ ಕೀರ್ತನೆಯಲ್ಲಿ ದಾಸರು ಕೌಟುಂಬಿಕ ನೆಲೆಯಲ್ಲಿ ಮಡದಿಯ ಸ್ಥಾನದ ಬಗ್ಗೆ ಹೊಂದಿರುವ ಧೋರಣೆಯು ನಿಚ್ಚಳವಾಗಿ ತಿಳಿದುಬರುತ್ತದೆ.

ಭಯಂಪ್ರಮತ್ತಸ್ಯ ವನೇಷ್ವಪಿ ಸ್ಯಾತ್ ಯತೋ ವಸಂತೇ ಸಹಷಟ್ ಸಪತ್ನಾಃ |
ಜಿತೇಂದ್ರಿಯಸ್ಯಾತ್ಮರತೇರ್ಬುಧಸ್ಯ ಗೃಹಾಶ್ರಮಃ ಕಿನ್ನು ಕರೋತ್ಯವದ್ಯಂ |

(ಶ್ರೀಮದ್ಭಾಗವತ:೫.೧.೧೭)

(ಇಂದ್ರಿಯಗಳನ್ನು, ಮನಸ್ಸನ್ನು ನಿಗ್ರಹಿಸದೆ ಮತ್ತನಾಗಿರುವವನು, ಕಾಮಾದಿ ಅರಿಷಡ್ವರ್ಗಗಳನ್ನು ಗೆಲ್ಲದೆ ಕಾಡಿನಲ್ಲಿ ಇದ್ದರೆ ಪ್ರಯೋಜನವಿಲ್ಲ. ಜಿತೇಂದ್ರಿಯನಾಗಿ ಆತ್ಮಾರಾಮನಾದ ಜ್ಞಾನಿಗೆ ಗೃಹಸ್ಥಾಶ್ರಮವು ಬಂಧಕವಾಗುವುದಿಲ್ಲ.) ಎಂದು ಪ್ರಿಯವ್ರತನಿಗೆ ಬ್ರಹ್ಮದೇವರು ಉಪದೇಶಿಸಿದ ಗೃಹಸ್ಥ ಜೀವನದ ಮಹತ್ವವನ್ನು ಈ ಮೇಲಿನ ಕೀರ್ತನೆಯು ವಿಶಿಷ್ಟ ರೀತಿಯಲ್ಲಿ ವೃದ್ಧಿಸಿದೆ.

ಇಂತಹ ರಚನೆಗಳನ್ನು ಗಮನಿಸದೆ ದಾಸರ ಪದಗಳ ಒಂದೆರಡು ಮಾತುಗಳನ್ನು ಆಧರಿಸಿ ಅವರ ಮೌಲ್ಯಪ್ರಜ್ಞೆಯ ಬಗ್ಗೆ ನಿರ್ಣಯಗಳನ್ನು ತಾಳುವುದು ತಪ್ಪಾಗುತ್ತದೆ. ‘ಸತಿಯ ಸುತರು ಹಿತರು ಎಂದು ಮತಿಯ ಗೆಟ್ಟು ನಂಬಲಿಬ್ಯಾಡ ಮುಂತಾದ ಹೇಳಿಕೆಗಳನ್ನು ಬೇರೊಂದು ನೆಲೆಯಲ್ಲಿ ಅರ್ಥೈಸಬೇಕಾಗುತ್ತದೆ.

ಕೌಟುಂಬಿಕ ಸಂಬಂಧಗಳ ಬಗ್ಗೆ ಪ್ರಸ್ತಾಪಿಸುತ್ತಾ ಕನಕದಾಸರು

ಒಡೆಯ ನೀನೆಂದರಿತು ನಾ ನಿ
ನ್ನಡಿಯ ಭಜಿಸದೆ ದುರುಳನಾದೆನು
ಮಡದಿ ಮಕ್ಕಳ ಮೋಹದಲಿ ಮನ ಸಿಲುಕುತಡಿಗಡಿಗೆ
ಮಡದಿಯಾರೀ ಮಕ್ಕಳಾರೀ
ಒಡಲಿಗೊಡೆಯನು ನೀನು ನೀ ಕೈ
ವಿಡಿದು ಮುದದಲಿ ಬಿಡದೆ ರಕ್ಷಿಸು ನಮ್ಮನನವರತ

(ಹರಿಭಕ್ತಿಸಾರ:೭೦)

ಎಂದು ಭಗವಂತನನ್ನು ಪ್ರಾರ್ಥಿಸಿದ್ದಾರೆ. ಇದನ್ನು ಭಾಗವತದ ಚಿತ್ರಕೇತು ವೃತ್ತಾಂತದೊಂದಿಗೆ ತಾಳೆ ನೋಡಿರುವ ಬಸರೂರು ಸುಬ್ಬರಾಯರು "Kanaka brings up an unusal principle from the Bhagavata about relationships within the family. The Bhagavata Perceives the family as an association of independent individuals whose relationship must be more like that between friends, rather than like that between children and parents, or between brothers and sisters" ಎಂದು ಆರಂಭಿಸಿ " This verse seems to echo the celebrated incident described in the Bhagavata(vi.16.4) in which spirit of the dead son of Chitraketu asks sage Narada, who has come with child's parents : 'Who are these two people'?" (Basrur Subba Rao, 2001:227-228).

"ಬಾಳು ಹೇಗೆ ಶಾಶ್ವತವಲ್ಲವೋ ಹಾಗೆಯೇ ಸಂಸಾರವೂ ಸ್ಥಿರವಲ್ಲವೆಂಬ ಕಲ್ಪನೆ ನೈಜವಾದದು. ಬಗೆ ಬಗೆಯಾದ ಬಂಧನಗಳಿಂದ ಹೆಣೆದುಕೊಂಡು ಸಂಸಾರವೆನ್ನುವುದು ಬರಬರುತ್ತ ಬಿಡಿಸಲಾರದ ಗಂಟಾಗುತ್ತದೆ. ಒಂದಲ್ಲಾ ಒಂದು ತೆರದಲ್ಲಿ ಮಾನವನು ಸಂಸಾರದ ಗೀಳಿಗೆ ಗುರಿಯಾಗುತ್ತಾನೆ. ವಯಸ್ಸಾದಂತೆಲ್ಲ ಸತಿ, ಸಂಗತಿಗಳ ಸಂಕಲೆಯಲ್ಲಿ ಸಿಕ್ಕಿ ಬೀಳುವುದೂ ಸಹಜವಾದುದು. ಇಂಥ ವ್ಯಾಮೋಹದಿಂದ ಪ್ರತಿಯೊಬ್ಬರೂ ಬಿಡುಗಡೆ ಪಡೆಯಬೇಕೆಂಬುದೇ ಹರಿದಾಸರ ಹೆಬ್ಬಯಕೆ." (ವರದರಾಜರಾವ್ ಜಿ., ೧೯೬೭:೧೨೬) ಈ ಮಾತುಗಳು ದಾಸರ ನುಡಿಗಳ ಗ್ರಹಿಕೆಗೆ ಸಹಾಯಕವಾಗುತ್ತವೆ.

ಹೆಣ್ಣಿನ ಬಗ್ಗೆ ಮೋಹಗೊಳ್ಳುವುದು ತರವಲ್ಲವೆಂದು ಮತ್ತೆ ಮತ್ತೆ ಒತ್ತಿ ಹೇಳುವಲ್ಲಿ ಹರಿದಾಸರು 'ಸ್ತ್ರೀಯಲ್ಲಿ ದೋಷವನ್ನು ಹೇಳದೆ ಪುರುಷನ ದೌರ್ಬಲ್ಯದತ್ತ ಬೆರಳುತೋರಿಸುತ್ತಿದ್ದಾರೆ' ಎಂಬುದನ್ನು ಗುರುತಿಸದಿದ್ದರೆ ನಾವು ದಾಸರ ಕೃತಿಗಳಿಗೆ ಅಪಾರ್ಥ ಮಾಡಿದಂತಾಗುತ್ತದೆ. ಹೆಣ್ಣು, ಹೊನ್ನು, ಮಣ್ಣು ಗಳಿಗೆ ಬೇಗ ಕರಗುವುದು, ಅವುಗಳನ್ನು ಅಗತ್ಯಕ್ಕಿಂತ ಅತಿಯಾಗಿ ಹಚ್ಚಿಕೊಳ್ಳುವುದು ಪುರುಷ ಕುಲದ ಸಾಮಾನ್ಯ ಲಕ್ಷಣವೆಂಬುದನ್ನು ಸರಿಯಾಗಿಯೇ ಗುರುತಿಸಿದ ದಾಸರು ಮೋಹದ ಬಲೆಗೆ ಬಿದ್ದು ಜ್ಞಾನದಿಂದ ವಂಚಿತರಾಗಬಾರದೆಂದು ಎಚ್ಚರಿಸಲು

ಹೆಣ್ಣು ಹೊನ್ನಿಗಾಗಿ ಹರಿಯನಾಮಾಮೃತ
ಉಣ್ಣದೆ ಉಪವಾಸ ಇರುವರೆ ಖೋಡಿ |

* * *

ಮಾನವ ಜನ್ಮದೊಡ್ಡದು
ಇದ ಹಾನಿಮಾಡಲಿಬೇಡಿ ಹುಚ್ಚಪ್ಪಗಳಿರಾ |

ಎಂದು ಕರೆ ನೀಡಿದ್ದಾರೆ. ಈ ನಿಲುವನ್ನು ಶ್ರೀಪಾದರಾಜರ ಮಾತುಗಳಿಂದ ಮತ್ತಷ್ಟು ವಿವರಿಸಬಹುದು.

ನನ್ನ ಮನೆ ನನ್ನ ಸತಿ ನನ್ನ ಸುತರೆಂದೆನಿಸಿ
ಹೊನ್ನುಹಣ ಗಳಿಸಿ ಹೆಚ್ಚಾಗಿ ಹೋರ್‍ಯಾಡಿ|
ಸಣ್ಣವರ ಮದುವೆ ಸಂಭ್ರಮದಿ ಮಾಡುವೆನೆಂದು
ಅನ್ನ ಮೊದಲು ಕಾಣದೆ ಅಂತರ ಪಿಶಾಚಿಯಂತೆ ||
(ಏನು ಭ್ರಮೆ ಮನುಜರಿಗೆ ಎಷ್ಟು ಮಮತೆ ಪ್ರಕೃತಿಯಲಿ)

ಪ್ರತಿಯೊಂದು ವಸ್ತುವಿಗೂ ಪ್ರತಿಯೊಬ್ಬ ವ್ಯಕ್ತಿಗೂ ತನ್ನದೇ ಆದ ಪ್ರತ್ಯೇಕ ಅಸ್ತಿತ್ವ(ಇರುವಿಕೆ)ವಿರುತ್ತದೆ. ಆದರೆ ಮಮಕಾರಕ್ಕೊಳಗಾದ ಮನುಷ್ಯನು ಮನೆ, ಮಡದಿ, ಮಕ್ಕಳ ಸ್ವಾತಂತ್ರ್ಯವನ್ನು ಪರಿಗಣಿಸದೆ, 'ಅವರು ನನ್ನವರು, ಅವರಿಗೆ ನಾನೇ ಒಳ್ಳೆಯದನ್ನು ಮಾಡುವವನು' ಎಂಬ ಹುಚ್ಚಿನಲ್ಲಿ ತನ್ನ ಆರೋಗ್ಯವನ್ನೂ ಲೆಕ್ಕಿಸದೆ ಇತರರಿಗೆ ಮೋಸವನ್ನು ಮಾಡಿಯಾದರೂ ಹೊನ್ನು ಹಣಗಳನ್ನು ಗಳಿಸುತ್ತಾನೆ. ಬಹಳ ರೀತಿಯಿಂದ ಶ್ರಮಪಡುತ್ತಾನೆ. ಕಂಡವರ ದ್ವೇಷ ಕಟ್ಟಿಕೊಳ್ಳುತ್ತಾನೆ. ತಾನೇ ಹಿರಿಯನೆಂದೂ, ತನ್ನವರು ಸಣ್ಣವರೆಂದೂ, ಅವರ ಮದುವೆ-ಮುಂಜಿಗಳನ್ನು ವೈಭವದಿಂದ ಮಾಡುವುದೇ ತನ್ನ ಜೀವಮಾನದ ಬಹುದೊಡ್ಡ ಕರ್ತವ್ಯವೆಂದೂ ತಿಳಿಯುತ್ತಾನೆ. ಅದಕ್ಕಾಗಿ ಹೋರಾಡುವಾಗ ಎಷ್ಟೇ ಶ್ರೀಮಂತನಾದರೂ ಊಟ, ಉಡುಗೆ, ವಿಶ್ರಾಂತಿಗಳನ್ನು ಕಾಣದೆ, ನಿಂತಲ್ಲಿ ನಿಲ್ಲದೆ ಅಂತರ ಪಿಶಾಚಿಯಂತೆ ಅಲೆದು ದಣಿಯುತ್ತಾನೆ. ಯಾರಿಗಾಗಿ ಇಷ್ಟೆಲ್ಲ ದುಡಿದನೋ ಅವರೇ ಇವನಿಗೆ ಮೋಸ ಮಾಡುತ್ತಾರೆ. ಅಂತ್ಯಕಾಲದಲ್ಲಿ ಕಾಲಕಾಲಕ್ಕೆ ಅನ್ನ-ನೀರಿಲ್ಲದೆ ಕಂಡವರ ಮನೆ ಬಾಗಿಲಿಗೆ ಪಿಶಾಚಿಯಂತೆ ಅಲೆದು ಅವಮಾನಿತನಾಗುವ ಪ್ರಸಂಗ ಇಲ್ಲದಿಲ್ಲವೆಂಬ ಚಿತ್ರಣವನ್ನು ಯಾರೂ ನಿರಾಕರಿಸಲು ಸಾಧ್ಯವಿಲ್ಲ. ಇಂತಹ ಕಡೆಗಳಲ್ಲಿ ಹರಿದಾಸರ ದೃಷ್ಟಿಕೋನವನ್ನು ಯಥಾರ್ಥವಾಗಿ ಗ್ರಹಿಸಬೇಕು.

''ದಾಸರು ವಿರಾಗಿಗಳು, ಆದ್ದರಿಂದ ಅವರು ವೈರಾಗ್ಯವನ್ನೇ ಪ್ರಚಾರ ಮಾಡಿದರು' ಎಂದು ತಿಳಿದರೆ ತಪ್ಪಾಗುತ್ತದೆ. ದಾಸಸಾಹಿತ್ಯವನ್ನು ಸ್ಥೂಲವಾಗಿ ಅವಲೋಕನ ಮಾಡಿದರೂ ಒಂದೆರಡು ವಿಷಯಗಳು ನಮಗೆ ಎದ್ದು ಕಾಣುತ್ತವೆ. ಸಂಸಾರ ದುಃಖಮಯವಾದದ್ದು; ಕಷ್ಟಕಾರ್ಪಣ್ಯಗಳಿಂದ ಕೂಡಿದ್ದು; ಹೇಯವಾದದ್ದು. ಆದರೆ ಈ ಸಂಸಾರಕ್ಕಿಂತ ಬದುಕು ದೊಡ್ಡದು. ಅಪೂರ್ವವಾಗಿ ದೊರೆತ ಈ ಮನುಷ್ಯದೇಹವನ್ನು ಸದುಪಯೋಗಪಡಿಸಿಕೊಳ್ಳಬೇಕು. ಕಷ್ಟಗಳನ್ನು ಎದುರಿಸಿ ಪರಮಾತ್ಮನಲ್ಲಿ ಅನನ್ಯವಾಗಿ ಭಕ್ತಿಭಾವದಿಂದ ಅನುಭವಿಸಬೇಕು. 'ಈಸಬೇಕು ಇದ್ದು ಜಯಿಸಬೇಕು ಹೇಸಿಗೆ ಸಂಸಾರದಲ್ಲಿ', 'ಕೆರೆಯ

ಗೀರನು ಕೆರೆಗೆ ಚಲ್ಲಿ' ಕೃತಾರ್ಥರಾಗಬೇಕು. ಇದೇ ದಾಸರು ನಡೆದು ತೋರಿಸಿದ ಮಾರ್ಗ; ಸಾರಿದ ಸಂದೇಶ. ಆತ್ಮಕಲ್ಯಾಣಕಾರಕವಾದ ಭಾಗ ಇದರಲ್ಲಿ ವಿಪುಲವಾಗಿದೆ. ಈ ಸಾಹಿತ್ಯದಿಂದ ಓದುಗರಿಗೆ ಬದುಕಿನಲ್ಲಿ ನಂಬಿಕೆ; ಅದನ್ನು ಧೈರ್ಯದಿಂದ ನೋಡಿ ಎದುರಿಸುವ ಶ್ರದ್ಧೆ; ದೇವರಲ್ಲಿ ಗಾಢವಾದ ವಿಶ್ವಾಸವುಂಟಾಗುವುದರಲ್ಲಿ ಸಂದೇಹವಿಲ್ಲ. (ಶಂಕರನಾರಾಯಣರಾವ್ ಎಚ್.ಎಂ., ೧೯೬೭:vii) ಎಂಬ ಹಿರಿಯರ ಮೌಲ್ಯಮಾಪನವನ್ನು ಅಂಗೀಕರಿಸಬಹುದಾಗಿದೆ. ವಸ್ತುಸ್ಥಿತಿ ಹೀಗಿಲ್ಲದಿದ್ದರೆ "ಸಂಸಾರದಿಂದ ಆರ್ತರಾದವರಿಗೆ ಶ್ರೀಪುರಂದರದಾಸರ ಪದಗಳಿಂದ ನೆಮ್ಮದಿಯುಂಟಾಗಿ ಮನಸ್ಸು ಸ್ಥಿಮಿತಕ್ಕೆ ಬರುವುದು" (ನರಸಿಂಗರಾವ್ ಮಾನ್ವಿ, ೧೯೬೪:೧೨೬) ಎಂಬಂತಹ ಅಭಿಪ್ರಾಯ ಬರುತ್ತಿರಲಿಲ್ಲ.

### ೭.೨.೨. ಅಪಮೌಲ್ಯೀಕರಣ - ಅಪಚಾರ

ಭಾಗವತಧರ್ಮದ ವಿಶಾಲ ತಳಹದಿಯ ಮೇಲೆ ರೂಪುಗೊಂಡ ಹರಿದಾಸ ಆಂದೋಲನವನ್ನು ಮತೀಯ ಚೌಕಟ್ಟಿಗೆ ಸೀಮಿತಗೊಳಿಸಿ ಅರ್ಥೈಸಲಾಗಿದೆ. ಕೆಲವರಂತೂ ಅಗತ್ಯವಿಲ್ಲದ ಕಡೆಗಳಲ್ಲೂ ಮಧ್ವಮತದ ಅಂಶಗಳನ್ನು ಹುಡುಕ ಹೊರಟಿದ್ದಾರೆ.

ದಾಸರು ಮಧ್ವಮತಾನುಯಾಯಿಗಳೆಂಬ ಚಾರಿತ್ರಿಕ ಅಂಶವನ್ನು ನೆಪವಾಗಿಟ್ಟುಕೊಂಡು; 'ಮಧ್ವಮತ ಪ್ರಸಾರವೇ ದಾಸಸಾಹಿತ್ಯದ ಮುಖ್ಯ ಉದ್ದೇಶ'ವೆಂದು ಬಿಂಬಿಸುವ ಪ್ರಯತ್ನ ಮಾಡಲಾಗಿದೆ. ಕೆಲವೇ ಕೀರ್ತನೆಗಳಲ್ಲಿ ಕಂಡುಬರುವ ಮಧ್ವಸ್ಮರಣೆ, ಮಧ್ವಮತ ಪ್ರಶಂಸೆಯ ಮಾತುಗಳಿಂದ ಇಂತಹ ನಿರ್ಧಾರ ಕೈಗೊಳ್ಳುವುದು ಸರಿಯಲ್ಲ. ಕನಕ-ಪುರಂದರಾದಿ ಮೊದಲ ಘಟ್ಟದ ಹರಿದಾಸರ ಎರಡು ಸಾವಿರಕ್ಕೂ ಹೆಚ್ಚು ಉಪಲಬ್ಧ ಕೀರ್ತನೆಗಳನ್ನು ಹುಡುಕಿ ನೋಡಿದರೆ ಮತಸಂಬಂಧ ಮಾತುಗಳ ಸಂಖ್ಯೆ ಅತಿ ಕಡಿಮೆ ಮತ್ತು ಅದೇ ಪ್ರಧಾನ ಅಂಶವಾಗಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಡಾ.ಕೆ.ಎಂ.ಕೃಷ್ಣರಾಯರು "ಹರಿದಾಸರು ಪ್ರಾಯಶಃ ಮಧ್ವ ಸಿದ್ಧಾಂತದ ಅನುಯಾಯಿಗಳೇನೋ ನಿಜ. ಆದರೆ ಅವರು ಹೆಚ್ಚಾಗಿ ಅವರ ಜೀವನಸ್ಪರ್ಶಿಯಾದ ಭಾಗವತ ಧರ್ಮಾನುಯಾಯಿಗಳು. ಶುಷ್ಕ ಸಂಪ್ರದಾಯ ಇಲ್ಲವೇ ತರ್ಕ ಕರ್ಕಶವಾದ ಸರಣಿಯ ಅನುಯಾಯಿಗಳಲ್ಲ. ಅವರಲ್ಲಿ ನ್ಯಾಯವೇದಾಂತ ಪಂಡಿತರಾದ ಕೆಲವರು ತರ್ಕಪದ್ಧತಿಯನ್ನು ಅವಲಂಬಿಸಿದ್ದರೂ ಭಕ್ತರೂ ಜ್ಞಾನಿಗಳೂ ಆಗಿ ರಾಗ ದ್ವೇಷರಹಿತರಾಗಿದ್ದರು ಎಂಬುದನ್ನು ನೆನೆಯಬೇಕು" (ಕೃಷ್ಣರಾವ್ ಕೆ.ಎಂ.೧೯೫೬:೭೬) ಎಂದು ಅಭಿಪ್ರಾಯಪಟ್ಟಿದ್ದಾರೆ.

For a proper assessment of their teaching, it would be necessary to take in to consideration the general import of their teaching without attaching undue importance to some of the apparent sectarian implications which might sometimes be associated with it. Concentrating on the general import of their teaching, it can be rightly said that their teaching undoubtedly has a meaning and message for the whole of Humanity irrespective of caste and creed (Srinivasan G., 1972:41).

ಆದರೂ "ದಾಸ ಚಳುವಳಿಯನ್ನು ಧಾರ್ಮಿಕ ಹಾಗೂ ಮತೀಯ ಸಾಹಿತ್ಯ ಎಂಬ ಕಟ್ಟಿನೊಳಗಿಟ್ಟು ನೋಡಲಾಗಿದೆ. ಇದರಿಂದಾಗುವ ಬಹುದೊಡ್ಡ ಅಪಾಯವೆಂದರೆ ಭಕ್ತಿ ಅಥವಾ ಧಾರ್ಮಿಕ ಅಭಿವ್ಯಕ್ತಿಯು ಚಾರಿತ್ರಿಕ ಅನಿವಾರ್ಯದಲ್ಲಿ ರೂಪುಗೊಂಡದ್ದು ಮತ್ತು ಮಾನವ ಬದುಕನ್ನು ಮೌಲ್ಯೀಕರಿಸುವ ಆಯಾಮ ಇದಕ್ಕಿದೆ ಎನ್ನುವ ಸತ್ಯವನ್ನು ಮರೆಮಾಚುವುದು. ಈ ಕಾರಣದಿಂದಾಗಿಯೇ ಭಕ್ತಿ ಸಾಹಿತ್ಯವನ್ನು ಅದರ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಚಾರಿತ್ರಿಕ ಪರಿಪ್ರೇಕ್ಷ್ಯದಲ್ಲಿಟ್ಟು ಗ್ರಹಿಸುವುದು ಮತ್ತು ಆ ಮೂಲಕ ಇಂದಿನ ಸಂದರ್ಭದ ಸವಾಲುಗಳನ್ನು ದಾಟುವ ಪ್ರಕ್ರಿಯೆಯಾಗಿ ಹೇಗೆ ದುಡಿಸಿಕೊಳ್ಳಬಹುದು ಎನ್ನುವ ಶೋಧ ಮುಖ್ಯವಾಗುತ್ತದೆ. ಆದರೆ ಇದುವರೆಗಿನ ನಮ್ಮ ಅಧ್ಯಯನಗಳಲ್ಲಿ ಭಕ್ತಿ ಚಳುವಳಿಯ ಹಿನ್ನೆಲೆಯಲ್ಲಿದ್ದ ಹೊಸಬದುಕಿನ ಹುಡುಕಾಟ, ಸಮಾಜಮುಖಿ, ಆಲೋಚನೆ, ಮಾನವೀಕರಣದ ಚಿಂತನೆಯಂತಹ ಮಹತ್ವದ ಅಂಶಗಳಿಂದ ಹಿಂದೆ ಸರಿದು ಅದನ್ನು ಜಾತಿ ಮತೀಯ ಸಾಹಿತ್ಯವೆಂಬ ಅಪಕಲ್ಪನೆಯನ್ನು ಮುಂದುಮಾಡಲಾಗಿದೆ."(ನಾವಡ ಎ.ವಿ., ಗಾಯತ್ರಿ ನಾವಡ, ೨೦೦೨ : ೧೨) ಎಂಬುದನ್ನು ಗಮನಿಸಬೇಕು. ದಾಸರ ರಚನೆಗಳನ್ನು ಸಾರಾಸಗಟಾಗಿ ಮತೀಯವೆಂದು ನೋಡುವ ಪೂರ್ವಗ್ರಹವನ್ನು ಕೈಬಿಡಬೇಕು.

ಒಂದು ಸಾಹಿತ್ಯ ಕೃತಿಯಲ್ಲಿ ಕವಿಯು ನಂಬಿದ ಮತಧರ್ಮದ ಒಂದೆರಡು ಸಾಲುಗಳು ಕಾಣಿಸಿಕೊಂಡ ಮಾತ್ರಕ್ಕೆ ಅದಕ್ಕೆ ಮತೀಯಸಾಹಿತ್ಯವೆಂಬ ಹಣೆಪಟ್ಟಿ ಕಟ್ಟುವುದು ಸರಿಯಲ್ಲ. ಕವಿಯ ಪ್ರಧಾನ ಉದ್ದೇಶವನ್ನು ಸಮಗ್ರವಾಗಿ ಪರೀಕ್ಷಿಸದೆ, ಬೀಸು ಹೇಳಿಕೆಗಳನ್ನು ನೀಡಿದರೆ ಕೃತಿಯ ಸತ್ವವನ್ನು ಅವಮಾನಿಸಿದಂತಾಗುತ್ತದೆ.

'ಹರಿಸರ್ವೋತ್ತಮತ್ವ', 'ಸರ್ವಜೀವರಾಶಿಗಳಿಗೂ ಹರಿಭಕ್ತರಾಗುವ ಅರ್ಹತೆಯಿದೆಯೆಂಬ ವ್ಯಾಪಕ ದೃಷ್ಟಿ', 'ಮುಕ್ತಿಗೆ ಭಕ್ತಿಯೇ ಸಾಧನ' ಎಂಬ ಭಾಗವತಪುರಾಣದ ಪ್ರಮುಖ ಸಂದೇಶಗಳನ್ನೇ ದಾಸರು ಎತ್ತಿ ಹಿಡಿದಿದ್ದಾರೆ. ದಾಸಸಾಹಿತ್ಯದ ಸೈದ್ಧಾಂತಿಕ ಅಧ್ಯಯನದಿಂದ" ಈ ಅಂಶ ದೃಢಪಟ್ಟಿದೆ.

ಹೀಗಾಗಿ ಸಮಸ್ತ ವೈದಿಕ ಗ್ರಂಥಗಳಲ್ಲಿರುವ ಜೀವನ ಮೌಲ್ಯಗಳನ್ನು ಜನಸಮುದಾಯಕ್ಕೆ ಚಿರಪರಿಚಿತವಾದ ಪುರಾಣಪ್ರಜ್ಞೆಯ ಮೂಲಕ ಬಿತ್ತರಿಸಲು ಹೊರಟ ದಾಸರಿಗೆ ಮತಪ್ರಚಾರಕ್ಕಿಂತ ಭಕ್ತಿ ಪ್ರಚಾರ ಮುಖ್ಯವಾಗಿತ್ತು. ಆ ಭಕ್ತಿಯ ನೈತಿಕ ಹೊಣೆಗಾರಿಕೆಗೆ ಅವರು ಹೆಚ್ಚು ಒತ್ತು ನೀಡಿದ್ದರು ಎಂಬುದನ್ನು ಗುರುತಿಸಬೇಕು. ದಾಸರು ಭಕ್ತಿಯ ಮೂಲಕ ಮೌಲ್ಯ ಪ್ರಸಾರ ಮಾಡಿದ ಬಗೆಯನ್ನು ವಿವರಿಸುವ ಡಾ.ಎಚ್.ಜಿ.ಲೋಕೂರ ಅವರ ವಿಶ್ಲೇಷಣೆಯ ಮಾತುಗಳು ಹೀಗಿವೆ : "ತಾಳಿದವನು ಬಾಳಿಯಾನು' ಎಂಬ ಅನುಭವಾಮೃತಕೆ ಅರ್ಥಪೂರ್ಣ ವ್ಯಾಖ್ಯಾನ 'ತಾಳುವಿಕೆಗಿಂತ ತಪವು ಇಲ್ಲ' ಎಂಬ ಪಲ್ಲವಿ ತಮ್ಮ ಪೂರ್ಣಾಯುಷ್ಯ ತಪವಿದ್ದು ಎಲ್ಲ ವಿರೋಧ ತಾಳಿದ ವಾದಿರಾಜರ 'ಕೇಳಬಲ್ಲವರಿಗೆ

ಹೇಳುವೆನು ಸೊಲ್ಲ' ಎನ್ನುವ ಅನುಪಲ್ಲವಿಯೂ ಧ್ವನಿಪೂರ್ಣ. ಅಂಥ ಕುತೂಹಲಿಗಳಿಗೆ ತಾಳ್ಮೆಯು ತಪದ ರಹಸ್ಯವನ್ನು ಆದ್ಯಂತ ಪ್ರಾಸಗಳಿಂದ ಬಿಚ್ಚಿಟ್ಟಿದ್ದಾರೆ.

ದುಷ್ಟಮನುಜರು ಪೇಳ್ವ ನಿಷ್ಠುರದ ನುಡಿತಾಳು |
ಕಷ್ಟ ಬಂದರೆ ತಾಳು ಕಂಗೆಡದೆ ತಾಳು ||
ನೆಟ್ಟ ಸಸಿ ಫಲಬರುವ ತನಕ ಶಾಂತಿಯ ತಾಳು |
ಕಟ್ಟು ಬುತ್ತಿಯ ಮುಂದೆ ಉಣಲುಂಟು ತಾಳು ||೧||

ಹಳಿದು ಹಂಗಿಸುವಂಥ ಹಗೆಯ ಮಾತನು ತಾಳು |
ಸುಳಿನುಡಿ ಕುಹಕ ಕುಮಂತ್ರವನು ತಾಳು ||
ಅಳುಕದಲೆ ಬಿರುಸು ಬಿಂಕದ ನುಡಿಯ ನೀ ತಾಳು |
ಹಲಧರಾನುಜನನ್ನು ಹೃದಯದಲಿ ತಾಳು ||೨||

ನಕ್ಕು ನುಡಿವರ ಮುಂದೆ ಮುಕ್ಕರಿಸದೆ ತಾಳು |
ಅಕ್ಕಸವ ಮಾಡುವರ ಅಕ್ಕರದಿ ತಾಳು ||
ಉಕ್ಕೊ ಹಾಲಿಗೆ ನೀರು ಇಕ್ಕುವಂದದಿ ತಾಳು |
ಪಕ್ಷೀಶ ಹಯವದನ ಶರಣೆಂದು ಬಾಳು ||೩||

ನಾವು ಸಾಮಾನ್ಯವಾಗಿ ತಾಳ್ಮೆಗೆಟ್ಟು ಪ್ರತಿಭಟಿಸುವ ಸಂದರ್ಭಸೂಚಿಸಿ ತಾಳಬೇಕೆನ್ನುವ ತಪೋದರ್ಶನವಿದು. ಚಿರಂತನ ಮೌಲ್ಯ. ಉಕ್ಕೊ ಹಾಲಿಗೆ ನೀರ ನಿಕ್ಕುವ ದೃಷ್ಟಾಂತ ಕೋಪ ತಾಪಗಳಿಂದ ಕುದಿವ ನಮ್ಮ ಮನೋಭಾವವನ್ನು ಮೂರ್ತಿವತ್ತಾಗಿಸಿದೆ. ತಾಳು ತಾಳೆನ್ನುತ್ತಲೇ ಅದನ್ನು ಸಾಧಿಸಲು 'ಹಲಧರಾನುಜನ ಹೃದಯದಲಿ ತಾಳು' ಎಂಬ ಶ್ಲೇಷ, 'ಪಕ್ಷೀಶ ಹಯವದನ ಶರಣೆಂದು ಬಾಳು' ಎಂಬ ದಿವ್ಯ ಸಂದೇಶ ಐಹಿಕಾಮುಷ್ಮಿಕ ಸುಖ ಶಾಂತಿ ಬಯಸುವವರಿಗೆಲ್ಲ ಮನೋಹರವೆನಿಸುವಲ್ಲಿ ಸಂದೇಹವಿಲ್ಲ. ಇದು ಬರಿ ಮಧ್ವಮತದ ಪ್ರಚಾರವೆನ್ನುವಂತಿಲ್ಲ. ಇಹಪರಗಳ ಶ್ರೇಯಪ್ರೇಯ ಪ್ರೇರಕ ಸೂಕ್ತಗಳಿವು. ಸೊಗಸಾದ ವಾಕ್ಯ ಮಾಣಿಕ್ಯಗಳಂತಿದೆ. ಇಂಥ ತತ್ವ-ನೀತಿ-ಕಾವ್ಯ ಮೌಲ್ಯಗಳ ಸಾಹಿತ್ಯ ಒಂದು ಮತದ ಸೊತ್ತಲ್ಲ. ಸರ್ವಹೃದಯಕೋಶ ತುಂಬುವ ಸಾಹಿತ್ಯ ಭಂಡಾರ ನಿಜಕ್ಕೂ ಒಂದು ತವನಿಧಿ. ಇಂತಹ ತತ್ವ ಗಾಂಭಿರ್ಯ, ಸಾಹಿತ್ಯ ಸೌಂದರ್ಯ, ಸಂಗೀತ ಮಾಧುರ್ಯಗಳ ತ್ರಿವೇಣಿ ಸಂಗಮ ತುಂಬ ಅಪರೂಪ."(ಲೋಕೂರ.ಎಚ್ .ಜಿ. ೧೯೯೩ : ೧೬೧)

### ೭.೨.೩. ಆಸ್ತಿಕ ಮಾನವತಾವಾದ

ಹರಿದಾಸರು ದೈವವನ್ನು ಸಂಪೂರ್ಣವಾಗಿ ಒಪ್ಪಿಪೂಜಿಸಿ ಶರಣಾದವರು. ಅವರ ಆಸ್ತಿಕ ನಿಲುವನ್ನು ಒಪ್ಪಿ ಮುಂದೆ ಸಾಗುವ ಓದುಗರಿಗೆ ದಾಸಸಾಹಿತ್ಯದ ಮೌಲ್ಯಗಳನ್ನು ಗುರುತಿಸುವುದು ಸುಲಭವಾಗುತ್ತದೆ. ಆದರೆ ನಾಸ್ತಿಕ ಮನೋಭಾವದವರು ಇಲ್ಲಿಯ ಹೃದಯ ವೈಶಾಲ್ಯತೆಯನ್ನು ಸಮರ್ಪಕವಾಗಿ ಗುರುತಿಸುವುದು

ಅಷ್ಟೇನೂ ಸುಲಭವಲ್ಲ. ತಾತ್ವಿಕ ಭಿನ್ನತೆಗಳು ಮಾನವ ಸಂಬಂಧಗಳನ್ನು ದೂರಮಾಡುತ್ತಿರುವ; ವಿರುದ್ಧ ಧ್ರುವಗಳಿಗೆ ಒಯ್ದು ನಿಲ್ಲಿಸುತ್ತಿರುವ ಆಧುನಿಕ ಕಾಲದಲ್ಲಿ ಈ ತೊಂದರೆ ಮತ್ತಷ್ಟು ಹೆಚ್ಚಾಗುವಂತಿದೆ.

ಉದಾಹರಣೆಗೆ : 'ಅಲ್ಲಿದೆ ನಮ್ಮ ಮನೆ ಇಲ್ಲಿ ಬಂದೆವು ಸುಮ್ಮನೆ' ಮುಂತಾದ ಒಂದೆರಡು ಸಾಲುಗಳನ್ನು ಮನಸ್ಸಿನಲ್ಲಿಟ್ಟುಕೊಂಡು ದಾಸರ ಇಹದ ನಿಷ್ಠೆಯನ್ನು ಅನುಮಾನಿಸಬೇಕಾಗಿಲ್ಲ. 'ಇಲ್ಲೇ ವೈಕುಂಠ ಕಾಣಿರೋ', 'ಬಲ್ಲವರಿಗಿಲ್ಲೇ ವೈಕುಂಠ' ಇತ್ಯಾದಿ ಕೀರ್ತನೆಗಳನ್ನೂ ಗಮನಿಸಬೇಕಾಗುತ್ತದೆ.

ಇಲ್ಲೇ ವೈಕುಂಠ ಕಾಣಿರೊ - ಸಿರಿ |
ವಲ್ಲಭನಂಘ್ರಿಯ ನೆರೆನಂಬಿದವರಿಗೆ ||ಪ||

ನುಡಿಯೆರಡಾಗದೆ ಕಡುಕೋಪ ಮಾಡದೆ |
ಬಡತನ ಬಂದರು ಲೆಕ್ಕಿಸದೆ ||
ಬೆಡಗು ಹೆಣ್ಣುಗಳ ಕಡೆಗಣ್ಣೊಳು ನೋಡದೆ |
ಧೃಡಚಿತ್ತದಲಿ ಶ್ರೀಹರಿಯ ನಂಬಿದವರಿಗೆ ||೧||

ಪಕ್ಷಪಾತವಿಲ್ಲದನ್ನದಾನಂಗಳು |
ಪೇಕ್ಷೆಯ ಮಾಡದೆ ಗುರುಹಿರಿಯರನು |
ಮೋಕ್ಷವ ಬಯಸುವ ಅನ್ಯಾಯವಳಿಯುತ |
ಲಕ್ಷ್ಮೀ ನಾರಾಯಣನ ಬಿಡದೆ ಧೇನಿಪರಿಗೆ ||೨||

ಪರಹಿತವನು ಮಾಡಿ ಕೆರೆಬಾವಿಗಳ |
ಅರವಟಿಗೆಯ ಸಾಲುಮರವ ಹಾಕಿ ||
ಸಿರಿಪುರದರಸು ಶ್ರೀ ಪುರಂದರವಿಠಲನ |
ಸ್ಥಿರಚಿತ್ತದಲಿ ಬಿಡದೆ ಸ್ಮರಿಸುತಲಿಹರಿಗೆ ||೩||

ಇಂತಹ ಹಾಡುಗಳಲ್ಲಿ ನಾಮಸ್ಮರಣೆ ಬಂದೊಡನೆ ಆಸ್ತಿಕ ಮನೋಭಾವ, ಭಕ್ತಿಪಂಥದ ನಿಲುವು ಎಂದು ಮೂಗುಮುರಿಯದೆ ದಾಸರು ಜೊತೆ ಜೊತೆಗೆ ಹೇಳಿದ ಜೀವನ ಸೂತ್ರಗಳ ಮಹತ್ವವನ್ನು ವಿಚಾರಿಸಬೇಕು. ಒಂದೊಮ್ಮೆ ದಾಸರು ಬರೀ ಭಜನೆ ಮಾಡುತ್ತ ಕೂಡುವವರಾಗಿದ್ದರೆ ಪರಹಿತ ಸಾಲು ಮರ ಮುಂತಾದ ಸಮಾಜಕಾರ್ಯಗಳನ್ನು ಪ್ರಸ್ತಾಪಿಸುತ್ತಿರಲಿಲ್ಲ. 'ಬೆಡಗು ಹೆಣ್ಣುಗಳನ್ನು (ಪರಸ್ತ್ರೀಯರನ್ನು) ಬಯಸಬಾರದು', 'ನುಡಿ ಎರಡಾಗಬಾರದು', 'ಅತಿಕೋಪ ಮಾಡಬಾರದು', 'ಬಡತನ ಬಂದರೂ ಧೃತಿಗೆಡಬಾರದು' ಎಂಬ ಇಲ್ಲಿಯ ಮಾತುಗಳು ದಾಸರ ನೆಲ ಜಲದ ಋಣ ಬದ್ಧತೆಗೆ ಪುರಾವೆಗಳಾಗಿವೆ. ದಾಸರ ಕೆಲವು ಕೀರ್ತನೆಗಳಲ್ಲಿ (ಭಾಗವತ ಪಂಚಮಸ್ಕಂಧದಲ್ಲಿ ವರ್ಣಿಸಿದ) ನರಕಾದಿ ಲೋಕಗಳ ಪ್ರಸ್ತಾಪವಿದೆ. ನಾವು ಅವರ ನಂಬಿಕೆಯನ್ನು ಪ್ರಶ್ನಿಸುವಂತಿಲ್ಲ. ಆದರೆ ಆ 'ನಂಬಿಕೆ'ಯನ್ನು ಯಾವ ಅಗತ್ಯಕ್ಕಾಗಿ ಬಳಸಿಕೊಂಡಿದ್ದಾರೆ ಎಂಬುದನ್ನು ನೋಡಬೇಕು.

ಅನ್ನದಾನವ ಮಾಳ್ಪುದಿಲ್ಲಿ ಮೃ
ಷ್ಟಾನ್ನವ ತಂದು ಮುಂದಿಡುವರು ಅಲ್ಲಿ

ಅನ್ಯಾಯ ನುಡಿಯುವುದಿಲ್ಲಿ ಭಿನ್ನ
ಭಿನ್ನವ ಮಾಡಿ ತಿನ್ನಿಸುವರು ಅಲ್ಲಿ

ಮೋಸವ ಮಾಡುವುದಿಲ್ಲಿ ಸೀಸ
ಕಾಸಿ ಬಾಯೊಳಗೆ ಹೊಯ್ಯುವರಲ್ಲಿ

ವಂಚನೆ ಮಾಡುವುದಿಲ್ಲಿ ಕಾದ
ಹಂಚಿನ ಪುಡಿಯ ತಿನ್ನಿಸುವರು ಅಲ್ಲಿ

ಚಾಡಿಯ ನುಡಿವುದು ಇಲ್ಲಿ ಅದ
ನಾಡಿದ ನಾಲಿಗೆ ಸೀಳುವರಲ್ಲಿ

ಬೇಡಬಂದರೆ ಬಯ್ಯುದಿಲ್ಲಿ ನಿನ್ನ
ಓಡಾಡುವ ಕಾಲು ಕತ್ತರಿಪರಲ್ಲಿ

ಮದ್ದಿಕ್ಕಿ ಕೊಲ್ಲುವುದಿಲ್ಲಿ ಒದ್ದು
ಹದ್ದು ಕಾಗೆಗಳಿಗೆ ಈಯುವರಲ್ಲಿ

ಕ್ಷುದ್ರ ಬುದ್ಧಿಯ ನಡೆಪುದಿಲ್ಲಿ ದೊಡ್ಡ
ಗುದ್ದಲಿ ಬೆನ್ನೊಳು ಎಳೆಯುವರಲ್ಲಿ
(ಎಚ್ಚರದಲಿ ನಡೆಮನವೆ)

-ಪುರಂದರದಾಸರು

ಇಲ್ಲೆಲ್ಲಾ ನರಕದ ದುಃಖಗಳನ್ನು ಹೇಳುವಾಗ ಮಾನವನು ಇಹದ ಬದುಕಿನ ನೈತಿಕ ಬದ್ಧತೆಗೆ ತಪ್ಪಿ ನಡೆಯಬಾರದು ಎಂಬ ಆಶಯವೇ ದಾಸರಿಗೆ ಮುಖ್ಯವಾಗಿದೆ. 'ಅನ್ಯಾಯ ನುಡಿಯಬಾರದು ಮೋಸ ಮಾಡಬಾರದು, ವಂಚನೆ ಮಾಡಬಾರದು, ಚಾಡಿ ಹೇಳಬಾರದು, ಬೇಡಬೆಂದವರನ್ನು ಬೈಯ್ಯಬಾರದು, ಮದ್ದಿಕ್ಕಬಾರದು, ಕೊಲ್ಲಬಾರದು, ಕ್ಷುದ್ರಬುದ್ಧಿ ಮಾಡಬಾರದು' ಮುಂತಾದ ನಮ್ಮ ತಂದೆ, ತಾಯಿ, ಗುರು-ಬಂಧುಗಳು ಹೇಳಬಹುದಾದ ಮಾತುಗಳೇ ಆಗಿರುವುದನ್ನು ಗಮನಿಸಿದಾಗ ದಾಸರಿಗೆ ಇಹದ ನಿಷ್ಠೆಯಿಲ್ಲವೆಂದು ಹೇಳುವುದಾದರೂ ಹೇಗೆ?

ಇಹದ ನಿಷ್ಠೆಯ ವಿಚಾರದಲ್ಲಿ ಅವರು ಇತರ ಯಾವುದೇ ಕಾಲದ ಮಾನವತಾವಾದಿಗಳಿಗಿಂತ ಕಡಿಮೆಯಿಲ್ಲವೆಂಬುದನ್ನು ಗುರುತಿಸದಿದ್ದರೆ ದಾಸರ ಕೃತಿಗಳನ್ನು ಅಪಮೌಲ್ಯೀಕರಿಸಿದಂತಾಗುತ್ತದೆ. ಈ ನೆಲೆಯಲ್ಲಿ "The spirit of their teaching was that all social evils would spring from man's selfishness, and hence if selfishness could be overcome through the

cultivation of devotion to God and disinterestedness(Virakti) in worldly pleasure, all forms of human wikedness would disappear" (Srinivasan G., 1972:46) ಎಂಬ ಕಾಣ್ಕೆ ಉಪಯುಕ್ತವೆನಿಸುತ್ತದೆ.

ಹರಿದಾಸರ ಜೀವನನಿಷ್ಠೆಯನ್ನು ಸಮರ್ಪಕವಾಗಿ ಯಾರೇ ಮೌಲ್ಯಮಾಪನ ಮಾಡಿದರೂ "ನವವೈಜ್ಞಾನಿಕ ಮಾನವತಾವಾದವನ್ನು ಹರಿದಾಸರ ತಲೆಗೆ ಕಟ್ಟಿ ಅವರನ್ನು ದೊಡ್ಡವರನ್ನಾಗಿ ಮಾಡುವುದು ಹರಿದಾಸರ ಹಿರಿಮೆಯನ್ನು ಅಲ್ಲಗಳೆದಂತೆ. ಹರಿದಾಸರ ಕ್ರಾಂತಿ ಧಾರ್ಮಿಕವಾಗಿತ್ತು. ಅದರಲ್ಲಿ ಕೆಲವು ಸಾಮಾಜಿಕ ಅಂಶಗಳು ಇದ್ದವು. ಅವರದು ಭಾಗವತ ಮಾನವತಾವಾದ. ಅಂದು ತನಗೆ ದೊರೆತ ಅನುಕೂಲ ಹಾಗು ಅವಕಾಶಗಳಲ್ಲಿ ಅದು ತನ್ನ ಕಾರ್ಯವನ್ನು ನೆರವೇರಿಸಿತು. ಸಾಮಾಜಿಕ ಸಾಂಸ್ಕೃತಿಕ ಪ್ರಯೋಜನಗಳನ್ನು ನೀಡಿದ ಹರಿದಾಸ ಕೂಟದ ಇತಿಹಾಸದಲ್ಲಿ ಉಜ್ವಲ ಪುಟಗಳಿಗೇನೂ ಕೊರತೆಯಿಲ್ಲ." (ದಿವಾಣಜಿ, ೧೯೭೨:೧೮೯) ಎಂಬ ನಿರ್ಣಯಕ್ಕೆ ಬರಬಹುದು.

ಮಾನವರು ನೆಮ್ಮದಿಯಿಂದ ಬದುಕಬೇಕು ಎಂಬುದೇ ಜಗತ್ತಿನ ಎಲ್ಲ ವಿದ್ಯೆಗಳ ಅಂತಿಮ ಗುರಿಯಾಗಿದೆ. ಎಲ್ಲ ಕಾಲದ ಧಾರ್ಮಿಕ ಸಾಹಿತ್ಯ ಕೃತಿಗಳು ತಮ್ಮ ಸಾಂಪ್ರದಾಯಿಕ ನಂಬಿಕೆಗಳ ವಿಶಿಷ್ಟತೆಯ ಮಧ್ಯೆಯೂ ಸಮಗ್ರ ಮಾನವ ಸಮುದಾಯವನ್ನು ಪ್ರೀತಿ ವಿಶ್ವಾಸಗಳಿಂದ ಕಾಣುವಂತೆ ಕರೆಕೊಟ್ಟಿವೆ. ಹರಿದಾಸ ಸಾಹಿತ್ಯವೂ ಇದಕ್ಕೆ ಹೊರತಲ್ಲ. ಆದರೆ ತಮ್ಮ ಧಾರ್ಮಿಕ ಚೌಕಟ್ಟಿನ ಮಿತಿಯಲ್ಲೇ ಮಾನವಕಲ್ಯಾಣದ ಚಿಂತನೆ ನಡೆಸಿರುವ ಅವರ ಕಾಳಜಿಯ ಪ್ರಾಮಾಣಿಕತೆಯನ್ನು ಮರೆಯದೆ ಗುರುತಿಸಬೇಕಾಗಿದೆ.

**ಕೊನೆಟಿಪ್ಪಣಿಗಳು**

೧. ಈ ವ್ಯಾಖ್ಯೆಗಳನ್ನು ಡಾ.ಸಿ.ಎನ್.ರಾಮಚಂದ್ರನ್ ಅವರ 'ಸಾಹಿತ್ಯ ವಿಮರ್ಶೆ' ಪುಸ್ತಕದ ಆಧಾರದಿಂದ ರೂಪಿಸಿಕೊಳ್ಳಲಾಗಿದೆ.

೨. ಅವಸರ್ಪಿಣೀ ಕಾಲವು ಅತ್ತಿಮಬ್ಬೆಯ ಕಲಿತನ-ಕಸವರ ಗಲಿತನಗಳಿಂದ ಉತ್ಸರ್ಪಿಣೀ ಕಾಲವಾಯಿತೆಂದು ಅಜಿತಪುರಾಣದಲ್ಲಿ ರನ್ನನ ಅಂಬೋಣ.

೩. ಕನಕದಾಸರ ಈ ಮಾತುಗಳು ನಿಷ್ಠುರದಂತೆ ಕಂಡರೂ ಸತ್ಯವಾಗಿವೆ. ಆದರೆ ಈ ಸತ್ಯವು ಭಾಗವತದ ಋಣ ಮತ್ತು ವೃದ್ಧಿಯ ರೂಪದ್ದು. ನೋಡಿ (ಭಾಗವತ : ೧೨ನೇ ಸ್ಕಂಧ: ೨-೩ನೇ ಅಧ್ಯಾಯಗಳು).

೪. ಪುರಂದರದಾಸರಲ್ಲೂ ಇಂತಹ ಕೆಲವು ರಚನೆಗಳಿವೆ.

೫. "ಕೀರ್ತನ, ಸುಳಾದಿ ಹಾಗೂ ಉಗಾಭೋಗಗಳಲ್ಲಿ ದ್ವೈತದರ್ಶನದ ನವಪ್ರಮೇಯಗಳ ನಿರೂಪಣೆಗೆ ಸಮಾನ ಪ್ರಾಶಸ್ತ್ಯ ದೊರೆತಿಲ್ಲ. 'ಹರಿಸರ್ವೋತ್ತಮತ್ವ' 'ಚೇತನರಾಶಿಗಳು ಶ್ರೀಹರಿಯ ಅಧೀನ' ಹಾಗೂ 'ನಿರ್ಮಲ

ಭಕ್ತಿ ಮುಕ್ತಿಗೆ ಸಾಧನ' ಈ ಮೂರೂ ಪ್ರಮೇಯಗಳು ಪ್ರಮುಖವಾಗಿ ಕಾಣಿಸಿಕೊಳ್ಳುವಂತೆ 'ವಿಶ್ವಸತ್ಯತ್ವ' 'ಪಂಚಭೇದ' 'ಮುಕ್ತಿ' ಈ ಪ್ರಮೇಯಗಳ ವಿವರಣೆ ವಿಶೇಷವಾಗಿ ಕಾಣಿಸುವುದಿಲ್ಲ"(ಗುಡಿ.ಆರ್ .ಜಿ: ೧೯೯೪:೩)

ಒಂದೊಮ್ಮೆ ಮಧ್ವಮತ ಪ್ರಸಾರವಷ್ಟೇ ದಾಸರ ಮುಖ್ಯ ಉದ್ದೇಶವಾಗಿದ್ದರೆ ನವ ಪ್ರಮೇಯಗಳ ಪ್ರತಿಪಾದನೆಗೆ ಅವರು ಸಮಾನ ಗಮನಹರಿಸುತ್ತಿದ್ದರೇ ಹೊರತು ಜೀವನ ಪ್ರೇಮದ ಪ್ರಸಾರಕ್ಕೆ ಇಷ್ಟೊಂದು ಕಾಳಜಿ ವಹಿಸುತ್ತಿರಲಿಲ್ಲವೆನಿಸುತ್ತದೆ.

ಅಧ್ಯಾಯ ಎಂಟು

# ಶೋಧನೆ

೮.೧. ಭಾಗವತ ದರ್ಶನ

೮.೨. ಅಧ್ಯಯನದ ಫಲಿತಗಳು

೮

# ಶೋಧನೆ

## ೮.೧. ಭಾಗವತ ದರ್ಶನ

ಹರಿದಾಸರ ಎಲ್ಲ ಭಾಗವತಾಧಾರಿತ ಕೃತಿಗಳನ್ನು ಒಟ್ಟಿಗೆ ಚಿಂತಿಸಿದಾಗ ಅವರ ಆಶಯಗಳ ಮೂರ್ತರೂಪವಾಗಿ 'ಭಾಗವತ' ಕಂಡುಬರುತ್ತಾನೆ. ಭಾಗವತ ಎಂಬುದು ವ್ಯಕ್ತಿಯಲ್ಲ; ಪದವಿಯಲ್ಲ- ಇದು ಮಾನವನ ವ್ಯಕ್ತಿತ್ವದ ಘನತೆಯನ್ನು ಹೆಚ್ಚಿಸಬಲ್ಲ ಪ್ರವೃತ್ತಿ. ಹರಿಭಕ್ತಿಯ ಪರಿಪ್ರೇಕ್ಷ್ಯದಲ್ಲಿ ವಿನ್ಯಾಸಗೊಂಡ ಮಾನವನ ಸಾತ್ವಿಕ ವರ್ತನೆಗಳ ಮೊತ್ತವನ್ನೇ 'ಭಾಗವತ' ಎಂಬ ಪರಿಭಾಷೆಯಿಂದ ಗುರುತಿಸುವುದು ಕಂಡುಬರುತ್ತದೆ.

ಭಾಗವತಮನೋಧರ್ಮದ ಮೂಲಕ ವ್ಯಕ್ತಿಯು ತನ್ನ ಅಹಂಕಾರ ಮಮಕಾರಗಳನ್ನು ಮೀರಲು ಸಾಧ್ಯವೆಂದು ನಂಬಿದ ಪುರಂದರದಾಸರು

ಹೊಸವಸ್ತ್ರ ಉಡುವಲ್ಲಿ ಹರಿಯ ಬೆಳ್ಪುಡೆಯೆನ್ನಿ
ಶಶಿಮುಖಿಯರ ಕೂಟ ಸೊಬಗ ಗೋವಳಗೆನ್ನಿ |
ಆಟಪಾಟಗಳೆಲ್ಲ ಅಂತರ್ಯಾಮಿಗೆನ್ನಿ
ನೋಟ ಬೇಟಗಳೆಲ್ಲ ಕಪಟ ನಾಟಕಗೆನ್ನಿ ||



ಎಂಬ ಮಾತುಗಳಲ್ಲಿ ಶ್ರೀಮದ್ಭಾಗವತದ ಆಶಯವಾದ ಬಿಂಬೋಪಾಸನೆಯನ್ನು ವ್ಯಾಖ್ಯಾನಿಸುವ ಮೂಲಕ ವೃದ್ಧಿಸಿದ್ದಾರೆ. ಶ್ರುತಿಗಳಿಗೂ ನಿಲುಕದ ಶ್ರೀಹರಿಯು ಬಿಂಬೋಪಾಸಕರ ಹೃದಯದಲ್ಲಿ ನೆಲೆನಿಂತಾಗ

ಏಕಾದಶಿಯ ಜಾಗರದಲ್ಲಿ
ಲೋಕಪಾವನ ಭಾಗವತರಲ್ಲಿ
(ನೀನಿರುಳೆಲ್ಲಿದ್ದೆ ಹೇಳಯ್ಯ)

ಎಂದು ದಾಸರು ಕೃಷ್ಣನನ್ನು ಭಾಗವತರಲ್ಲಿ ಹುಡುಕಿದ್ದಾರೆ. ಹೀಗೆ ಇಲ್ಲೇ ವೈಕುಂಠವನ್ನು ಕಂಡ 'ಜೀವನ್ಮುಕ್ತ'ನಿಗೆ ಯಾವುದೇ ಚಿಂತೆ-ಸಂತಾಪಗಳಿಲ್ಲದಂತಾಗುತ್ತವೆ. ಆದ್ದರಿಂದಲೇ

ಸೂತ್ರದಿಂ ಜಗವ ಮೋಹಿಸುವಾತನ
ಸ್ತೋತ್ರದಿಂ ಪಾಡಿ ಹಿಗ್ಗುವ ಭಾಗವತರಿಗೆ ||
(ದುರಿತವೆತ್ತಣದೊ ದುರ್ಗತಿಯೆಲ್ಲಿಹುದೋ)

ಎಂದು ಪ್ರಶ್ನಿಸಿದ್ದಾರೆ. ಭಕ್ತಿಯ ಪಥವು ನೀತಿಯ ಪಥವೂ ಆಗಿರಬೇಕು. ಹಾಗಾದಲ್ಲಿ ಬದುಕಿನ ಎಲ್ಲ ತಲ್ಲಣಗಳನ್ನೂ ಮೀರುವ ಧೈರ್ಯ-ಶೌರ್ಯಗಳು ಲಭಿಸುತ್ತವೆ. ಆದ್ದರಿಂದ

ಶೂರ ನೀನಾಗೊ ಭಾಗವತ ನೀನಾಗೋ
ಪರಮ ಪುಣ್ಯಾತ್ಮ ನೀನಾಗೊ ಆತ್ಮಾ ||

ಎಂದು ಕರೆನೀಡಿದ್ದಾರೆ. ಭಾಗವತನ ಸಹವಾಸಬೇಕೆಂದು ವ್ಯಾಸರಾಯರೂ ಅಪೇಕ್ಷಿಸಿದ್ದಾರೆ.

ಅಚ್ಯುತಾಂಘ್ರಿನಿಷ್ಠರ ಯದೃಚ್ಛಾಲಾಭ ತುಷ್ಟರ
ನಿಶ್ಚಯ ಜ್ಞಾನವಂತರ ಅಚ್ಚಭಾಗವತರ ನಿತ್ಯ
(ಸಂಗವಾಗಲಿ ಸಾಧುಸಂಗವಾಗಲಿ)

ಹೀಗೆ ಹರಿದಾಸರ ವಿವಿಧ ಕೃತಿಗಳಲ್ಲಿ ಪ್ರತಿಪಾದಿತವಾದ ಭಾಗವತ ಸ್ಥಿತಿಯ ಎಲ್ಲ ಲಕ್ಷಣಗಳನ್ನು ಏಕಶಿಲ್ಪದಲ್ಲಿ ಕಾಣಲು ಜಗನ್ನಾಥದಾಸರ ಈ ಕೆಳಗಿನ ಕೀರ್ತನೆ ಸಹಾಯಕವಾಗಿದೆ.

ರಂಗಾ ನಿನ್ನ ಕೊಂಡಾಡುವ ಮಂಗಳಾತ್ಮರ |
ಸಂಗಸುಖವಿತ್ತು ಕಾಯೋ ಕರುಣಾಸಾಗರ ||ಪ||

ಅರಿಯರೋ ನೀನಲ್ಲದೆ ಮತ್ತನ್ಯದೈವರ |
ಮರೆಯರೋ ನೀ ಮಾಡಿದ ಅನಿಮಿತ್ತ ಉಪಕಾರ ||
ತೊರೆಯರೋ ನಿನ್ನಂಘ್ರಿ ಸೇವೆ ಪ್ರತಿವಾಸರ |
ಅರಿಯರೊ ಪರತತ್ವವಲ್ಲದೆ ಇತರ ವಿಚಾರ ||೧||

ಮೂಕ ಬಧಿರರಂತಿಪ್ಪರೋ ನೋಳ್ಪ ಜನಕೆ |
ಕಾಕುಯುಕುತಿಗಳನು ತಾರರೊ ಮನಕೆ ||

ಸ್ವೀಕರಿಸರನರ್ಪಿತ ಒಂದು ಕಾಲಕೇ |
ಆ ಕೈವಲ್ಯ ಭೋಗ ಸುಖ ಅವರಿಗೆ ಬೇಕೇ || ೨ ||

ಜಯಾಜಯ ಲಾಭಾಲಾಭ ಮಾನಾಪಮಾನ |
ಭಯಾಭಯ ಸುಖ ದುಃಖ ಲೋಷ್ಟಕಾಂಚನ ||
ಪ್ರಿಯಾಪ್ರಿಯ ನಿಂದಾ ನಿಂದ ಸ್ತುತಿಗಳನುದಿನ |
ಶ್ರೀಯುರಸ ಚಿಂತಿಸುವರೊ ನಿನ್ನ ಅಧೀನ || ೩ ||

ಈಶಿತವ್ಯರೆಂಬೋರೊ ಏಕಾಂತ ಭಕ್ತರು |
ದೇಶ ಕಾಲೋಚಿತ ಧರ್ಮ ಕರ್ಮಾಸಕ್ತರು ||
ಆಶಾಕ್ರೋಧ ಲೋಭ ಮೋಹ ಪಾಶ ಮುಕ್ತರು |
ಈ ಸುಜನರೇ ಶಾಪಾನುಗ್ರಹಶಕ್ತರು || ೪ ||

ಕಂಡಕಂಡಲ್ಲಿ ವಿಶ್ವರೂಪ ಕಾಂಬೋರೊ |
ಉಂಡು ಉಣಿಸಿದ್ದೆಲ್ಲಾ ನಿನ್ನಯಜ್ಞ ವೆಂಬೋರೊ ||
ಬಂಡುಣಿಯಂದದಿ ನಾಮಾಮೃತವ ಸವಿವರೊ |
ಹೆಂಡಿರು ಮಕ್ಕಳು ನಿನ್ನ ತೊಂಡರೆಂಬೋರೊ || ೫ ||

ಬಿಡರೋ ತಮ್ಮ ಸ್ವಧರ್ಮಗಳೇನು ಬಂದರು |
ಬಡರೋದೈನ್ಯ ಒಬ್ಬರಿಗೂ ಲೋಕವಂದ್ಯರು ||
ಪಿಡಿಯರೋ ನಿನ್ನ ದ್ವೇಷಿಗಳಿಂದೇನು ಬಂದರು |
ಕೊಡುವರೋ ಬೇಡಿದಿಷ್ಟಾರ್ಥ ನಿತ್ಯಾನಂದರು || ೬ ||

ನಗುವರೋ ರೋದಿಸುವರೋ ನಾಟ್ಯವಾಡುವರೋ |
ಬಗೆಯರೊ ಬಡತನ ಭಾಗ್ಯ ಭಾಗವತರು ||
ತೆಗೆಯರೋ ನಿನ್ನಲ್ಲಿ ಮನವನೊಮ್ಮೆಯಾದರು |
ಜಗನ್ನಾಥ ವಿಠ್ಠಲ ನಿನ್ನವರೇನು ಧನ್ಯರೋ || ೭ ||

ಈ ಕೀರ್ತನೆಯ ಒಂದೊಂದು ಮಾತಿಗೂ ಶ್ರೀಮದ್ಭಾಗವತದ ಹತ್ತಾರು ಶ್ಲೋಕಗಳನ್ನು ತಾಳೆ ನೋಡಲು ಸಾಧ್ಯವಿದೆ.

ಸಾಧಾರಣವಾಗಿ ಭಾವುಕತೆ ಇರುವಲ್ಲಿ ವಿವೇಕ ಮರೆಯಾಗುವುದು. ಆದರೆ ದಾಸರ 'ಭಾಗವತ' ಪರಿಕಲ್ಪನೆಯಲ್ಲಿ ವಿವೇಕ ಜಾಗೃತವಾಗಿದೆ. ಅದಕ್ಕೆ ಒಂದು ನಿದರ್ಶನವನ್ನು ನೋಡಬಹುದು.

ಭಾಗವತನೆಂದು ಕರೆಸಿಕೊಂಬುದೇ |
ಯೋಗಯೋಗ್ಯವೆ ಜಗದೊಳಗೆಲ್ಲ |
ಇದು ನಗೆಗೇಡಲ್ಲದೆ ಯೋಗಯೋಗ್ಯವೆ ನಮ್ಮ |

ಪುರಂದರ ವಿಠಲನ ದಾಸಾನುದಾಸರ ದಾಸನೆನಿಸದಲೆ
ಭಾಗವತನೆಂದು ಕರೆಸಿಕೊಂಬುದು?

ಅಂದರೆ 'ಭಾಗವತ' ಸ್ಥಿತಿಯು ಹುಟ್ಟಿನಿಂದ, ಜಾತಿಯಿಂದ, ಬಾಹ್ಯದೀಕ್ಷೆಯಿಂದ ಬರುವಂತಹ 'ಆರೋಪಿತ ಸ್ಥಾನಮಾನ'(ascribed status) ಅಲ್ಲ. ಅದು ವ್ಯಕ್ತಿಯ ಅನುಷ್ಠಾನದ ಮೂಲಕ ಅಂತಸ್ಥವಾಗಬೇಕಾದ 'ಸಾಧಿತ ಸ್ಥಾನಮಾನ'(achieved status) ಎಂಬ ಎಚ್ಚರವಿಲ್ಲದಿದ್ದರೆ 'ಭಾಗವತ' ಎಂಬ ಪದವು ದುರುಪಯೋಗವಾದೀತೆಂಬ ಆತಂಕ ಕನಕದಾಸರಲ್ಲೂ ಕಂಡುಬಂದಿದೆ.

ತೀರ್ಥ ಪಿಡಿದವರೆಲ್ಲ ತಿರುನಾಮಧಾರಿಗಳೆ ಜನ್ಮ
ಸಾರ್ಥಕವಿಲ್ಲದವರೆಲ್ಲ ಭಾಗವತರೆ

ಎಂದು ಖಾರವಾಗಿ ಪ್ರಶ್ನಿಸುವಲ್ಲಿ ಮೇಲಿನ ಅಭಿಪ್ರಾಯವು ದೃಢವಾಗುತ್ತದೆ.

ಯಾವುದೇ ಕವಿ ತನ್ನ ಪ್ರತಿಭಾಚಾತುರ್ಯದಿಂದ ಆದರ್ಶ ಮಾನವ ಲಕ್ಷಣಗಳನ್ನು ಕಾವ್ಯಮಯವಾಗಿ ಚಿತ್ರಿಸಿ ಆನಂದಪಡಬಹುದು. ಆದರೆ ಅವನು ವರ್ಣಿಸಿದ ಲಕ್ಷಣಗಳು ಸ್ವತಃ ಅವನಲ್ಲಿವೆಯೆ? ಎಂದು ಕೇಳಲು ಅವಕಾಶವಿಲ್ಲ. ಬಹುಪಾಲು ಸಂದರ್ಭಗಳಲ್ಲಿ ಕವಿ ಬೇರೆ; ಅವನ ಕಾವ್ಯಬೇರೆ.

ಆದರೆ ಈ ಮಾತು ಹರಿದಾಸರಿಗೆ ಅನ್ವಯಿಸುವುದಿಲ್ಲ. ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಪುರಂದರದಾಸರು ಹಾಗೂ ಕನಕದಾಸರು-ಈ ಐವರು ಮಹನೀಯರು ಸ್ವತಃ ಭಾಗವತ ಸ್ಥಿತಿಯನ್ನು ತಲುಪಿದವರು. ಪ್ರಸ್ತುತ ಮಹಾಪ್ರಬಂಧಗಲ್ಲಿ ಚರ್ಚಿಸಿದ ಎಲ್ಲ ಜೀವನ ಮೌಲ್ಯಗಳನ್ನು ತಮ್ಮ ಬದುಕಿನಲ್ಲಿ ಪ್ರತ್ಯಕ್ಷವಾಗಿ ಆಚರಿಸಿ ತೋರಿದವರು ಎಂಬುದು ಇತಿಹಾಸ ದಾಖಲಿಸಿದ ವಾಸ್ತವವಾಗಿದೆ. ಹೀಗಾಗಿ ಅವರು ತಮ್ಮ 'ಭಾಗವತ ದರ್ಶನ'ಕ್ಕೆ ಸ್ವತಃ 'ನಿದರ್ಶನ'ರಾಗಿದ್ದುದನ್ನು ಗುರುತಿಸಬಹುದಾಗಿದೆ.

ಆದ್ದರಿಂದಲೇ ಜನರು ಅವರನ್ನು ಶ್ರೀಮದ್ಭಾಗವತ ಮಹಾಪುರಾಣದ 'ಪರಮ ಭಾಗವತ'ರ ಅವತಾರರೆಂದೇ ಭಾವಿಸಿದ್ದಾರೆ.

"ವರಧ್ರುವನ ಅವತಾರ ಶ್ರೀಪಾದರಾಯರು
ಸಿರಿರಂಗವಿಠಲನ್ನ ಉಪಾಸಕರು
ತರಳ ಪ್ರಹ್ಲಾದನೆ ಜನಿಸಿದ ಶೇಷಾಂಶ
ಗುರುವ್ಯಾಸರಾಯರೆ ಶ್ರೀಕೃಷ್ಣನ ಉಪಾಸಕರು
ಸುರಮುನಿ ಅವತಾರ ನಾರದರೆ
ಸಿರಿಪುರಂದರ ವಿಠಲನುಪಾಸಕರು"

* * *

(ಗುರುಮಧ್ವಪತಿದಾಸರ ಉಗಾಭೋಗ)

ವ್ಯಾಸರಾಯರನ್ನು ಮಹಾಭಾಗವತನಾದ ಪ್ರಹ್ಲಾದನ ಅವತಾರವೆಂದು ಪುರಂದರದಾಸರು ಹಾಗೂ ಕನಕದಾಸರು ಉಲ್ಲೇಖಿಸಿದ್ದಾರೆ. ಇದರಂತೆಯೇ ವಾದಿರಾಜರನ್ನು ರುಕ್ಮಿಣೀಪತ್ರತಂದ ಬ್ರಹ್ಮಜ್ಞಾನಿಯೆಂದೂ, ಭಾವಿಸಮೀರರೆಂದೂ; ಕನಕದಾಸರನ್ನು ವಿದುರನ-ಯಮಧರ್ಮನ ಅವತಾರವೆಂದೂ ಗೌರವಿಸಲಾಗುತ್ತದೆ.

ಭಾಗವತ ಧರ್ಮಗಳನ್ನು ಅರಿತು, ಆಚರಿಸಿ, ಆಸಕ್ತರಿಗೆ ಬೋಧಿಸಿ ಹರಿದಾಸ ಪರಂಪರೆಗೆ ಇಂದಿಗೂ ಪ್ರೇರಕ ಶಕ್ತಿಯಾಗಿರುವ ರಾಘವೇಂದ್ರರನ್ನು ಉತ್ತರಕಾಲೀನರು 'ಪರಮಭಾಗವತ'ರೆಂದು ಮನ್ನಿಸಿದ್ದಾರೆ. 'ಪ್ರಹ್ಲಾದನೇ ವ್ಯಾಸಮುನಿಯೇ ರಾಘವೇಂದ್ರ' ರೆಂದು ವಿಜಯದಾಸರು ಉದ್ಗರಿಸಿದ್ದಾರೆ.

ಇಂತಹ ಅವತಾರ ಪರಿಕಲ್ಪನೆಗಳನ್ನು ಭಾವಾವೇಶದಿಂದ ಸಮರ್ಥಿಸುವ ಅಥವಾ ಖಂಡಿಸುವ ನಿಲುವಿಗಿಂತ ಮನುಷ್ಯನ ಇಂತಹ ನಂಬಿಕೆಗಳ ಆಶಯವೇನು ಎಂಬ ಬಗ್ಗೆ ಆಲೋಚಿಸುವುದು ಉಪಯುಕ್ತವೆನಿಸುತ್ತದೆ. ಇದು ಹರಿದಾಸರ ಸಂದೇಶಗಳ ಬಗ್ಗೆ ಜನತೆಗೆ ಇರುವ ಆಪ್ತಭಾವದ ದ್ಯೋತಕವೆಂದು ಭಾವಿಸಬಹುದಾಗಿದೆ. ವ್ಯಕ್ತಿಯು ಇತರರಿಂದ 'ಹರಿದಾಸ', 'ಭಾಗವತ' ಎನಿಸಿಕೊಳ್ಳುವುದಕ್ಕಿಂತ ಸ್ವತಃ 'ಹರಿದಾಸ', 'ಭಾಗವತ' ಆಗಬೇಕು. ಇದು ಆಗುವ ಕ್ರಿಯೆಯೇ ಹೊರತು ಕೇವಲ ಆಡುವ ಹಾಡುವ ಮಾತಲ್ಲ ಎಂಬ ಕಾಳಜಿವಹಿಸಬೇಕು. ದೈವಭಕ್ತಿ, ಪುರಾಣಶ್ರವಣ, ಭಜನೆ ಮುಂತಾದ ಯಾವುದೇ ಕ್ರಿಯೆಗಳು ಕೇವಲ ತೋರಿಕೆಯವಾಗದೆ ವ್ಯಕ್ತಿಯ ಬದುಕಿನಲ್ಲಿ ಉನ್ನತ ಮಾನವೀಯ ಮೌಲ್ಯಗಳನ್ನು ತುಂಬಬೇಕು. ಆ ಮೂಲಕ ಬದುಕು ಹಸನಾಗಬೇಕೆಂಬುದೇ ಹರಿದಾಸರ ಆಶಯವಾಗಿದೆ.

## ೮.೨. ಅಧ್ಯಯನದ ಫಲಿತಗಳು

ಮನುಷ್ಯ ನೆಮ್ಮದಿಯಿಂದ ಬಾಳುವಂತಾಗಲು ಏನು ಮಾಡಬಹುದು ಎಂಬುದು ಎಲ್ಲ ಕಾಲದ ಮಾನವತಾವಾದಿಗಳು ಹಾಕಿಕೊಂಡ ಮೂಲಭೂತ ಪ್ರಶ್ನೆ. ಈ ಪ್ರಶ್ನೆ ಯಾರನ್ನು ಕಾಡುವುದಿಲ್ಲವೋ ಅವನು ಚಿಂತಕನಾಗಿ ಬೆಳೆಯಲು ಸಾಧ್ಯವಿಲ್ಲ. ಎಲ್ಲ ಚಿಂತಕರ ಉದ್ದೇಶ ಒಂದೇ ಆಗಿದ್ದರೂ ಆಲೋಚನಾ ವಿಧಾನ ಏಕರೂಪದಲ್ಲಿ ಇರುವುದಿಲ್ಲ; ಮತ್ತು ಇರಬೇಕಾಗಿಲ್ಲ. ಹೀಗೆ ತಿಳುವಳಿಕೆಯ ಭಿನ್ನತೆಯ ಸಂಕೀರ್ಣ ಸನ್ನಿವೇಶದಲ್ಲೇ ಭಾರತದಂತಹ ಬಹುರೂಪಿ ಸಂಸ್ಕೃತಿಯ ದೇಶದಲ್ಲಿ ನಡೆದ ಚಿಂತನೆಗಳನ್ನು ಸಮಕಾಲೀನ ಅಗತ್ಯಗಳಿಗೆ ಬಳಸಿಕೊಳ್ಳುವಾಗ ಕೆಲವು ತೊಡಕುಗಳು ಎದುರಾಗುತ್ತವೆ.

ಎಲ್ಲರ ನಡುವೆ ಎಲ್ಲರಂತೆಯೇ ಬಾಳುತ್ತಿರುವ ಒಬ್ಬ ವ್ಯಕ್ತಿಯ ಆಲೋಚನಾ ವಿಧಾನ ಮಾತ್ರ ಎಲ್ಲರಂತೆ ಇರದೆ ಜಗತ್ತನ್ನು ಕುರಿತ ಅವನ 'ಪರಿಕಲ್ಪನೆ' ಹಾಗೂ ಅದನ್ನು ವಿವರಿಸಲು ಬಳಸುವ ಪಾರಿಭಾಷಿಕ ಪದಗಳ ನೆಲೆಯಲ್ಲಿ ಅವನು ಭಿನ್ನನಾಗುತ್ತಾನೆ. ತನಗೆ ಪರಿಚಿತವಾದ ಪರಿಕಲ್ಪನೆ, ಪರಿಭಾಷೆಗಳ ಮೂಲಕವೇ ಜೀವನವನ್ನು ಅರ್ಥೈಸುವ ಅವನ ಚಿಂತನೆಗಳನ್ನು ವಿಮರ್ಶಕರು ತಾಳ್ಮೆಯಿಂದ ಸಮರ್ಪಕವಾಗಿ ಗ್ರಹಿಸದಿದ್ದರೆ, ಅಸ್ವಾರ್ಥ, ಅಪಾರ್ಥಗಳ ಮೂಲಕ ಅಪಮೌಲ್ಯೀಕರಣಗೊಳಿಸುವ

ಅಪಾಯಗಳಿವೆ. ಈ ಸೂಕ್ಷ್ಮಗಳ ಬಗ್ಗೆ ಎಚ್ಚರಿಕೆ ಅಗತ್ಯವೆಂಬ ಒಂದು ಸೂತ್ರವನ್ನು ರೂಪಿಸಿಕೊಳ್ಳುವ ಅನಿವಾರ್ಯತೆಯಿದೆ- ಎಂಬುದು ಪ್ರಸ್ತುತ ಅಧ್ಯಯನದಿಂದ ಹೊರಹೊಮ್ಮಿದ ಮುಖ್ಯ ವಿಚಾರವಾಗಿದೆ.

ಹರಿದಾಸರ ಭಾಗವತ ಕೃತಿಗಳ ಋಣ ಮತ್ತು ವೃದ್ಧಿಯ ಸ್ವರೂಪವನ್ನು ತಿಳಿಯುವುದಕ್ಕಾಗಿ ಆರಂಭಿಸಿದ ಈ ಸಂಶೋಧನೆಯಿಂದ ಇದುವರೆಗೆ ನಡೆದ ಅಧ್ಯಯನಗಳಿಗಿಂತ ಭಿನ್ನವಾದ ಹಾದಿಯನ್ನು ಹುಡುಕಿಕೊಳ್ಳಲು ಸಾಧ್ಯವಾಯಿತು. ಆಧುನಿಕವಾದ 'ಋಣ ಮತ್ತು ವೃದ್ಧಿ'ಯ ಪರಿಕಲ್ಪನೆಯನ್ನು ಇತರ ವಿಮರ್ಶಾ ಪರಿಕಲ್ಪನೆಗಳೊಂದಿಗೆ ಪರಿಶೀಲಿಸಿ ಇದರ ಸ್ವರೂಪ ಹಾಗೂ ಉಪಯುಕ್ತತೆಯನ್ನು ಗುರುತಿಸಿ ಈ ದೇಶೀಯ ಪರಿಕಲ್ಪನೆಗೆ ವಿವಿಧ ಗ್ರಂಥಗಳ ಸಹಾಯದಿಂದ ಅಧ್ಯಯನ ವಿಧಾನಗಳನ್ನು ರೂಪಿಸಲಾಯಿತು. ಅವುಗಳನ್ನು ಹೆಸರಿಸಿ, ವರ್ಗೀಕರಿಸಿ, ದಾಸರ ಕೃತಿಗಳಿಗೆ ಅನ್ವಯಿಸಿ ಹರಿದಾಸ ಸಾಹಿತ್ಯ ವಿಮರ್ಶೆಯಲ್ಲಿ ಇದುವರೆಗೆ ಹೆಚ್ಚು ಚರ್ಚಿತವಾಗದ ಕಥನ, ಸಂಕಥನ ಹಾಗೂ ತತ್ವ ಪ್ರತಿಪಾದಕ ಕೃತಿಗಳನ್ನೂ ವಿವೇಚಿಸಲಾಯಿತು.

ಕಥನ-ಸಂಕಥನಗಳ ಹಂದರದಲ್ಲಿ ನಿರೂಪಿತವಾದ ತತ್ವಗಳ ತಿಳುವಳಿಕೆಯ ಮೂಲಕ ಹರಿದಾಸರ ಮೌಲ್ಯ ಪ್ರಜ್ಞೆಯನ್ನು ಹೆಚ್ಚು ಖಚಿತವಾಗಿ ಅರ್ಥಮಾಡಿಕೊಳ್ಳಲು; ಹಳೆಯ ತಲೆಮಾರಿನ ವಿದ್ವಾಂಸರು ತಲುಪಿದ ನಿರ್ಣಯಗಳಿಗೆ ಸೂಕ್ತವಾದ ಕಾರಣ ಸಹಿತ ವಿವರಣೆ ನೀಡಲು ಅನುಕೂಲವಾಯಿತೆಂಬ ಈ ಅಧ್ಯಯನದ ಉಪಯುಕ್ತತೆಯಾಗಿದೆ. ಇದೇ ವಿಧಾನಗಳನ್ನು ದ್ವಿತೀಯ ಘಟ್ಟದ ಹರಿದಾಸ ಸಾಹಿತ್ಯಕ್ಕೂ ಅನ್ವಯಿಸಿ ವಿಶ್ಲೇಷಿಸಿದರೆ ದಾಸರ ಕೃತಿಗಳ ಬಗೆಗಿನ ನಮ್ಮ ತಿಳುವಳಿಕೆ ಮತ್ತಷ್ಟು ಸ್ಪಷ್ಟವಾಗುವುದೆನಿಸುತ್ತದೆ.

ಹರಿದಾಸರ ಜೀವನ ದೃಷ್ಟಿಯು ಮಾನವ ಪರವಾದುದು. ಅದು ಇಹದ ಬದುಕನ್ನು, ಸಂಸಾರವನ್ನು, ದೇಹವನ್ನು, ಮನೆ-ಮಡದಿ-ಮಕ್ಕಳನ್ನು ನಿರಾಕರಿಸುವಂತೆ ಕಂಡುಬಂದರೂ ವಾಸ್ತವ ಹಾಗಿಲ್ಲ. ದಾಸರ ಮಾತಿನ ರೀತಿ ಮತ್ತು ಪರಿಭಾಷೆಗಳನ್ನು ಸರಿಯಾದ ಅರ್ಥದಲ್ಲಿ ಗ್ರಹಿಸಿದರೆ, ಅವರ ಆಲೋಚನಾ ಕ್ರಮದ ಜಾಡನ್ನೇ ಹಿಡಿದು ಸಾಗಿದರೆ ಅವರ ಜೀವನ ದೃಷ್ಟಿಯನ್ನು ಯಥಾರ್ಥವಾಗಿ ತಿಳಿಯಬಹುದೆಂಬುದು ಸ್ಪಷ್ಟವಾಗಿದೆ.

ಈ ಹಿನ್ನೆಲೆಯಲ್ಲಿ ಹೇಳಬಹುದಾದ ಮಾತೆಂದರೆ : ಅನವಶ್ಯಕ ಸ್ಪರ್ಧೆ, ಆತಂಕ, ಅರಕ್ಷಿತ ಭಾವಗಳ ಮಧ್ಯೆ ಮಾನವ ಸಂಬಂಧಗಳು ಶಿಥಿಲಗೊಳ್ಳುತ್ತಿದ್ದರೂ ಆಡಂಬರದ ಬದುಕಿಗಾಗಿ ಹಪಹಪಿಸುತ್ತಿರುವ ಇಂದಿನ ತಲೆಮಾರಿನ ಸಮಸ್ಯೆಗಳಿಗೆ ಹರಿದಾಸರು ಕಂಡುಕೊಂಡ ಆತಂಕರಹಿತ ಸರಳ ಸಹಿಷ್ಣು ಜೀವನ ವಿಧಾನಗಳು, ಪರಿಹಾರ ಸೂಚಿಸಬಲ್ಲವು, ಇಲ್ಲಿನ ಬದುಕನ್ನು ತಲ್ಲಣಗಳನ್ನು ಸಹನೀಯವಾಗಿಸಿಕೊಳ್ಳಲು ಸಹಾಯಕವಾಗಬಲ್ಲವು. ಬದುಕಿನ ಏಳು ಬೀಳುಗಳಿಗೆ ಜಗ್ಗದ-ಕುಗ್ಗದ ನಿರಂತರ ಜೀವನೋತ್ಸಾಹ ತುಂಬಬಲ್ಲವು.

# ಅನುಬಂಧಗಳು

೧. ಶ್ರೀಮದ್ಭಾಗವತ ವಸ್ತು

೨. ಹರಿದಾಸರ ಭಾಗವತ ಕೃತಿಗಳು

೩. ಕಂಚೇಲೋಪಾಖ್ಯಾನದಲ್ಲಿ ಋಣ ಮತ್ತು ವೃದ್ಧಿ ಮಹಿಳಾ ಪಠ್ಯ

೪. ಆಕರ ಸೂಚಿ

೧

# ಶ್ರೀಮದ್ಭಾಗವತದ ವಸ್ತು

**ಪ್ರಥಮ ಸ್ಕಂಧ**

ಶ್ರೀಮದ್ಭಾಗವತ ಪುರಾಣವು ನೈಮಿಷಾರಣ್ಯದಲ್ಲಿ ಸೂತರು ಹಾಗೂ ಶೌನಕಾದಿ ಋಷಿಗಳ ಸಂವಾದ ರೂಪದಲ್ಲಿ ಆರಂಭವಾಗುತ್ತದೆ. ಮಾನವನ ಶ್ರೇಯಸ್ಸಾಧನ ಯಾವುದು? ಅಂತರ್ಯಾಮಿಯ ತೃಪ್ತಿ ಹೇಗೆ? ಕೃಷ್ಣಾವತಾರದ ಉದ್ದೇಶವೇನು? ಶ್ರೀಕೃಷ್ಣನು ತೋರಿದ ಮಹಿಮೆಗಳಾವುವು? ಶ್ರೀಹರಿಯ ಇತರ ಅವತಾರಗಳಾವುವು? ಕೃಷ್ಣಾವತಾರ ಮುಗಿದ ನಂತರ ಧರ್ಮರಕ್ಷಕರಾರು? ಎಂದು ಶೌನಕಾದಿಗಳು ಕೇಳಿದ ಆರು ಪ್ರಶ್ನೆಗಳಿಗೆ ಉತ್ತರರೂಪವಾಗಿ ಸೂತಾಚಾರ್ಯರು ಭಾಗವತ ಶ್ರವಣ, ಭಾಗವತ ಧರ್ಮಾನುಷ್ಠಾನುಗಳೇ ಆತ್ಮೋದ್ಧಾರಕ್ಕೆ ಶ್ರೇಯಸ್ಸಿಗೆ, ಅಂತರ್ಯಾಮಿಯ ತೃಪ್ತಿಗೆ ಕಾರಣವೆಂದು ತಿಳಿಸಿ; ಶ್ರೀಮನ್ನಾರಾಯಣನ (ಸನತ್ಕುಮಾರ(ರೂಪ), ಆದಿವರಾಹ, ಮಹೀದಾಸ, ನಾರಾಯಣ ಋಷಿ, ಕಪಿಲ, ದತ್ತ, ಯಜ್ಞ, ಋಷಭ, ಪೃಥು(ರೂಪ) ಮತ್ಸ್ಯ, ಕೂರ್ಮ, ಧನ್ವಂತರಿ, ಮೋಹಿನಿ, ನೃಸಿಂಹ, ವಾಮನ, ಪರಶುರಾಮ, ವೇದವ್ಯಾಸ, ಶ್ರೀರಾಮ, ರಾಮ-ಕೃಷ್ಣ, ಬುದ್ಧ ಮತ್ತು ಕಲ್ಕಿ ಎಂಬ) ಇಪ್ಪತ್ತೆರಡು ಅವತಾರಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಿ ಧರ್ಮಸಂಸ್ಥಾಪಕನಾದ ಶ್ರೀಕೃಷ್ಣನು ಮೂಲರೂಪಕ್ಕೆ ಹೊರಟಾಗ ಜ್ಞಾನ-ಧರ್ಮ ಪ್ರಕಾಶನಕ್ಕಾಗಿ ಶ್ರೀಮದ್ಭಾಗವತವು ವೇದವ್ಯಾಸರಿಂದ ರಚಿತವಾದ ಕ್ರಮವನ್ನು ವಿವರಿಸುತ್ತಾರೆ. ವ್ಯಾಸರು ವೇದವಿಭಾಗ, ಮಹಾಭಾರತ ಹಾಗೂ ಇತರ ಹದಿನೇಳು ಮಹಾಪುರಾಣಗಳ ರಚನೆಯ

ನಂತರವೂ ತೃಪ್ತರಾಗದೆ ಇದ್ದಾಗ ನಾರದರು ಶ್ರೀಹರಿಯ ಮಹಿಮೆಗಳು ಸಾಮಾನ್ಯರಿಗೂ ಅರ್ಥವಾಗುವಂತೆ ಸಮಾಧಿಭಾಷೆಯ(ನೇರನಿರೂಪಣಾ ಕ್ರಮದಿಂದ) ಶ್ರೀಮದ್ಭಾಗವತವನ್ನು ರಚಿಸುವಂತೆ ಕೇಳಿಕೊಳ್ಳುತ್ತಾರೆ.

ನಾರದರು ಪೂರ್ವಕಲ್ಪದಲ್ಲಿ ತಾವು ದಾಸೀ ಪುತ್ರರಾಗಿದ್ದಾಗ, ಯೋಗಿಗಳು ಹಾಡಿದ ಹರಿಚರಿತೆಗಳ ಶ್ರವಣವೇ ಧೃಢಭಕ್ತರಾಗಲು, ಶ್ರೀಹರಿದರ್ಶನ ಪಡೆಯಲು, ಈಗ ದೇವರ್ಷಿಯಾಗಿ ಅವತರಿಸಿ ಪ್ರತಿಕ್ಷಣಕ್ಕೂ ಭಗವಂತನನ್ನು ಕಾಣುವ ಸೌಭಾಗ್ಯ ಪಡೆಯಲು ಕಾರಣವಾಯಿತೆಂಬ ಚರಿತ್ರೆಯ ಮೂಲಕ ಹರಿಮಹಿಮಾ ಶ್ರವಣದ ಮಹತ್ವವನ್ನು ವಿವರಿಸಿದಾಗ ವೇದವ್ಯಾಸರು ಶ್ರೀಮದ್ಭಾಗವತವನ್ನು ರಚಿಸಿ ತಮ್ಮ ಪುತ್ರನಾದ ಶುಕಮಹರ್ಷಿಗೂ ಅವರು ಪಾಂಡವರ ಮರಿಮಗನಾದ ಪರೀಕ್ಷಿತನಿಗೂ ಉಪದೇಶಿಸುತ್ತಾರೆ. ಇದಕ್ಕೆ ಕಾರಣವಾದ ಘಟನೆಗಳನ್ನು ವರ್ಣಿಸುತ್ತಾರೆ.

ಮಹಾಭಾರತ ಯುದ್ಧಾನಂತರ ಉಪಪಾಂಡವ ನಾಶಕನಾದ ಅಶ್ವತ್ಥಾಮನ ಶಿರೋಮಣಿಯನ್ನು ಕಿತ್ತಿಕಳಿಸಿದಾಗ; ಅಶ್ವತ್ಥಾಮನು ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ಉತ್ತರೆಯ ಗರ್ಭಕ್ಕೆ ಹಾನಿಯಾಗದಂತೆ ಶ್ರೀಕೃಷ್ಣನು ತನ್ನ ಚಕ್ರದಿಂದ ರಕ್ಷಣೆ ನೀಡುತ್ತಾನೆ. ಉಪಕೃತಳಾದ ಕುಂತೀದೇವಿಯು ಶ್ರೀಕೃಷ್ಣ ಮಹಿಮೆಗಳನ್ನು ವಿಸ್ತಾರವಾಗಿ ಸ್ತುತಿಸುತ್ತಾಳೆ. ಬಂಧುವಧೆಯ ಶೋಕದಿಂದ ಬಳಲುತ್ತಿರುವಾಗ ಯುಧಿಷ್ಠಿರನಿಗೆ ಶ್ರೀಕೃಷ್ಣನು ಮರಣಶಯ್ಯೆಯಲ್ಲಿದ್ದ ಭೀಷ್ಮರಿಂದ ಧರ್ಮೋಪದೇಶ ಮಾಡಿಸುತ್ತಾನೆ. ಭೀಷ್ಮನು ಶ್ರೀಕೃಷ್ಣನ ದಿವ್ಯರೂಪವನ್ನು ಧ್ಯಾನಿಸುತ್ತಾ ಮಹಿಮೆಗಳನ್ನು ಕೊಂಡಾಡುತ್ತಾ ಮೂಲರೂಪವನ್ನು ಸೇರುತ್ತಾನೆ.

ಶ್ರೀಕೃಷ್ಣನು ಹಸ್ತಿನಾವತಿಯಿಂದ ಹೊರಟು ದ್ವಾರಕೆಯನ್ನು ಸೇರುವ ವರ್ಣನೆ, ಪರೀಕ್ಷಿತ ಜನನ, ಕೃಷ್ಣವಿಯೋಗ, ಅರ್ಜುನ ಪ್ರಲಾಪ, ಪಾಂಡವರ ಸ್ವರ್ಗಾರೋಹಣ, ಪರೀಕ್ಷಿತನಿಂದ ಕಲಿನಿಗ್ರಹ, ಅಸಂಪ್ರಜ್ಞಾತ ಸಮಾಧಿಯಲ್ಲಿದ್ದ ಶಮೀಕ ಋಷಿಯ ಕೊರಳಿಗೆ ಮೃತ ಸರ್ಪವನ್ನು ಹಾಕುವಿಕೆ, ಶಮೀಕ ಪುತ್ರನ ಶಾಪ, ಪಶ್ಚಾತ್ತಾಪದಿಂದ ವಿರಕ್ತನಾದ ಪರೀಕ್ಷಿತ ಮಹಾರಾಜನು ಗಂಗಾತೀರದಲ್ಲಿ ಪ್ರಾಯೋಪವೇಶಕ್ಕೆ ಕುಳಿತಾಗ ಶುಕಾಚಾರ್ಯರ ಆಗಮನ, ಮರಣೋನ್ಮುಖನಾದ ಮನುಷ್ಯನ ಕರ್ತವ್ಯವೇನು? ಅವನು ಏನನ್ನು ಕೇಳಬೇಕು? ಯಾರನ್ನು ಸ್ಮರಿಸಬೇಕು? ಯಾವುದನ್ನು ಜಪಿಸಬೇಕು? ಎಂಬ ಪರೀಕ್ಷಿತನ ಪ್ರಶ್ನೆಗಳಿಗೆ ಉತ್ತರ ರೂಪವಾಗಿ ಶುಕಾಚಾರ್ಯರು ಶ್ರೀಮದ್ಭಾಗವತವನ್ನು ಉಪದೇಶಿಸಲು ಆರಂಭಿಸುತ್ತಾರೆ.

**ದ್ವಿತೀಯಸ್ಕಂಧ**

ಶುಕಾಚಾರ್ಯರು 'ಅಭಯವನ್ನು ಬಯಸುವವರು ಶ್ರೀಹರಿಯ ಮಹಿಮೆಗಳನ್ನು ಕೇಳಬೇಕು, ಹೇಳಬೇಕು, ಸ್ಮರಿಸಬೇಕು' ಎಂದು ಆರಂಭಿಸಿ ಮುಮುಕ್ಷುವಾದವನು ಮರಣಕಾಲದಲ್ಲಿ ವೈರಾಗ್ಯದಿಂದ ಏಕಾಂತ ಸ್ಥಳವನ್ನು ಸೇರಿ ಆಚರಿಸಬೇಕಾದ ಯಮ, ನಿಯಮ ಆಸನ ಪ್ರಾಣಾಯಾಮಗಳನ್ನು

ವಿವರಿಸುತ್ತಾರೆ. ಧಾರಣೆಯ ಸಿದ್ಧಿಗಾಗಿ ಧಾರಣಾ ವಿಷಯನಾದ ಬ್ರಹ್ಮಾಂಡವ್ಯಾಪಿಯಾಗಿ ನಿಂತಿರುವ ಭಗವಂತನ ಸ್ಥೂಲರೂಪ(ವಿರಾಡ್ರೂಪ)ವನ್ನು ವರ್ಣಿಸುತ್ತಾರೆ. ಭಗವಂತನೇ ಸರ್ವಶಬ್ದವಾಚ್ಯನೆಂದು ತಿಳಿದು ವ್ಯವಹರಿಸುತ್ತಾ ಸರ್ವಸಂಗ ಪರಿತ್ಯಾಗಿಗಳಾಗಿ ಸಂಚರಿಸುವ ಅವಧೂತರು ತಮ್ಮ ಹೃದ್ಗುಹಾವಾಸಿಯಾದ ಸಾಕಾರನಾದ ಭಗವಂತನ ಸೂಕ್ಷ್ಮರೂಪವನ್ನು ಧ್ಯಾನಿಸಿ, ಪ್ರಾಣಾಯಾಮದಿಂದ ಜಿತಶ್ವಾಸರಾಗಿ ಲಯಚಿಂತನ ದಿಂದ ದೇಹವನ್ನು ಬಿಡುವುದು; ಜ್ಞಾನಿಯ ಅಪರೋಕ್ಷ ಜ್ಞಾನನಂತರ(ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ ಎಂಬ) ಷಟ್ ಚಕ್ರಗಳನ್ನು ದಾಟಿ ಮುಕ್ತಿಯನ್ನು ಪಡೆಯುವ ಭಕ್ತಿಯೋಗದ ಉತ್ಕ್ರಾಂತಿ ವಿಧಾನವನ್ನು ನಿರೂಪಿಸುತ್ತಾರೆ. ಬ್ರಹ್ಮಕಲ್ಪಾಂತದಲ್ಲಿ ಪಂಚಭೂತಗಳು, ಪಂಚತನ್ಮಾತ್ರಗಳು ದಶೇಂದ್ರಿಯಗಳು ಮನಸ್ತತ್ತ್ವ, ಬುದ್ಧಿ, ಅಹಂಕಾರ, ಮಹತ್ತತ್ತ್ವ, ಅವ್ಯಕ್ತತತ್ತ್ವಗಳು ಭಗವಂತನಲ್ಲಿ ಲಯ ಹೊಂದುವ ಕ್ರಮವನ್ನು ಉಪದೇಶಿಸುತ್ತಾರೆ.

ಶಿಲಾಧ್ಯಾಯನ ಸಂಪತ್ತಿಗಾಗಿ ಬೃಹಸ್ಪತಿಯನ್ನು, ಇಂದ್ರಿಯ ಪಾಟವಕ್ಕಾಗಿ ಇಂದ್ರನನ್ನು, ಸಂತತಿಗಾಗಿ ಪ್ರಜಾಪತಿಗಳನ್ನು, ಸಂಪತ್ತಿಗಾಗಿ ಲಕ್ಷ್ಮಿಯನ್ನು, ಅನ್ನಾದಿಗಳಿಗಾಗಿ ಅದಿತಿಯನ್ನು ಜ್ಞಾನಕ್ಕಾಗಿ ಶಂಕರನನ್ನು, ದಾಂಪತ್ಯ ಪ್ರೀತಿಗಾಗಿ ಪಾರ್ವತಿಯನ್ನು ಹೀಗೆ ವಿವಿಧ ಫಲಗಳಿಗಾಗಿ ವಿವಿಧ ದೇವತೆಗಳನ್ನು ಉಪಾಸಿಸುವ ಕ್ರಮವಿದ್ದರೂ ಸಕಾಮನೇ ಆಗಲಿ, ನಿಷ್ಕಾಮನೇ ಇರಲಿ ಭಕ್ತಿಯಿಂದ ಶ್ರೀಹರಿಯನ್ನು ಭಜಿಸಿದರೆ ಎಲ್ಲ ಫಲಗಳೂ ಲಭಿಸುವವೆನ್ನುತ್ತಾರೆ. ಆಗ ಶೌನಕಾದಿ ಋಷಿಗಳು ಭಗವದ್ಭಕ್ತಿ ರಹಿತನಾದ ಮನುಷ್ಯನ ದೇಹ-ಇಂದ್ರಿಯ-ಆಯುಷ್ಯವೆಲ್ಲ ವ್ಯರ್ಥವೆಂದು ಉದ್ಗಾರವೆತ್ತುತ್ತಾರೆ. ಸೂತರು ಭಗವಂತನ ಮಹಿಮೆಗಳನ್ನು ಸ್ತೋತ್ರಮಾಡಿ ಬ್ರಹ್ಮನಾರದ ಸಂವಾದವನ್ನು ವಿವರಿಸುತ್ತಾ ಅಲ್ಲಿ ಚತುರ್ಮುಖ ಬ್ರಹ್ಮನು ನಾರದರಿಗೆ ತನ್ನನ್ನೊಳಗೊಂಡ ಸರ್ವಜಗತ್ತೂ ಸೃಷ್ಟ್ಯಾದಿ ಸರ್ವಕ್ರಿಯೆಗಳೂ ಭಗವಂತನ ಅಧೀನವೆಂದು ತಿಳಿಸಿ ಸೃಷ್ಟಿಕ್ರಮವನ್ನು ಹೇಳಿದ್ದು; ಪರಮಾತ್ಮನು ಪ್ರಳಯಕಾಲದಲ್ಲಿ ತನ್ನಲ್ಲಿ ಧರಿಸಿದ್ದ ಅವ್ಯಕ್ತತತ್ತ್ವದಿಂದ ಪ್ರಕೃತಿಯ ವಿಕಾರವಾದ ಮಹತ್ತತ್ತ್ವ, ಅಹಂಕಾರ, ಮನಸ್ಸು, ಇಂದ್ರಿಯಗಳು, ಪಂಚಭೂತಗಳು, ತನ್ಮಾತ್ರಾಗಳು, ಅಭಿಮಾನಿಗಳನ್ನು ಮಾಡುವ ಬ್ರಹ್ಮಾಂಡದ ಹೊರಗಿನ ಸೃಷ್ಟಿ; ಬ್ರಹ್ಮಾಂಡದ ಒಳಗೆ ವಿರಾಡ್ರೂಪದಿಂದ ಪ್ರವೇಶಿಸಿದ ಪುರುಷನಾಮಕನಾದ ಶ್ರೀಹರಿಯ ವಿವಿಧ ಅಂಶಗಳಿಂದ ಉಂಟಾದ ಸೃಷ್ಟಿಯನ್ನು ವರ್ಣಿಸುತ್ತಾರೆ. ಬ್ರಹ್ಮದೇವರು ಭಗವಂತನ ಅನೇಕ ಮಹಿಮೆಗಳನ್ನು ಇಪ್ಪತ್ತೆರಡು ಅವತಾರಗಳನ್ನು ವಿಶೇಷವಾಗಿ ಕೃಷ್ಣಾವತಾರವನ್ನು ಸ್ತುತಿಸುತ್ತಾ ಇಂತಹ ಮಹಾಮಹಿಮನಾದ ಭಗವಂತನನ್ನು ಸ್ವಪ್ರಯತ್ನದಿಂದ ಯಾರೂ ತಿಳಿಯಲಾರರಾದರೂ ಅವನ ಅನುಗ್ರಹದಿಂದ ಅನೇಕ ಭಗವದ್ಭಕ್ತರು ತಿಳಿದಿದ್ದಾರೆ ಎಂದು ಹೇಳುತ್ತಾರೆ.

ಸೃಷ್ಟಿಕಾಲದಲ್ಲಿ ಬ್ರಹ್ಮದೇವರ ತಪಸ್ಸಿಗೆ ಒಲಿದು ಜೀವದ ಉದ್ಧಾರಕ್ಕಾಗಿ ಭಗವಂತನೆ ಚತುಃಶ್ಲೋಕೀ (ನಾಲ್ಕು ಶ್ಲೋಕಗಳ) ಭಾಗವತವನ್ನು ಉಪದೇಶಿಸಿದನು. ಅದನ್ನು ಬ್ರಹ್ಮದೇವರು ನಾರದರಿಗೂ ಉಪದೇಶಿಸಿದರು.

ವಿಧುರನು ಧೃತರಾಷ್ಟ್ರನಿಗೆ ಮಾಡಿದ ಉಪದೇಶದಿಂದ ಕೆರಳಿದ ದುರ್ಯೋಧನನಿಂದ ಅವಮಾನಿತನಾಗಿ ಹಸ್ತಿನಾವತಿಯನ್ನು ತ್ಯಜಿಸಿ ತೀರ್ಥಕ್ಷೇತ್ರ ಸಂಚಾರ ಕ್ರಮದಲ್ಲಿ ಪ್ರಭಾಸತೀರ್ಥದಲ್ಲಿ ಉದ್ಧವನನ್ನು ಕಾಣುತ್ತಾನೆ. ಶ್ರೀಕೃಷ್ಣನ ಅಂತ್ಯವನ್ನು ತಿಳಿಸಿದ ಉದ್ಧವನು ಅನೇಕ ರೀತಿಯಿಂದ ಕೃಷ್ಣನನ್ನು ಸ್ತುತಿಸಿ, ಮೈತ್ರೇಯರನ್ನು ಕಾಣಬೇಕೆಂಬ ಶ್ರೀಕೃಷ್ಣಸಂದೇಶವನ್ನು ವಿದುರನಿಗೆ ತಿಳಿಸುತ್ತಾನೆ.

ಗಂಗಾದ್ವಾರದಲ್ಲಿ ಮೈತ್ರೇಯನು ವಿದುರನಿಗೆ ತಾನು ನೇರವಾಗಿ ಶ್ರೀಕೃಷ್ಣನಿಂದ ಕೇಳಿ ತಿಳಿದ ಭಾಗವತವನ್ನು ಉಪದೇಶಿಸುತ್ತಾನೆ.

ಸೃಷ್ಟಿಕಾಲದಲ್ಲಿ ಭಗವಂತನ ನಾಭಿಕಮಲದಲ್ಲಿ ಜನಿಸಿದ ಬ್ರಹ್ಮದೇವನು ತಪವನ್ನಾಚರಿಸಿ ಭಗವದ್ದರ್ಶನ ಪಡೆದು ಸ್ತುತಿಸಿ ವರ ಪಡೆದು ಹದಿನಾಲ್ಕು ಲೋಕಗಳನ್ನು, ವಿವಿಧ ಜೀವನಿಕಾಯಗಳನ್ನು ಸೃಷ್ಟಿಸುತ್ತಾನೆ. ಬ್ರಹ್ಮನ ಅಂಗಾಂಗಗಳಿಂದ ನವ ಪ್ರಜೇಶ್ವರರ ಉತ್ಪತ್ತಿ. ಮನಸ್ಸಿನಿಂದ ಮರೀಚಿ. ಅವನ ಪುತ್ರಕಶ್ಯಪ. ಆತನಿಗೆ ಅದಿತಿ, ದಿತಿ, ಕದ್ರು, ವಿನತೆ ಮುಂತಾದ ಪತ್ನಿಯರು. ದಿತಿಯ ಅಕಾಲ ಕ್ರೀಡಾಸಕ್ತಿಯಿಂದ ಸನಕಾದಿಗಳ ಶಾಪದಿಂದ ಜಯ-ವಿಜಯರೆಂಬ ವೈಕುಂಠದ ದ್ವಾರಪಾಲಕರೇ ಹಿರಣ್ಯಾಕ್ಷ-ಹಿರಣ್ಯಕಶ್ಯಪರೆಂಬ ಮಕ್ಕಳಾಗಿ ಜನಿಸುತ್ತಾರೆ. ಹಿರಣ್ಯಾಕ್ಷನು ದಿಕ್ಪಾಲಕರನ್ನು ಅವಮಾನಿಸಿ, ವರುಣ-ನಾರದರಿಂದ ಪ್ರಚೋದಿತನಾಗಿ ರಸಾತಲದಲ್ಲಿ ಭೂಮಿಯನ್ನು ಎತ್ತುತ್ತಿದ್ದ ವರಾಹರೂಪಿ ಶ್ರೀಹರಿಯೊಂದಿಗೆ ಯುದ್ಧಮಾಡಿದಾಗ ಹಿರಣ್ಯಾಕ್ಷನ ಸಂಹಾರವಾಗುತ್ತದೆ.

ಸೃಷ್ಟಿಯ ಭಾರದಿಂದ ಮುಳುಗಿದ್ದ ಭೂಮಿಯನ್ನು ಬ್ರಹ್ಮಪುತ್ರರಾದ ಸ್ವಾಯಂಭುವ ಮನು ಮತ್ತು ಶತರೂಪಾದೇವಿಯರ ನಿವಾಸಕ್ಕಾಗಿ ತರುವರಾರೆಂದು ಯೋಚಿಸುತ್ತಿದ್ದ ಬ್ರಹ್ಮದೇವರ ನಾಸಿಕದಿಂದ ಹುಟ್ಟಿಬಂದ ವರಾಹನು ರಸಾತಳಕ್ಕಿಳಿದು ಭೂಮಿಯನ್ನು ಮೇಲಕ್ಕೆ ತರುತ್ತಿದ್ದಾಗ ಅಡ್ಡಪಡಿಸಿ ಯುದ್ಧಕ್ಕೆ ಬಂದ ಹಿರಣ್ಯಾಕ್ಷನನ್ನು ವಧಿಸಿ ಸೃಷ್ಟಿಕಾರ್ಯಕ್ಕೆ ಒದಗಿದ ವಿಘ್ನವನ್ನು ನಿವಾರಿಸುತ್ತಾನೆ.

ಸ್ವಾಯಂಭುವ ಮನುವಿನ ಮಗಳಾದ ದೇವಹೂತಿಗೆ ಕರ್ದಮ ಪ್ರಜಾಪತಿಯೊಂದಿಗೆ ವಿವಾಹವಾಗುತ್ತದೆ. ಅನೇಕ ವರ್ಷಗಳ ಕಾಲ ವ್ರತನಿಷ್ಠ ತಪಸ್ವಿಯಾದ ಅವನನ್ನು ತನ್ನ ಸೇವೆಯಿಂದ ಸಂತೋಷಪಡಿಸಿ ದೇವಯೋಗ್ಯವಾದ ಭೋಗವನ್ನು ಅನುಭವಿಸಿದಾಗ ಕರ್ದಮ-ದೇವಹೂತಿಯರಿಗೆ ಒಂಬತ್ತು ಹೆಣ್ಣುಮಕ್ಕಳು ಹುಟ್ಟುತ್ತಾರೆ. ಕರ್ದಮ ದೇವಹೂತಿಯರ ಪ್ರಾರ್ಥನೆಯಂತೆ ಶ್ರೀಮನ್ನಾರಾಯಣನೇ ಕಪಿಲನಾಗಿ ಅವತರಿಸುತ್ತಾನೆ. ಕರ್ದಮನು ವಿರಕ್ತನಾಗಿ ತಪಸ್ಸಿಗೆ ಹೋಗುತ್ತಾನೆ.

ದೇವಹೂತಿಯು ಕಪಿಲನನ್ನು ಭಗವಂತನೆಂದೇ ಭಜಿಸಿ ತತ್ವಜ್ಞಾನೋಪದೇಶಕ್ಕಾಗಿ ಪ್ರಾರ್ಥಿಸಿದಾಗ ಕಪಿಲನು ಮನೋನಿಗ್ರಹ ವಿಧಾನ, ಭಕ್ತಿಯ ಸ್ವರೂಪ, ಇಪ್ಪತ್ನಾಲ್ಕು ತತ್ವಗಳು ಭಗವತ್ ಸ್ವರೂಪವನ್ನು

ಉಪದೇಶಿಸಿ, ಆಸನ ಪ್ರಾಣಾಯಾಮಾದಿ ಅಷ್ಟಾಂಗಯೋಗಸಹಿತವಾಗಿ ಶ್ರೀಹರಿಯ ದಿವ್ಯರೂಪವನ್ನು ಆಪಾದಮಸ್ತಕವಾಗಿ ಧ್ಯಾನಿಸುವ ಕ್ರಮ, ಅದರ ಫಲವಾಗಿ ಲಭಿಸುವ ಮನೋನಿಗ್ರಹ ಭಕ್ತಿಯ ಪ್ರಭೇದಗಳು, ಕಾಲಸ್ವರೂಪಗಳನ್ನು ಉಪದೇಶಿಸುತ್ತಾನೆ. ಅಜ್ಞಾನಮಗ್ನನಾದ ಜೀವನು ತೊಳಲುವ ವಿಧಾನವನ್ನು, ಅವನ ಮರಣ, ನರಕವಾಸ್ಥೆ ಪಾಪಶೇಷದಿಂದ ತಂದೆಯ ಮೂಲಕ ತಾಯಿಯ ಗರ್ಭವಾಸ, ಜನನ, ಶೈಶವ ಯೌವ್ವನಾದಿ ಪ್ರತಿಹಂತದಲ್ಲೂ ಘೋರವಾದ ದುಃಖವನ್ನೇ ಅನುಭವಿಸುವ ರೀತಿಯನ್ನು ಚಿತ್ರಿಸುತ್ತಾನೆ.

ಮುಮುಕ್ಷುಗಳು ಭಕ್ತಿಯೋಗಕ್ಕೆ ಕಾರಣವಾದ ಶ್ರವಣ, ಚಿಂತನ ಧ್ಯಾನಗಳನ್ನು ಆಶ್ರಯಿಸಬೇಕಾದ ಅಗತ್ಯ, ಪ್ರವೃತ್ತಿಕರ್ಮ ನಿವೃತ್ತಿಕರ್ಮಗಳ ಸ್ವರೂಪಗಳನ್ನು ತತ್ವಜ್ಞಾನದ ಮಹತ್ವವನ್ನು ಉಪದೇಶಿಸುತ್ತಾನೆ. ದೇವಹೂತಿಯು ಕಪಿಲರೂಪಿ ಭಗವಂತನನ್ನು ಸ್ತುತಿಸಿ, ಪರಮವಿರಕ್ತಳಾಗಿ ಧ್ಯಾನಯೋಗದಿಂದ ತಪಗೈದು ಸಿದ್ಧಿಹೊಂದಿ ಸಿದ್ಧಿದಾ ಎಂಬ ನದಿಯಾಗಿ ಹರಿಯುತ್ತಾಳೆ.

**ಚತುರ್ಥಸ್ಕಂಧ**

ಇಲ್ಲಿ ಸ್ವಾಯಂಭುವ ಮನುಪುತ್ರಿಯಾದ ಆಕೂತಿದೇವಿಯಲ್ಲಿ ರುಚಿ ಪ್ರಜೇಶ್ವರನಿಂದ ಯಜ್ಞನಾಮಕ ಭಗವದವತಾರ, ಸ್ವಾಯಂಭುವ ಮನುವಿನ ಮತ್ತೊಬ್ಬ ಮಗಳಾದ ಪ್ರಸೂತಿ ದೇವಿಗೆ ದಕ್ಷಬ್ರಹ್ಮನೊಂದಿಗೆ ವಿವಾಹ ಸತಿದೇವಿಯ ಜನನ, ಅವಳಿಗೆ ಶಿವನೊಂದಿಗೆ ವಿವಾಹ; ಸತ್ರಯಾಗದಲ್ಲಿ ಮಾವನಾದ ತನಗೆ ನಮಸ್ಕರಿಸಲಿಲ್ಲವೆಂದು ದಕ್ಷನು ಕೋಪದಿಂದ ಶಿವನನ್ನು ನಿಂದಿಸುವುದು, ದಕ್ಷನು ಯಜ್ಞವನ್ನು ಕೈಗೊಂಡು ಶಿವನನ್ನು ಆಹ್ವಾನಿಸದೆ ಅವಮಾನಿಸುವುದು, ಯಜ್ಞಕ್ಕೆ ಹೊರಟ ದೇವತಾಗಣವನ್ನು ಕಂಡು ಪತಿಯ ಅಸಮ್ಮತಿಯ ನಡುವೆಯೂ ತಂದೆಯ ಮನೆಗೆ ಹೊರಟ ಸತೀದೇವಿ ದಕ್ಷನಿಂದ ನಡೆದ ಶಿವದ್ವೇಷವನ್ನು ಖಂಡಿಸಿ ಯೋಗಾಗ್ನಿಯಿಂದ ಪ್ರಾಣತ್ಯಾಗ ಮಾಡುವುದು, ಈ ವಾರ್ತೆ ತಿಳಿದ ಶಿವನ ಕೋಪ, ವೀರಭದ್ರನ ಉತ್ಪತ್ತಿ, ದಕ್ಷಶಿರಚ್ಛೇದ, ಯಜ್ಞಧ್ವಂಸ, ಬ್ರಹ್ಮಾದಿಗಳಿಂದ ಸಾಂತ್ವನ, ದಕ್ಷನಿಗೆ ಅಜಶಿರಪ್ರಾಪ್ತಿ, ಯಜ್ಞ ಪರಿಸಮಾಪ್ತಿ, ಸತೀ ದೇವಿಯು ಪಾರ್ವತಿಯಾಗಿ ಅವತರಿಸಿ(ಮನ್ಮಥನ ಪ್ರಯತ್ನ, ಕಾಮದಹನಗಳ ನಂತರ) ಶಿವನೊಂದಿಗೆ ವಿವಾಹ ಷಣ್ಮುಖ ಉತ್ಪತ್ತಿ ಕಥೆಗಳು ಬಂದಿವೆ.

ಸ್ವಾಯಂಭುವ ಮನುವಿನ ಪುತ್ರನಾದ ಉತ್ತಾನಪಾದರಾಯನು ಕಿರಿಯ ಹೆಂಡತಿಯಾದ ಸುರುಚಿಯ ಮೋಹದಿಂದ ಸುನೀತಿ ಪುತ್ರನಾದ ಧ್ರುವನು ತೊಡೆಯೇರಬಂದಾಗ ಸುರುಚಿಯು ಅವಮಾನಿಸಿದರೂ ಸುಮ್ಮನಾದುದು. ಸುನೀತಿಯ ಉಪದೇಶ, ನಾರದರ ಸಮಾಧಾನ, ಉಪದೇಶ, ಧ್ರುವನ ತಪಸ್ಸು, ಭಗವದ್ದರ್ಶನ, ಸ್ತುತಿ, ವರದಾನ, ಪಟ್ಟಾಭಿಷೇಕ, ಯಕ್ಷರೊಂದಿಗೆ ಧ್ರುವನಯುದ್ಧ, ಸ್ವಾಯಂಭುವ ಮನುವಿನ ಹಿತವಚನ. ಧ್ರುವನು ಅದನ್ನು ಮನ್ನಿಸಿ ಯುದ್ಧನಿಲ್ಲಿಸಿದ್ದು, ಧ್ರುವಲೋಕಪ್ರಾಪ್ತಿ, ಅವನ

ವಂಶದಲ್ಲಿ ಜನಿಸಿದ ದುಷ್ಟನಾದ ವೇನನಿಂದ ಧರ್ಮಕಾರ್ಯಗಳಿಗೆ ವಿಘ್ನ, ಋಷಿಗಳ ಶಾಪದಿಂದ ವೇನನ ನಾಶ, ಪೃಥುರಾಜರ ಉತ್ಪತ್ತಿ, ಆತ್ಮಪ್ರಶಂಸಾವರ್ಜನ, ಗೋರೂಪದ ಭೂಮಿಯಿಂದ ಸಕಲ ಭಾಗ್ಯಗಳನ್ನು ಕರೆದುದು, ಯಜ್ಞಕ್ಕೆ ವಿಘ್ನಮಾಡಿದ ಇಂದ್ರನನ್ನು ಕ್ಷಮಿಸಿದ್ದು; ಅವನ ಪುತ್ರನಾದ ವಿಜಿತಾಶ್ವನ ವಂಶದಲ್ಲಿ ಪ್ರಾಚೀನಬರ್ಹಿರಾಜನಿಗೆ ಪ್ರಾಚೇತಸರು ಹುಟ್ಟಿದ್ದು, ತಪಸ್ಸಿಗೆ ಹೊರಟಾಗ ಶಿವದರ್ಶನ, ವಿಷ್ಣುವನ್ನು ಕುರಿತು ತಪಗೈಯಲು ಉಪದೇಶ; ಪ್ರಾಚೀನಬರ್ಹಿಗೆ ನಾರದರಿಂದ ಅಹಿಂಸಾ ವ್ರತದ ಉಪದೇಶ, ಆಧ್ಯಾತ್ಮಿಕ ರಹಸ್ಯಾರ್ಥದಿಂದ ಕೂಡಿದ ಪುರಂಜನೋಪಾಖ್ಯಾನ ನಿರೂಪಣೆ, ಪ್ರಾಚೀನಬರ್ಹಿಯ ವೈರಾಗ್ಯ, ಪ್ರಾಚೇತಸರಿಗೆ ವಿಷ್ಣುಸಾಕ್ಷಾತ್ಕಾರ ಮುಕ್ತಿ. ಇತ್ಯಾದಿ ಕಥಾ ಭಾಗಗಳನ್ನು ಭಾಗವತ ಚತುರ್ಥಸ್ಕಂಧದಲ್ಲಿ ಕಾಣಬಹುದು.

**ಪಂಚಮ ಸ್ಕಂಧ**

ಸಂಸ್ಕೃತ ಗದ್ಯ ಪ್ರಧಾನವಾದ ಪಂಚಮ ಸ್ಕಂಧದಲ್ಲಿ(ಭಾಗವತದಲ್ಲಿ) ಸ್ವಾಯಂಭುವ ಮನುವಿನ ಜೇಷ್ಠ ಪುತ್ರನಾದ ಪ್ರಿಯವ್ರತರಾಜನು ನಾರದರ ಉಪದೇಶದಿಂದ ವಿರಕ್ತನಾಗಿ ಯೌವ್ವನದಲ್ಲೇ ಸನ್ಯಾಸಕ್ಕೆ ನಿರ್ಧರಿಸಿದಾಗ ಬ್ರಹ್ಮದೇವರು ಪ್ರತ್ಯಕ್ಷನಾಗಿ 'ಮೈಮರೆತವನಿಗೆ ಕಾಡಿನಲ್ಲೂ ಅರಿಷಡ್ವರ್ಗಗಳ ಭಯತಪ್ಪಿದ್ದಲ್ಲ. ಜ್ಞಾನಿಗೆ ಗೃಹಸ್ಥಾಶ್ರಮಭಾದಕವಲ್ಲ'ವೆಂದು ಉಪದೇಶಿಸಿ ವಿವಾಹಕ್ಕೆ ಒಪ್ಪಿಸುತ್ತಾರೆ.

ಸೂರ್ಯಸಮಾನ ಜ್ಯೋತಿರ್ಮಯರಥವನ್ನೇರಿ ಸೂರ್ಯನಿಲ್ಲದ ರಾತ್ರಿ ಪ್ರದೇಶವನ್ನು ಸಂಚರಿಸಿ ಬೆಳಗಿದ ಪ್ರಿಯವ್ರತನು ರಥದ ಚಕ್ರದ ಗುರುತುಗಳಿಂದ ಭೂಮಿಯನ್ನು ಸಪ್ತದ್ವೀಪ ಸಪ್ತಸಮುದ್ರಗಳಾಗಿ ವಿಭಾಗಿಸಿ ತನ್ನ ಏಳು ಮಕ್ಕಳಿಗೆ ಹಂಚಿ ವೈರಾಗ್ಯದಿಂದ ಸನ್ಯಾಸಿಯಾಗುತ್ತಾನೆ. ಅವನ ಮಗ ಆಗ್ನಿಧ್ರನು ತಪೋನಿರತನಾಗಿದ್ದಾಗ ಬಂದ ಪೂರ್ವಚಿತ್ತಿ ಎಂಬ ಅಪ್ಸರೆಯಲ್ಲಿ ಜನಿಸಿದ ಒಂಬತ್ತು ಮಕ್ಕಳು ಜಂಬೂದ್ವೀಪದ ಒಂಬತ್ತು ಖಂಡಗಳ ಅಧಿಪತಿಗಳಾಗುತ್ತಾರೆ. ಅವರಲ್ಲಿ ಹಿರಿಯವನಾದ ನಾಭಿರಾಜ ಮತ್ತು ಮೇರುದೇವಿಯರಲ್ಲಿ ಶ್ರೀಹರಿಯು 'ಋಷಭ' ಎಂಬ ಹೆಸರಿನಿಂದ ಅವತರಿಸುತ್ತಾನೆ. ಯೋಗಿ ಶ್ರೇಷ್ಠನಾದ ಋಷಭನು ಇಂದ್ರನು ಮಳೆಗೆರೆಯದಿದ್ದಾಗ ತನ್ನ ಯೋಗ ಸಾಮರ್ಥ್ಯದಿಂದ ಮಳೆತರಿಸುತ್ತಾನೆ. ಅವನ ಮಕ್ಕಳಲ್ಲಿ ಹಿರಿಯವ ಭರತ. ಇತರ ಒಂಭತ್ತು(೯) ಜನರ ಹೆಸರಿನಿಂದ ದೇಶ ಖಂಡಗಳು ಪ್ರಸಿದ್ಧವಾಗುತ್ತವೆ. ಇತರ ಒಂಭತ್ತು ಜನರು ಜಯಂತೇಯರೆಂಬ ಹೆಸರಿನಿಂದ ಭಾಗವತ ಧರ್ಮ ಪ್ರವರ್ತಕರಾದ ಅವಧೂತರಾಗುತ್ತಾರೆ.

ಭಗವಾನ್ ಋಷಭನು ಶಾಂತಿ, ಮೈತ್ರಿ, ಕರುಣೆ, ಧಮಾರ್ಥಕಾಮಾರ್ಜನೆಗಳನ್ನು ಮೋಕ್ಷಕ್ಕೆ ಬಾಧಕವಾಗದಂತೆ ನಡೆಸಿತೋರಿಸಿದ್ದಲ್ಲದೆ ಬ್ರಹ್ಮರ್ಷಿ ಸಭೆಯಲ್ಲಿ ತನ್ನ ಮಕ್ಕಳನ್ನು ಕುರಿತು ನಿಷ್ಕಾಮ ಕರ್ಮಯೋಗವನ್ನು ಉಪದೇಶಿಸುತ್ತಾನೆ. ನಂತರ ಅವಧೂತಯೋಗದಿಂದ ಸಂಚರಿಸಿ ಭಗವತ್ಪ್ರೀಕರವಾದ

ಧರ್ಮಗಳನ್ನು ನಡೆಸುತ್ತಾ ಅಜಗರ ವ್ರತವನ್ನು ಆಚರಿಸಿ, ಅದೃಶ್ಯನಾಗುತ್ತಾನೆ. ಋಷಭ ಪುತ್ರನಾದ ಭರತನು ಪಾಲಿಸಿದ ವರ್ಷವೆಂಬಕಾರಣಕ್ಕಾಗಿ ಭರತವರ್ಷವೆಂಬ ಹೆಸರು ಬರುತ್ತದೆ. ರಾಜ್ಯಪಾಲನೆಯ ನಂತರ ವಿರಕ್ತನಾಗಿ ಗಂಡಕೀ ನದೀ ತೀರದ ಪುಲಹಾಶ್ರಮದಲ್ಲಿ ತಪೋನಿರತನಾಗಿ ತಾನು ಸಾಕಿದ ಜಿಂಕೆಯ ಮರಿಯ ಮೋಹದಿಂದ ಯೋಗಭ್ರಷ್ಟನಾಗಿ ಮರಣಕಾಲದಲ್ಲೂ ಜಿಂಕೆಯನ್ನೇ ಸ್ಮರಿಸಿದ ಫಲವಾಗಿ ಮರುಜನ್ಮದಲ್ಲಿ ಜಿಂಕೆಯಾಗಿ ಜನಿಸಿದಾಗಲೂ ಭಗವನ್ಮಹಿಮೆಯಿಂದ ಹಿಂದಿನ ಜನ್ಮದ ಜ್ಞಾನಹೊಂದಿ ವೈರಾಗ್ಯದಿಂದ ಏಕಾಂಗಿಯಾಗಿ ಸಂಚರಿಸಿ ನಂತರದ ಜನ್ಮದಲ್ಲಿ ಆಂಗೀರಸ ವಂಶದಲ್ಲಿ ಜನಿಸುತ್ತಾನೆ. ಬ್ರಹ್ಮಜ್ಞಾನಿಯಾದರೂ ಸಂಗದೋಷನಿವಾರಣೆಗಾಗಿ ಮೂಕನಂತೆ, ಕಿವುಡನಂತೆ, ಹುಚ್ಚನಂತೆ ಇರುತ್ತಾನೆ. ಇವನನ್ನು ಎಲ್ಲರೂ ಜಡಭರತನೆಂದು ಕರೆಯುತ್ತಾರೆ. ಬಿಟ್ಟಿಯಿಂದ ಕೂಲಿಯಿಂದ ಭಿಕ್ಷೆಯಿಂದ ಹೀಗೆ ದೇವರು ಕೊಟ್ಟಿದ್ದರಲ್ಲಿ ತೃಪ್ತನಾಗಿ ಆನಂದದಿಂದ ದೇಹಾಭಿಮಾನ ರಹಿತನಾಗಿರುತ್ತಾನೆ. ಒಮ್ಮೆ ಹೊಲ ಕಾಯುತ್ತಿದ್ದ ಇವನನ್ನು ಕಾಳಿಗೆ ನರಬಲಿಕೊಡಲು ಎಳೆದೊಯ್ದು ಖಡ್ಗವನ್ನೆತ್ತಿ ನಿಂತಾಗಲೂ ವಿಚಲಿತನಾಗುವುದಿಲ್ಲ.

ಕಪಿಲ ಮುನಿಯಿಂದ ಉಪದೇಶ ಪಡೆಯಲು ಹೊರಟ 'ರಹೂಗಣ' ಎಂಬ ಮಹಾರಾಜನ ಸೇವಕರು ಈ ಭರತನನ್ನು ಪಲ್ಲಕ್ಕಿ ಹೊರಲು ಎಳೆದುತರುತ್ತಾರೆ. ಜಡಭರತನ ನಡಿಗೆ ವ್ಯತ್ಯಾಸವಾದಾಗ ರಹೂಗಣ ಮಹಾರಾಜನು ಚುಚ್ಚು ಮಾತಿನಂದ ಜರೆಯುತ್ತಾನೆ. ನಿರ್ವಿಕಾರನಾದ ಭರತನು ರಾಜನಿಗೆ ತಾನು ಹೊರುವವನೂ ಅಲ್ಲ. ನಡೆಯುವವನೂ ಅಲ್ಲ ಎಂಬ ಬ್ರಹ್ಮಜ್ಞಾನದ ಉತ್ತರ ನೀಡುತ್ತಾನೆ. ಪಲ್ಲಕ್ಕಿಯಿಂದಿಳಿದ ರಾಜನು ಅವಧೂತನಿಗೆ ಶರಣಾಗಿ ಕ್ಷಮೆಯಾಚಿಸಿ ಕೇಳಿದ ಸಂಶಯಗಳನ್ನು ನಿವಾರಿಸಿದ ಜಡಭರತನು ಪ್ರಕೃತಿ ಬಂಧನಕ್ಕೆ ಸಿಲುಕಿದ ಜೀವನ ಸಂಕಷ್ಟವನ್ನು ಭವಾಟವೀ ವರ್ಣನೆಯ ರೂಪವಾಗಿ ವಿವರಿಸಿ ತತ್ವೋಪದೇಶವನ್ನು ಮಾಡುತ್ತಾನೆ. ಭರತವಂಶ ವರ್ಣನೆ ಗಯರಾಜಾದಿಗಳ ಚರಿತ್ರೆ ಬರುತ್ತದೆ. ನಂತರ ಭೂಗೋಲ, ಖಗೋಲ ವರ್ಣನೆಗಳನ್ನು ವರ್ಣನೆಯ ಅಂಗವಾಗಿ ಜಂಬೂದ್ವೀಪ ಮೇರುಪರ್ವತ, ಇಲಾವ್ರತಾದಿ ನವಖಂಡಗಳು ಮರ್ಯಾದಾಪರ್ವತಗಳು, ಗಂಗಾವತರಣಗಳನ್ನು ತಿಳಿಸುತ್ತಾರೆ. ಇಲಾವೃತ ಖಂಡದಲ್ಲಿ ಮಹಾರುದ್ರನು ಸಂಕರ್ಷಣರೂಪಿ ಶ್ರೀಹರಿಯನ್ನು, ಭದ್ರಾಶ್ವವರ್ಷ ಖಂಡದಲ್ಲಿ ಭದ್ರಾಶ್ವನೆಂಬುವನು ಹಯಗ್ರೀವರೂಪವನ್ನೂ, ಹರಿವರ್ಷಖಂಡದಲ್ಲಿ ಪ್ರಹ್ಲಾದನು ನೃಸಿಂಹರೂಪವನ್ನು, ಕೇತುಮಾಲಾ ಖಂಡದಲ್ಲಿ ರತೀ-ಮನ್ಮಥರು ಪ್ರದ್ಯುಮ್ನರೂಪಿ ಪರಮಾತ್ಮನನ್ನು, ರಮ್ಯಕ ವರ್ಷದಲ್ಲಿ ವೈವಸ್ವತ ಮನುವು ಮತ್ಸರೂಪಿ ಭಗವಂತನನ್ನು ಹಿರಣ್ಮಯ ವರ್ಷದಲ್ಲಿ ಅರ್ಯಮನೆಂಬ ಪಿತೃಗಣಾಧಿಪನು ಕೂರ್ಮರೂಪವನ್ನು ಉತ್ತರ ಕುರುಖಂಡದಲ್ಲಿ ಹನುಮಂತದೇವರು ಶ್ರೀರಾಮಚಂದ್ರನನ್ನೂ, ಭಾರತವರ್ಷದಲ್ಲಿ ನಾರದರು ಭಗವಾನ್ ನರ-ನಾರಾಯಣರೂಪಿ ಶ್ರೀಹರಿಯನ್ನೂ

ಸ್ತುತಿಸುವ ವಿಧಾನವನ್ನು ಹೇಳುತ್ತಾರೆ. ಭಾರತವರ್ಷದ ನದಿಗಳು, ಪರ್ವತಗಳನ್ನು ಪರಿಚಯಿಸಿ ಭಾರತಕ್ಕೆ ಸಮಾನವಾದ ಪುಣ್ಯಭೂಮಿಯಿಲ್ಲವೆಂದು ಪ್ರಶಂಸಿಸುತ್ತಾರೆ. ಜಂಬೂ, ಪ್ಲಕ್ಷ, ಶಾಲ್ಮಲೀ, ಕ್ರೌಂಚ ಶಾಕದೀ, ಪುಷ್ಕರ ಎಂಬ ಸಪ್ತದ್ವೀಪಗಳು ಅವುಗಳ ಸುತ್ತಲೂ ಇರುವ ಲವಣಸಮುದ್ರ, ಇಕ್ಷುರಸ ಸಮುದ್ರ, ಸುರಾಸಮುದ್ರ, ಘೃತಸಮುದ್ರ, ದಧಿಸಮುದ್ರ, ಕ್ಷೀರಸಮುದ್ರ, ಶುದ್ಧೋಧಕ ಸಮುದ್ರ ಎಂಬ ಸಪ್ತ ಸಮುದ್ರಗಳು ವಿಸ್ತಾರಗಳು ಆಯಾ ದ್ವೀಪದಲ್ಲಿರುವ ನದಿಗಳು, ಪರ್ವತಗಳು ಹಾಗೂ ರಾಜರು. ಪ್ರಜೆಗಳು ಅವರಿಂದ ಉಪಾಸನೆಗೊಳ್ಳುವ ಭಗವದ್ರೂಪಗಳನ್ನು ವಿವರವಾಗಿ ತಿಳಿಸುತ್ತಾರೆ. ಅಲ್ಲಿಂದ ಹೊರಗೆ ಲೋಕಾಲೋಕಪರ್ವತ, ದಿಕ್ಪಾಲಕರು, ದಿಗ್ಗಜಗಳು, ಬ್ರಹ್ಮಾಂಡ, ಸೂರ್ಯಮಂಡಲಗಳ ನಂತರ ಸೂರ್ಯನು ದೀರ್ಘಹ್ರಸ್ವ ಸಮಾನಗತಿಗಳಿಂದ ಮಕರಾದಿರಾಶಿಗಳಲ್ಲಿ ಸಂಚರಿಸುವುದು, ಏಕಚಕ್ರದ ಸೂರ್ಯರಥ ಚಲನೆ, ಅಯನ ಋತು, ಮಾಸ, ಪಕ್ಷ, ದಿನ ಈ ಕ್ರಮದಿಂದ ಸಂವತ್ಸರಾದಿ ಗಣನೆ, ನವಗ್ರಹಗಳು ಸಪ್ತರ್ಷಿ ಮಂಡಲ ಧ್ರುವ ಮಂಡಲ ಜ್ಯೋತಿರ್ಲೋಕಧಾರಕನಾದ ಶಿಂಶುಮಾರರೂಪಿ ಹರಿಯ ಮಹಿಮೆಗಳನ್ನು ನಿರೂಪಿಸುತ್ತಾರೆ.

ಅತಲ ವಿತಲ, ಸುತಲ ತಲಾತಲ, ಮಹಾತಲ, ರಸಾತಲ, ಪಾತಾಲಾದಿ ಅಧೋಲೋಕಗಳು ಅಲ್ಲಿಯ ನಿವಾಸಿಗಳ ವೈಭವವನ್ನು ಅನಂತನಾಮಕನಾದ ಸಂಕರ್ಷಣನು ಸರ್ಪರೂಪದಿಂದ ಎಲ್ಲ ಲೋಕಗಳನ್ನು ಧರಿಸಿರುವುದನ್ನು ತಿಳಿಸುತ್ತಾರೆ.

ಇಪ್ಪತ್ತೆಂಟು ವಿಧದ ನರಕಗಳು, ಅವುಗಳಿಗೆ ಕಾರಣವಾದ ಪಾಪಗಳನ್ನು ನಿರೂಪಿಸುತ್ತಾರೆ. ಭೂಮಿ, ದ್ವೀಪ, ನದೀ, ನದ, ಸಮುದ್ರ, ಆಕಾಶ, ಪಾತಾಳ, ದಿಕ್, ನರಕ, ತಾರಾಗಣಗಳೇ ಮೊದಲಾದ ಈ ಬ್ರಹ್ಮಾಂಡವೆಲ್ಲವೂ ಸರ್ವಾಂತರ್ಯಾಮಿಯಾದ ಶ್ರೀಹರಿಯ ಸ್ಥೂಲ ಪ್ರತಿಮೆಯೆಂದು ತಿಳಿಯಬೇಕೆಂದು ಶುಕಾಚಾರ್ಯರು ಪರೀಕ್ಷಿತನಿಗೆ ತಿಳಿಸುತ್ತಾರೆ.

**ಷಷ್ಠಸ್ಕಂಧ**

ನರಕಾದಿಲೋಕಗಳಲ್ಲಿ ಯಮದೂತರಿಂದ ಉಗ್ರಯಾತನೆಯನ್ನು ಹೊಂದದಿರಲು ಉಪಾಯವೇನು ಎಂಬ ಪರೀಕ್ಷಿತನ ಪ್ರಶ್ನೆಗೆ ಉತ್ತರ ರೂಪವಾಗಿ ಶುಕಾಚಾರ್ಯರು ಅಜಾಮಿಳೋಪಾಖ್ಯಾನವನ್ನು ತಿಳಿಸುತ್ತಾರೆ.

ಕಾನ್ಯಕುಬ್ಜ ನಗರದಲ್ಲಿ ಸದಾಚಾರದೂರನಾದ ದಾಸೀಪತಿಯಾದ ಅಜಾಮಿಲನೆಂಬ ಪಾಪಿಗೆ ಎಂಬತ್ತೆಂಟನೆಯ ವಯಸ್ಸಿನಲ್ಲಿ ಮರಣಕಾಲದಲ್ಲಿ ಯಮದೂತರ ದರ್ಶನವಾದಾಗ ತನ್ನ ಮೋಹದ ಮಗು ನಾರಾಯಣನನ್ನು ನೆನೆದೊಡನೆ ಪೂರ್ವಜನ್ಮ ಸುಕೃತದಿಂದ ಸರ್ವನರಕ ಸಂರಕ್ಷಕನಾದ 'ಶ್ರೀಮನ್ನಾರಾಯಣ'ನನ್ನೇ ಗಟ್ಟಿಯಾಗಿ ಕೂಗಿ ಸ್ಮರಿಸುತ್ತಾನೆ.

ಆ ಪುಣ್ಯದ ಫಲವಾಗಿ ವಿಷ್ಣುದೂತರು ಬಂದು ಯಮದೂತರನ್ನು ನಿವಾರಿಸಿದಾಗ ಅವರ ಸಂವಾದದಲ್ಲಿ ಜ್ಞಾನಯುಕ್ತ ಹರಿನಾಮ ಸ್ಮರಣೆಯು ಸಮಸ್ತಪಾಪ ಪ್ರಾಯಶ್ಚಿತ್ತ ರೂಪವೆಂಬ ಮಾತನ್ನು ಕೇಳಿಸಿಕೊಂಡ ಅಜಾಮಿಳನು ಪಶ್ಚಾತ್ತಾಪದಿಂದ ಹರಿದ್ವಾರವನ್ನು ಸೇರಿ ತಪಸ್ಸಿನಿಂದ ಪರಿಶುದ್ಧನಾಗಿ ಮುಕ್ತನಾಗುತ್ತಾನೆ. ಯಮಭಟರ ಪ್ರಶ್ನೆಗೆ ಉತ್ತರವಾಗಿ ಯಮಧರ್ಮರಾಜನು ಮೇಲಿನಂತೆಯೇ ಭಗವನ್ನಾಮಸ್ಮರಣೆಯ ಪಾಪನಿವಾರಕತ್ವವನ್ನೇ ಸಮರ್ಥಿಸುತ್ತಾನೆ.

ಪ್ರಾಚೇತಸರಿಂದ ಸಸ್ಯನಾಶ ಪ್ರಯತ್ನ 'ವೃಕ್ಷತರುಲತಾ ದ್ರೋಹವು ಸಲ್ಲದೆಂಬ ಚಂದ್ರನ ಉಪದೇಶ, ಪ್ರಾಚೇತಸಪುತ್ರನಾದ ದಕ್ಷನಿಂದ ಪುನಃ ಸೃಷ್ಟಿ, ಸೃಷ್ಟಿಶಕ್ತಿಗಾಗಿ ಶ್ರೀಹರಿಯನ್ನು ಕುರಿತು ವಿಂಧ್ಯಾಚಲದಲ್ಲಿ ತಪಸ್ಸು, ಹಂಸಗುಹ್ಯ ಸ್ತುತಿ', ಶ್ರೀಹರಿಯ ದರ್ಶನ, ವರಪ್ರಾಪ್ತಿ, ದಕ್ಷನು ಪಡೆದ ಅರವತ್ತು ಕನ್ಯೆಯರಲ್ಲಿ ಅವರವರ ಪತಿಗಳಿಂದ ಪಡೆದ ಸಂತಾನದಿಂದ ಮೂರು ಲೋಕವೂ ತುಂಬಿದ್ದು, ಅವರವರ ಹೆಸರುಗಳ ವಿವರ, ಅವರಲ್ಲಿ ತ್ವಷ್ಟಾ ಎಂಬುವವನ ಮಗನಾದ ವಿಶ್ವರೂಪನ ಚರಿತ್ರೆಯನ್ನು ತಿಳಿಸುತ್ತಾರೆ.

ಇಂದ್ರನ ಅಗೌರವದಿಂದ ಬೃಹಸ್ಪತಿಯು ವಿಮುಖನಾದಾಗ ದೇವತೆಗಳು ವಿಶ್ವರೂಪನನ್ನೇ ಪುರೋಹಿತನನ್ನಾಗಿ ಸ್ವೀಕರಿಸುತ್ತಾರೆ. ದೈತ್ಯ ನಿಯಂತ್ರಕವಾದ ನಾರಾಯಣವರ್ಮ ಮಂತ್ರವನ್ನೂ ವಿಶ್ವರೂಪನು ಇಂದ್ರನಿಗೆ ಉಪದೇಶಿಸುತ್ತಾನೆ. ವಿಶ್ವರೂಪನು ಅಸುರ ಪಕ್ಷಪಾತಿಯಾಗಿ ರಹಸ್ಯವಾಗಿ ಹವಿರ್ಭಾಗವನ್ನು ಅಸುರರಿಗೆ ನೀಡುವುದನ್ನು ತಿಳಿದ ಇಂದ್ರನು ಅವನನ್ನು ವಧಿಸುತ್ತಾನೆ. ಪುತ್ರಶೋಕದಿಂದ ಕುಪಿತನಾದ ತ್ವಷ್ಟನು ಇಂದ್ರನಾಶಕ್ಕಾಗಿ ನಡೆಸಿದ ಹೋಮದಲ್ಲಿ ಮಂತ್ರೋಚ್ಚಾರಣೆಯ 'ಸ್ವರ' ವ್ಯತ್ಯಾಸದಿಂದ ಇಂದ್ರನಿಂದ ವಧೆ ಹೊಂದುವ ವೃತ್ರಾಸುರನು ಕಾಣಿಸಿಕೊಳ್ಳುತ್ತಾನೆ. ವೃತ್ರನಿಂದ ಭೀತರಾಗಿ ಸ್ತುತಿಸಿದ ದೇವತೆಗಳಿಗೆ ಶ್ರೀಹರಿದರ್ಶನ, ಅಭಯದಾನ, ದಧೀಚಿಯ ದೇಹದಾನ, ಅವನ ಬೆನ್ನುಮೂಳೆಯನ್ನು ಇಂದ್ರನು ವಜ್ರಾಯುಧವಾಗಿ ಧರಿಸಿ ವೃತ್ರನೊಂದಿಗೆ ಯುದ್ಧ ಮಾಡಿದ್ದು, ವೃತ್ರಾಸುರನ ಭಗವದ್ಭಕ್ತಿ ಇಂದ್ರನಿಂದ ವೃತ್ರವಧೆ ಇವುಗಳನ್ನು ನಿರೂಪಿಸುತ್ತಾರೆ.

ದುಷ್ಟ ಅಸುರನಾದ ವೃತ್ರನಿಗೆ ನಾರಾಯಣಸ್ಮರಣೆ ಹೇಗೆ ಬಂತೆಂಬ ಪರೀಕ್ಷಿತನ ಪ್ರಶ್ನೆಗೆ ಉತ್ತರವಾಗಿ ಶುಕರು ಚಿತ್ರಕೇತುವೃತ್ತಾಂತವನ್ನು ಹೇಳುತ್ತಾರೆ. ಶೂರದೇಶದ ಚಿತ್ರಕೇತುರಾಜನು ಸಂತಾನಕ್ಕಾಗಿ ಕಾತರಿಸುವಾಗ ಆಂಗೀರಸರು ಮಾಡಿಸಿದ ಯಾಗದಿಂದ ಹಿರಿಯ ಹೆಂಡತಿಯಲ್ಲಿ ಪುತ್ರಜನನ, ಇತರ ಪತ್ನಿಯರ ವಿಷಪ್ರಯೋಗದಿಂದ ಕುಮಾರನ ಮರಣ, ತಾಯಿ ತಂದೆಯರ ವಿಲಾಪ, ಆಂಗಿರಸ ನಾರದರ ಆಗಮನ, ಸಾಂತ್ವನ, ನಾರದರು ಮೃತಕುಮಾರನನ್ನು ಮಾತನಾಡಿಸುವುದು. ಆ ಜೀವವು ಚಿತ್ರಕೇತು ದಂಪತಿಗಳಿಗೂ ತನಗೂ ಸಂಬಂಧವಿಲ್ಲವೆಂದು ಹೇಳುವುದು, ನಾರದರಿಂದ ಚಿತ್ರಕೇತುವಿಗೆ ಸಂಕರ್ಷಣ ಮಂತ್ರೋಪದೇಶ, ಅದರ ಸಿದ್ಧಿಯಿಂದ ವಿದ್ಯಾಧರಾಧಿಪತಿತ್ವ, ಪಾತಾಳದಲ್ಲಿ ಸಂಕರ್ಷಣ ಮೂರ್ತಿದರ್ಶನ,

ಉಪದೇಶ, ಚಿತ್ರಕೇತುವಿನಿಂದ ಶಿವನಿಂದೆ, ಪಾರ್ವತಿಯಿಂದ ರಾಕ್ಷಸನಾಗೆಂದು ಶಾಪ, ಚಿತ್ರಕೇತುವು ಶಾಪವನ್ನು ಭಗವದಿಚ್ಛೆಯೆಂದು ಸ್ವೀಕರಿಸಿ ತನ್ನ ಕೆಟ್ಟ ಮಾತಿಗಾಗಿ ಕ್ಷಮೆಯಾಚಿಸಿ ಹೊರಟದ್ದು, ಆ ಚಿತ್ರಕೇತುವೇ ವೃತ್ರಾಸುರನಾದ್ದರಿಂದ ಅವನಲ್ಲಿ ಬ್ರಹ್ಮಜ್ಞಾನವಿತ್ತು. ಅಸುರನಾದರೂ ಉತ್ತಮ ಸ್ವಭಾವವಿತ್ತು. ಹರಿಸ್ಮರಣೆಯಿಂದಾಗಿ ಮುಕ್ತನಾದ. ಶ್ರೀಹರಿಯು ಇಂದ್ರರಕ್ಷಕನಾಗಿ ತನ್ನ ಮಕ್ಕಳನ್ನು ಕೊಲ್ಲುವನೆಂಬ ದುಃಖದಿಂದ ದಿತಿಯು ಕಶ್ಯಪನನ್ನು ಪ್ರಾರ್ಥಿಸಿದಾಗ 'ಪುಂಸವನ' ಎಂಬ ವೈಷ್ಣವ ವ್ರತ ಉಪದೇಶ, ಆಕೆಯು ವ್ರತಕಾಲದಲ್ಲಿ ಅಶುಚಿಯಾದಾಗ ಇಂದ್ರನು ಗರ್ಭವನ್ನು ಏಳುಭಾಗಗಳನ್ನಾಗಿ ತುಂಡರಿಸುವುದು. ಅದು ಸಾಯದಿರುವಾಗ ಮತ್ತೆ ಒಂದೊಂದು ಭಾಗವನ್ನೂ ಏಳೇಳಾಗಿ ತುಂಡರಿಸುವುದು, ಆಗಲೂ ಸಾಯದಿರುವಾಗ ಆ ನಲವತ್ತೊಂಬತ್ತು ಜನರು ಇಂದ್ರನಿಂದ ಸೋದರರಂತೆ ಸ್ವೀಕೃತರಾಗಿ ಮರುತ್ತುಗಳೆಂಬ ದೇವತಾಗಣಕ್ಕೆ ಸೇರಿದ್ದು, ಪುಂಸವನ ವ್ರತವಿಧಾನ ನಿರೂಪಣೆಯೊಂದಿಗೆ ಷಷ್ಠಸ್ಕಂಧ ಪೂರ್ಣವಾಗುತ್ತದೆ.

**ಸಪ್ತಮ ಸ್ಕಂಧ**

ರಾಜಸೂಯಯಾಗದಲ್ಲಿ ಭಗವನ್ನಿಂದಕನಾದ ಶಿಶುಪಾಲನು ಶ್ರೀಕೃಷ್ಣನಲ್ಲೇ ಸಾಯುಜ್ಯ ಹೊಂದಿದ್ದನ್ನು ಕಂಡು ಅಚ್ಚರಿಯಿಂದ ಪ್ರಶ್ನಿಸಿದ ಯುಧಿಷ್ಠಿರನಿಗೆ ನಾರದರು ಭಗವಂತನಲ್ಲಿ ಗುಣ ವೈಷಮ್ಯವಿಲ್ಲವೆಂದು ತಿಳಿಸುತ್ತಾರೆ. ಕಾಮ, ದ್ವೇಷ, ಭಯ, ಸಂಬಂಧ ಹಾಗೂ ಸ್ನೇಹ ಮೊದಲಾದ ಭಾವಗಳಿಂದ ಭಕ್ತಿಯುಕ್ತರಾಗಿ ಸೇವಿಸಿದ ಎಲ್ಲರಿಗೂ ಒಲಿದಿರುವನೆಂಬುದಕ್ಕೆ ಶಿಶುಪಾಲನೇ ಉದಾಹರಣೆಯೆನ್ನುತ್ತಾರೆ. ವೈಕುಂಠದ ದ್ವಾರಪಾಲಕರಾದ ಜಯ-ವಿಜಯರು ಸನಕಾದಿಗಳನ್ನು ತಡೆದು, ಶಾಪದ ಫಲವಾಗಿ ಹಿರಣ್ಯಕಶಿಪು-ಹಿರಣ್ಯಾಕ್ಷರಾಗಿ ಜನಿಸಿದಾಗ, ಹಿರಣ್ಯಕಶಿಪುವು ತನ್ನ ಪುತ್ರನಾದ ಭಗವದ್ಭಕ್ತನಾದ ಪ್ರಹ್ಲಾದನಲ್ಲಿ ದ್ವೇಷಮಾಡಿ ನೃಸಿಂಹರೂಪಿ ಶ್ರೀಹರಿಯಿಂದಲೂ, ಹಿರಣ್ಯಾಕ್ಷನು ವರಾಹರೂಪಿಯಿಂದಲೂ ಮಡಿಯುತ್ತಾರೆ. ನಂತರ ರಾವಣ-ಕುಂಭಕರ್ಣರಾಗಿ ಶ್ರೀರಾಮನಿಂದಲೂ; ಈಗ ಶಿಶುಪಾಲ-ದಂತವಕ್ರರಾಗಿ ಶ್ರೀಕೃಷ್ಣನಿಂದಲೂ ಹತರಾಗಿ ಪಾಪಮುಕ್ತರಾಗಿ ಭಗವಂತನನ್ನು ಹೊಂದಿದ್ದಾಗಿ ಹೇಳುತ್ತಾರೆ. ಪುತ್ರದ್ವೇಷಕ್ಕೆ ಕಾರಣವನ್ನು ಪ್ರಶ್ನಿಸಿದಾಗ ನಾರದರು ಉತ್ತರಿಸುತ್ತಾರೆ.

ಹಿರಣ್ಯಾಕ್ಷನ ಮರಣದಿಂದ ಕೆರಳಿದ ಹಿರಣ್ಯಕಶ್ಯಪನು ಹರಿಯಲ್ಲಿ ದ್ವೇಷಮಾಡುತ್ತಲೇ ತಾಯಿಯಾದ ದಿತಿ ದೇವಿಗೂ, ತಮ್ಮನ ಹೆಂಡತಿ ಮಕ್ಕಳಿಗೂ ದೇಹದ ಅನಿತ್ಯತ್ವವನ್ನು ಜೀವನ ನಿತ್ಯತ್ವವನ್ನೂ, ಉಪದೇಶಿಸುತ್ತಾ, ಮೃತಸುಯಜ್ಞರಾಜನ ಬಂಧುಗಳಿಗೂ, ವಟುರೂಪದ ಯಮಧರ್ಮನಿಗೂ ನಡೆದ ಸಂವಾದ ರೂಪದ, ಪಾರಿವಾಳಗಳು ಪರಸ್ಪರ ಮೋಹದಿಂದಲೇ ಸರ್ವನಾಶವಾದ ಕತೆಯನ್ನು ನಿರೂಪಿಸುತ್ತಾನೆ.

ಬಳಿಕ ಸಾವಿಲ್ಲದ ಸೋಲಿಲ್ಲದ ವರಪಡೆಯಲು ಹಿರಣ್ಯಕಶಿಪುವು ಮಂದರಗಿರಿಯಲ್ಲಿ ಬ್ರಹ್ಮನನ್ನು ಕುರಿತು ಉಗ್ರ ತಪಸ್ಸು ಮಾಡಿದ್ದು, ಬ್ರಹ್ಮನು ಪ್ರತ್ಯಕ್ಷನಾದಾಗ ಹಿರಣ್ಯಕಶಿಪುವು ನಿನ್ನಿಂದ ಸೃಷ್ಟವಾದ

ಯಾವ ಭೂತಗಳಿಂದಲೂ ಮರಣಬೇಡ ಮುಂತಾದ ವರಗಳನ್ನು ಬೇಡಿ ಪಡೆದದ್ದು; ಲೋಕಪಾಲಕರನ್ನು ಜಯಿಸಿದ್ದು, ದೇವತೆಗಳು ಶ್ರೀಮಹಾವಿಷ್ಣುವನ್ನು ಮೊರೆಹೊಕ್ಕಿದ್ದು, ಹಿರಣ್ಯಕಶಿಪುವು ಪ್ರಹ್ಲಾದನನ್ನು ಹಿಂಸಿಸಿದಾಗ ಸಂಹರಿಸುವುದಾಗಿ ಭಗವಂತ ಅಭಯ ನೀಡಿದ್ದು, ಪ್ರಹ್ಲಾದನ ಸದ್ಗುಣಗಳ ವರ್ಣನೆ ಶಂಡಾಮರ್ಕರೆಂಬ ಗುರುಗಳಲ್ಲಿ ಪ್ರಹ್ಲಾದನ ವಿದ್ಯಾಭ್ಯಾಸ, ಪ್ರಹ್ಲಾದನ ಸಹಜ ಹರಿಭಕ್ತಿ ಪ್ರಕಟವಾದುದು, ನವವಿಧ ಭಕ್ತಿನಿರೂಪಣೆ. ಹಿರಣ್ಯಕಶಿಪು ಕೋಪಗೊಂಡು ಪ್ರಹ್ಲಾದನ ಕೊಲೆಗೆ ವಿವಿಧೋಪಾಯದಿಂದ ಯತ್ನಿಸಿ ವಿಫಲನಾದುದು. ಮತ್ತೆ ನಡೆದ ಶಂಡಾಮರ್ಕರ ಉಪದೇಶವನ್ನು ಗ್ರಹಿಸದೆ ಪ್ರಹ್ಲಾದನು ಗುರುಗಳಿಲ್ಲದ ಸಮಯದಲ್ಲಿ ಆಟಕ್ಕಾಗಿ ಕರೆದ ದೈತ್ಯಬಾಲಕರಿಗೆ ವಿಷಯಸುಖಗಳು ನಶ್ವರವೆಂದೂ, ಭಾಗವತ ಧರ್ಮಾಚರಣೆಗೆ ತಕ್ಕುದಾದ ಮಾನವ ಜನ್ಮವನ್ನು ವ್ಯರ್ಥಮಾಡಿಕೊಳ್ಳದೆ ಬಾಲ್ಯದಿಂದಲೇ ಭಾಗವತಧರ್ಮಗಳನ್ನು ಆಚರಿಸಬೇಕೆಂದೂ ತಿಳಿಸಿ, ಅಜಿತೇಂದ್ರಿಯರ ದುರವಸ್ಥೆಯನ್ನೂ ಮುಕ್ತಿಪ್ರದನಾದ ಶ್ರೀಹರಿಯನ್ನು ಒಲಿಸುವ ಉಪಾಯವನ್ನೂ, ನಾರದರು ತನ್ನ ತಾಯಿಯನ್ನು ಇಂದ್ರನ ಕೈಸೆರೆಯಿಂದ ಬಿಡಿಸಿ ಭಾಗವತಧರ್ಮಗಳನ್ನು ಆತ್ಮಜ್ಞಾನವನ್ನು ಉಪದೇಶಿಸಿದಾಗ ತಾನು ಗರ್ಭದಲ್ಲೇ ಶ್ರವಣಮಾಡಿ ತಿಳಿದಿದ್ದನ್ನೂ, ಆತ್ಮಾನಾತ್ಮವಿವೇಕವನ್ನೂ ಭಾಗವತ ಧರ್ಮಸ್ವರೂಪಗಳನ್ನು ಉಪದೇಶಿಸಿದ್ದು; ಕೆರಳಿ ಪ್ರಶ್ನಿಸಿದ ಹಿರಣ್ಯಕಶಿಪುವಿಗೆ ಸರ್ವತ್ರವ್ಯಾಪ್ತನಾದ ಹರಿಯೇ ಜಗದ್ರಕ್ಷಕನೆಂದು ಪ್ರಹ್ಲಾದನು ಹಿತವಚನ ಹೇಳಿದ್ದು, ಪ್ರಹ್ಲಾದನನ್ನು ಕೊಲ್ಲುವುದಾಗಿ ಆರ್ಭಟಿಸಿ, ಎಲ್ಲೆಲ್ಲೂ ಇರುವುದಾದರೆ ಕಂಬದಲ್ಲೂ ಬರಲೆಂದು ಹಿರಣ್ಯಕಶಿಪುವು ಕಂಭವನ್ನು ಹೊಡೆದಾಗ ಉಗ್ರವಾದ ನೃಸಿಂಹರೂಪ ಪ್ರಾದುರ್ಭವಿಸಿದ್ದು, ಯುದ್ಧ, ನೃಸಿಂಹನ ಉಗುರುಗಳಿಂದಲೇ ಹಿರಣ್ಯಕಶಿಪುವಿನ ಸಂಹಾರ, ಸಕಲದೇವತೆಗಳು ಗೈದ ನೃಸಿಂಹಸ್ತುತಿ, ಅದರಿಂದ ಶಾಂತನಾಗದ ನೃಸಿಂಹನನ್ನು ಬ್ರಹ್ಮದೇವರ ಆಜ್ಞೆಯಂತೆ ಪ್ರಹ್ಲಾದನು ವಿಸ್ತಾರವಾಗಿ ಸ್ತುತಿಸುವುದು, ಶಾಂತನಾದ ನೃಸಿಂಹನು ವರವನ್ನು ಅನುಗ್ರಹಿಸಿದ್ದು, ಇತ್ಯಾದಿ ಪ್ರಸಂಗಗಳನ್ನು ವಿಸ್ತಾರವಾಗಿ ತಿಳಿಸುತ್ತಾರೆ.

ಯುಧಿಷ್ಠಿರನ ಪ್ರಾರ್ಥನೆಯಂತೆ ನಾರದರು ತ್ರಿಪುರ ಸಂಹಾರ ಸಂದರ್ಭದಲ್ಲಿ ಶಿವನ ಬಾಣದಿಂದ ಹತರಾದ ರಾಕ್ಷಸರನ್ನು ಮಯಾಸುರನು ತಾನು ನಿರ್ಮಿಸಿದ ಅಮೃತದ ಬಾವಿಯಲ್ಲಿ ಹಾಕಿ ಬದುಕಿಸಿಕೊಂಡಾಗ ಶ್ರೀವಿಷ್ಣುವು ಗೋರೂಪದಿಂದ ಆ ಬಾವಿಯ ಅಮೃತವನ್ನು ಕುಡಿದಿದ್ದು ವಿಷ್ಣು ಮಾಯೆಯನ್ನೆದುರಿಸದೆ ಮಯನು ಕೈಚೆಲ್ಲಿ ಕುಳಿತದ್ದು, ಶ್ರೀಹರಿಯು ತನ್ನ ಶಕ್ತಿಯಿಂದ ಶಿವನಿಗೆ ಆಯುಧಗಳನ್ನು ಒದಗಿಸಿಕೊಟ್ಟು ತ್ರಿಪುರ ಜಯಕ್ಕೆ ಕಾರಣನಾದ ಮಹಾತ್ಮೆಯನ್ನು ತಿಳಿಸುತ್ತಾರೆ.

ಸರ್ವರಿಗೂ ಅನ್ವಯವಾಗುವ ಮೂವತ್ತು ಭಾಗವತ ಧರ್ಮಗಳು, ಚಾತುರ್ವರ್ಣ ಧರ್ಮಗಳು ಸ್ತ್ರೀಧರ್ಮ, ಬ್ರಹ್ಮಚರ್ಯಾದಿ ಆಶ್ರಮಧರ್ಮಗಳು, ಪಂಚಯಜ್ಞಗಳು, ಪ್ರಹ್ಲಾದ-ಅಜಗರ ಸಂವಾದ

ರೂಪವಾದ ಪರಮಹಂಸಧರ್ಮಗಳು ಹಾಗೂ ಮೋಕ್ಷ ಧರ್ಮಗಳನ್ನು ನಾರದರು ಯುಧಿಷ್ಠಿರನಿಗೆ ಉಪದೇಶಿಸಿದರೆಂದು ಶುಕಾಚಾರ್ಯರು ತಿಳಿಸುತ್ತಾರೆ.

**ಅಷ್ಟಮ ಸ್ಕಂಧ**

ಇದುವರೆಗೆ ಸ್ವಾಯಂಭುವ ಮನುವಂಶ ಚರಿತ್ರೆಯನ್ನು ಹೇಳಿ ಅಷ್ಟಮ ಸ್ಕಂಧದಲ್ಲಿ ಇತರ ಮನ್ವಂತರಗಳ ವಿಷಯವನ್ನು ಹೇಳಲಾರಂಭಿಸುತ್ತಾರೆ.

ಸ್ವಾಯಂಭುವ ಮನುವು ಉಪನಿಷತ್ತನ್ನು ಜಪಿಸುತ್ತಿರುವಾಗ ಅವನನ್ನು ತಿನ್ನಲು ಬಂದ ರಾಕ್ಷಸರನ್ನು ಯಜ್ಞನಾಮಕ ಶ್ರೀಹರಿಯು ಮಡುಹಿ, ತಾನೇ ಇಂದ್ರನಾಗಿ ದೇವಲೋಕವನ್ನಾಳುತ್ತಾನೆ. ನಂತರ ಸ್ವಾರೋಚಿಷ, ಉತ್ತಮ, ತಾಪಸ ಮನ್ವಂತರಗಳನ್ನು ತಿಳಿಸುತ್ತಾರೆ. ತಾಪಸ ಮನ್ವಂತರದಲ್ಲಿ ಹರಿಮೇಧ ಮತ್ತು ಹರಿಣೀ ದೇವಿಯಲ್ಲಿ ಅವತರಿಸಿದ ಹರಿನಾಮಕನಾದ ವಿಷ್ಣುವು ಮಕರದಿಂದ ಗಜೇಂದ್ರನನ್ನು ಬಿಡಿಸುತ್ತಾನೆ. ಅದರ ವಿವರ ಹೀಗಿದೆ. ಕ್ಷೀರಸಮುದ್ರದ ಮಧ್ಯದಲ್ಲಿರುವ ತ್ರಿಕೂಟ ಪರ್ವತದಲ್ಲಿ ಕ್ರೂರ ಮೃಗಗಳನ್ನೂ ಭಯಪಡಿಸುವ ಬಲಿಷ್ಟ ಆನೆಯು ಸರೋವರದಲ್ಲಿದ್ದ ಮಕರದ ಹಿಡಿತದಿಂದ ಸರ್ವಪ್ರಯತ್ನಗಳಿಂದಲೂ ಬಿಡಿಸಿಕೊಳ್ಳಲಾರದೆ ಜನ್ಮಾಂತರ ಸಂಸ್ಕಾರದಿಂದ ಮೃತ್ಯುಮೋಚಕನಾದ ಭಗವಂತನ ನಾಮರೂಪಗಳನ್ನು ವರ್ಣಿಸದೆ ಕೇವಲ ಮಹಿಮೆಯನ್ನು ಸ್ತುತಿಸಿದಾಗಲೂ ಬ್ರಹ್ಮಾದಿ ಇತರ ದೇವತೆಗಳು ಬರದೆ ಶ್ರೀಹರಿಯೇ ಪ್ರತ್ಯಕ್ಷನಾಗುತ್ತಾನೆ. ತನ್ನ ಚಕ್ರದಿಂದ ಮೊಸಳೆಯ ಬಾಯನ್ನು ಸೀಳಿ ಗಜರಾಜನನ್ನುದ್ಧರಿಸುತ್ತಾನೆ. ಆ ಮೊಸಳೆಯ ರೂಪವಳಿದು 'ಹೂಹೂ'ಯೆಂಬ ಗಂಧರ್ವನಾಗುತ್ತಾನೆ. ಗಜರಾಜನೂ ಚಕ್ರಸ್ಪರ್ಶದಿಂದ ಪವಿತ್ರನಾಗಿ ಭಗವಂತನ ಸಾರೂಪ್ಯವನ್ನು ಪಡೆಯುತ್ತಾನೆ. ಹಿಂದಿನ ಜನ್ಮದಲ್ಲಿ ಇಂದ್ರದ್ಯುಮ್ನನೆಂಬ ಪಾಂಡ್ಯರಾಜನು ದೇವ ಪೂಜಾಕಾಲದಲ್ಲಿ ಬಂದ ಅಗಸ್ತ್ಯರನ್ನು ಗೌರವಿಸದೆ ಶಪಿತನಾಗಿ ಜಡಮತಿಯಾದ ಗಜವಾದರೂ ಹರಿಪೂಜಾ ಪ್ರಭಾವದಿಂದ ಭಗವಂತನ ಸ್ಮರಣೆ ತಪ್ಪಲಿಲ್ಲವೆಂದು ತಿಳಿಸುತ್ತಾರೆ. ರೈವತ, ಚಾಕ್ಷುಷ, ಮನ್ವಂತರಗಳನ್ನು ತಿಳಿಸಿ ಚಾಕ್ಷುಷ ಮನ್ವಂತರದಲ್ಲಿ ಅಜಿತನಾಮಕನಾದ ಶ್ರೀಹರಿಯು ಸಮುದ್ರಮಥನವನ್ನು ಮಾಡಿ ದೇವತೆಗಳಿಗೆ ಅಮೃತವನ್ನು ಸಾಧಿಸಿ ಕೊಡುತ್ತಾನೆ. ದೇವಾಸುರ ಕಾಳಗದಲ್ಲಿ ಗತ ಪ್ರಾಣರಾದ ದೇವತೆಗಳ ರಕ್ಷಣೆಗಾಗಿಯೂ ತಾನುಕೊಟ್ಟ ನಿರ್ಮಾಲ್ಯ ಪುಷ್ಪವನ್ನು ಕಡೆಗಣಿಸಿದ ಇಂದ್ರನಿಗೆ ದೂರ್ವಾಸ ಶಾಪದಿಂದ ಐಶ್ವರ್ಯ ಹೀನನಾದ ದೇವೇಂದ್ರನೊಂದಿಗೆ ಬ್ರಹ್ಮಾದಿ ದೇವತೆಗಳು ಪ್ರಾರ್ಥಿಸಿದಾಗ ಶ್ರೀಹರಿಯು ಸಮುದ್ರ ಮಥನಕ್ಕೆ ಸೂಚಿಸುತ್ತಾನೆ.

ಸಂಧಾನದಿಂದ, ಅನ್ಯೋನ್ಯಮೈತ್ರಿಯಿಂದ, ಬಹುಸಾಹಸದಿಂದ ಮಂದರಗಿರಿಯನ್ನು ಕ್ಷೀರಸಮುದ್ರಕ್ಕೆ ತರುವಲ್ಲಿ ದೈತ್ಯದಾನವರು ವಿಫಲರಾದಾಗ ಶ್ರೀಹರಿಯು ತನ್ನ ಒಂದು ಕೈಯಿಂದಲೇ ಮಂದರವನ್ನು

ಗರುಡನ ಮೇಲಿಟ್ಟು ಕ್ಷೀರ ಸಮುದ್ರಕ್ಕೆ ತರಿಸುತ್ತಾನೆ. ವಾಸುಕಿಯನ್ನು ಸುತ್ತಿ ಕಡೆಯುವಾಗ ಪರ್ವತವು ಆಧಾರವಿಲ್ಲದೆ ಮುಳುಗಿದಾಗ ಭಗವಂತನು ಕೂಡಲೇ ಕೂರ್ಮರೂಪದಿಂದ ಅದನ್ನು ಎತ್ತಿ ಹಿಡಿಯುತ್ತಾನೆ. ಅದೇ ಕಾಲಕ್ಕೆ ವಿಷ್ಣುವು ಅಸುರರಲ್ಲೂ, ದೇವತೆಗಳಲ್ಲೂ ವಾಸುಕಿಯಲ್ಲೂ ಮೇಲೆ ಆಕಾಶದಲ್ಲೂ ನೆಲೆಗೊಂಡು ಬೆಟ್ಟದ ಮೇಲ್ತುದಿಯನ್ನು ಧರಿಸಿ, ದೇವಾಸುರರು ಸೋತು ನಿಂತಾಗ ತಾನೇ ಮಥಿಸುತ್ತಾನೆ. ಮೊದಲು ಜನಿಸಿದ ಹಾಲಾಹಲವನ್ನು ದೇವತೆಗಳ ಪ್ರಾರ್ಥನೆಯ ಮೇರೆಗೆ ಮಹರುದ್ರದೇವರು ಪಾನಮಾಡಿ ಜಗತ್ತನ್ನು ರಕ್ಷಿಸುತ್ತಾರೆ. ನಂತರ ಉತ್ಪತ್ತಿಯಾದ ಕಾಮಧೇನುವನ್ನು ಋಷಿಗಳೂ, ಉಚ್ಚೈಶ್ರವಸ್ಸೆಂಬ ಕುದುರೆಯನ್ನು ಬಲಿಯೂ ಸ್ವೀಕರಿಸುತ್ತಾರೆ.

ಐರಾವತವೂ, ದಿಗ್ಗಜಗಳು ಹೆಣ್ಣಾನೆಗಳುಹೊರಬರುತ್ತವೆ. ಕೌಸ್ತುಭವೆಂಬ ರತ್ನವು ಉದಿಸಿ ಶ್ರೀಹರಿಯು ಧರಿಸುತ್ತಾನೆ. ನಂತರ ಪಾರಿಜಾತವೂ ಅಪ್ಸರಾದಿ ಸುರಸ್ತ್ರೀಯರೂ ಹೊರಬರುತ್ತಾರೆ. ಮಹಾಲಕ್ಷ್ಮಿಯು ಉದಿಸಿದಾಗ ದೇವದಾನವ ಮಾನವರೆಲ್ಲರೂ ತಮಗೆ ತಮಗೆ ಎಂದು ಆಶಿಸುತ್ತಾರೆ. ಆ ಕನ್ಯೆಯು ಎಲ್ಲ ದೇವಾಸುರ ಮನುಷ್ಯರ ದೋಷಗಳನ್ನು ನೆನೆದು ಶ್ರೀಹರಿಯೇ ತನಗೆ ಅನುರೂಪನಾದ ವರನೆಂದು ಅಜಿತ ನಾಮಕ ಭಗವಂತನನ್ನೇ ವರಿಸುತ್ತಾಳೆ. ಧನ್ವಂತರೀ ರೂಪದಿಂದ ಮಹಾವಿಷ್ಣುವೇ ಅಮೃತವನ್ನು ತಂದಾಗ ದೈತ್ಯ ದಾನವರೆಲ್ಲರೂ ಕಿತ್ತುಕೊಂಡು ಓಡುವುದು; ತಕ್ಷಣ ಮೋಹಿನಿ ರೂಪದಿಂದ ಎಲ್ಲರನ್ನೂ ಪರವಶಗೊಳಿಸಿ ದೇವತೆಗಳಿಗೆ ಮಾತ್ರ ಅಮೃತ ಹಂಚಿದ್ದು, ದೇವಾಸುರರ ಕಾಳಗ, ಶುಕ್ರಾಚಾರ್ಯನು ಮೃತದೈತ್ಯರನ್ನು ಬದುಕಿಸಿದ್ದು, ಶಿವನು ವಿಷ್ಣುವಿನ ಮೋಹಿನೀ ರೂಪವನ್ನು ನೋಡಲು ಬಯಸಿ ಮೋಹಿತನಾದದ್ದು, ಉಳಿದ ಆರು ಮನ್ವಂತರಗಳ ವಿವರ, ಬಲಿರಾಜನ ದಿಗ್ವಿಜಯ, ಇಂದ್ರನಿಗೆ ರಾಜ್ಯನಷ್ಟ, ಕಶ್ಯಪ ಋಷಿಯ ಉಪದೇಶದಿಂದ ಅದಿತಿದೇವಿಯು ಪಯೋವ್ರತವನ್ನು ಆಚರಿಸಿದಾಗ ಭಗವಂತನು ಅವರಲ್ಲಿ ವಾಮನನನಾಗಿ ಅವತರಿಸುವುದು, ವಟುರೂಪದಿಂದ ಬಲಿಯ ಯಜ್ಞ ಶಾಲೆಗೆ ಬಂದಾಗ ಶುಕ್ರಾಚಾರ್ಯನು ಬಲಿಯನ್ನು ಎಚ್ಚರಿಸುವುದು, ವಟುವು ಕೇವಲ ಮೂರು ಪಾದ ಭೂಮಿ ಕೇಳಿದಾಗ ಬಲಿಯು ಶುಕ್ರ ವಿರೋಧದ ಮಧ್ಯೆಯೂ ದಾನ ನೀಡಿದ್ದು, ವಾಮನನು ತ್ರಿವಿಕ್ರಮನಾಗಿ ಬೆಳೆದು ಬಲಿಗೆ ತನ್ನ ವಿರೂಡ್ರೂಪ ದರ್ಶನ ಮಾಡಿಸಿದ್ದು, ಒಂದು ಪಾದದಿಂದ ಬಲಿಯ ಅಳ್ವಿಕೆಗೆ ಒಳಪಟ್ಟ ಸಕಲ ಭೂಮಂಡಲವನ್ನೂ ಇನ್ನೊಂದು ಪಾದದಿಂದ ನಭೋಮಂಡಲವನ್ನು ವ್ಯಾಪಿಸಿ ಮೂರನೇ ಪಾದವನ್ನು ಎಲ್ಲಿಡಬೇಕೆಂದು ಕೇಳಿದ್ದು, ಬಲಿಯನ್ನೂ ಬಂಧಿಸುವುದು, ಪ್ರಹ್ಲಾದನ ಆಗಮನ, ಬಲಿಯನ್ನು ಸುತಲ ಲೋಕಕ್ಕೆ ತುಳಿದು ಅಲ್ಲಿ ಅವನ ಅಪೇಕ್ಷೆಯಂತೆ ಗದಾಧಾರಿಯಾಗಿ ಬಾಗಿಲು ಕಾಯುತ್ತ ನಿಂತದ್ದು. ಹೀಗೆ ವಾಮನಾವತಾರ ಕತೆ ಮುಗಿಸಿ ಮತ್ಸ್ಯಾವತಾರ ಕತೆಯನ್ನು ಹೇಳುತ್ತಾರೆ. ಹಯಗ್ರೀವನೆಂಬ ಹೆಸರಿನ ದೈತ್ಯನು ವೇದಾಪಹಾರ ಮಾಡಿದಾಗ, ಸತ್ಯವ್ರತನೆಂಬ ರಾಜರ್ಷಿಯ ಬೊಗಸೆಯ ನೀರಿನಲ್ಲಿ ಸಣ್ಣ ಮೀನಿನ ರೂಪದಲ್ಲಿ ಕಾಣಿಸಿಕೊಂಡ ಭಗವಂತನು ಬೇಗ ಬೇಗನೆ

ಬೃಹದ್ಗಾತ್ರಕ್ಕೆ ಬೆಳೆದು ಸಮುದ್ರದಲ್ಲಿ ವಿಹರಿಸಿ ದೈತ್ಯನನ್ನು ಸಂಹರಿಸಿ ವೇದವನ್ನು ಬ್ರಹ್ಮನಿಗೆ ನೀಡಿ ಅನಂತರ ನಡೆದ ಮನುಪ್ರಳಯ ಕಾಲದಲ್ಲಿ ಸತ್ಯವ್ರತನೂ ಸಪ್ತರ್ಷಿಗಳೂ ಕುಳಿತ ಹಡಗನ್ನು ತನ್ನ ಚಿನ್ನದಕೊಂಬಿಗೆ ಕಟ್ಟಿಸಿಕೊಂಡು ಎಳೆಯುತ್ತಾ ಸತ್ಯವ್ರತ ರಾಜನಿಗೆ ತತ್ವಜ್ಞಾನೋಪದೇಶ ಮಾಡುತ್ತಾನೆ.

**ನವಮಸ್ಕಂಧ**

ಸತ್ಯವ್ರತನೇ ಸೂರ್ಯಪುತ್ರನಾದ ವೈವಸ್ವತ ಮನುವಾದಾಗ ಅವನ ಸಂತತಿಯಲ್ಲಿ ಬಂದ ಸೂರ್ಯವಂಶದ ಚರಿತ್ರೆಯನ್ನು ತಿಳಿಸುತ್ತಾರೆ. ಜಲ ಪ್ರಳಯಾನಂತರ ಪರಮಾತ್ಮನ ನಾಭಿಕಮಲದಿಂದ ಚತುರ್ಮುಖ ಬ್ರಹ್ಮನ ಜನನ, ಬ್ರಹ್ಮನ ಮನಸ್ಸಿನಿಂದ ಮರೀಚಿ, ಅವನ ಮನಸ್ಸಿನಿಂದ ಕಶ್ಯಪ, ಕಶ್ಯಪನಿಗೆ ಅದಿತಿದೇವಿಯಲ್ಲಿ ವಿವಸ್ವಂತನೆಂಬ ಸೂರ್ಯ ಜನಿಸಿದ್ದು. ಸೂರ್ಯಪತ್ನಿಯಾದ ಶ್ರದ್ಧಾದೇವಿಗೆ ಇಕ್ಷ್ವಾಕು, ನೃಗ, ಶರ್ಯಾತಿ, ಮೊದಲಾದ ಪುತ್ರರು ಜನಿಸಿದ ಚರಿತ್ರೆಯನ್ನು ತಿಳಿಸುತ್ತಾರೆ. ಸೂರ್ಯನಮಗಳಾದ ಇಳೆಯು ಭಗವದನುಗ್ರಹದಿಂದ ಸುದ್ಯುಮ್ನನೆಂಬ ಗಂಡಾಗಿದ್ದವನು ಮೇರುಪರ್ವತದ ವನಕ್ಕೆ ಬಂದೊಡನೆ(ರುದ್ರಶಾಪದಿಂದ) ಹೆಣ್ಣಾದನು. ಚಂದ್ರಪುತ್ರನಾದ ಬುಧನು ಅವಳನ್ನು ವರಿಸಿದಾಗ ಪುರೂರವನ ಜನನ, ಹೀಗೆ ಆ ವಂಶವನ್ನು ವಿಸ್ತಾರವಾಗಿ ವರ್ಣಿಸುತ್ತಾರೆ. ಶರ್ಯಾತಿಯ ಮಗಳು ಸುಕನ್ಯೆ ವೃದ್ಧನಾದ ಚ್ಯವನ ಋಷಿಯನ್ನು ಮದುವೆಯಾಗಿದ್ದು, ಅಶ್ವಿನೀ ದೇವತೆಗಳ ಅನುಗ್ರಹದಿಂದ ಚ್ಯವನನಿಗೆ ಯೌವ್ವನ ಬಂದದ್ದು; ನಾಭಾಗನಿಗೆ ತಂದೆ ಭಾಗಕೊಡದಿದ್ದರೂ ಅವನು ತಂದೆಯ ಅನುಗ್ರಹದಿಂದ ಮಹರುದ್ರದೇವರ ಕೃಪೆಗೆ ಪಾತ್ರನಾದದ್ದು, ಅವನ ಮಗನಾದ ಅಂಬರೀಷನ ಭಗವದ್ಭಕ್ತಿ, ದೂರ್ವಾಸರಿಂದ ಒದಗಿದ ತೊಂದರೆ, ಭಗವಂತನ ಚಕ್ರವು ದೂರ್ವಾಸರು ಕಳಿಸಿದ ಮಾರಿಕೆಯನ್ನು ಮೂರು ಲೋಕಗಳಲ್ಲೂ ಬಿಡದೆ ಅಟ್ಟಿಸಿಕೊಂಡು ಹೋದಾಗ ದೂರ್ವಾಸರನ್ನು ಬ್ರಹ್ಮ-ರುದ್ರ-ವಿಷ್ಣುಗಳಾರೂ ರಕ್ಷಿಸದೆ ಅಂಬರೀಷನಲ್ಲೇ ಕಳಿಸಿದ್ದು, ಅವನು ಚಕ್ರವನ್ನು ಪ್ರಾರ್ಥಿಸಿ ದೂರ್ವಾಸನನ್ನು ಸಂತೈಸಿದ ಕತೆಯನ್ನೂ ಹೇಳಿದ್ದಾರೆ. ಮಾಂಧಾತ, ಅನರಣ್ಯ, ತ್ರಿಶಂಕು, ಸೌಭರಿ, ಸಗರ, ಹರಿಶ್ಚಂದ್ರ ಅಂಶುಮಂತ, ದಿಲೀಪ ದಶರಥಾದಿ ಸೂರ್ಯವಂಶದ ರಾಜರ ಚರಿತ್ರೆಯನ್ನು ತಿಳಿಸಿ ದಶರಥ ಪುತ್ರನಾಗಿ ಅವತರಿಸಿದ ಶ್ರೀರಾಮಚಂದ್ರನ ಕತೆಯನ್ನು ವಿಸ್ತಾರವಾಗಿ ವರ್ಣಿಸಿದ್ದಾರೆ. ಮುಂದೆ ಲವಕುಶರ ವಂಶವನ್ನು ನಿಮಿಯ ಪರ್ಯಂತ ತಿಳಿಸಿದ್ದಾರೆ.

ಇನ್ನು ಚಂದ್ರವಂಶ ಹೀಗಿದೆ : ಭಗವಂತನಿಂದ ಬ್ರಹ್ಮ, ಬ್ರಹ್ಮಪುತ್ರ ಅತ್ರಿ, ಅತ್ರಿಯ ಮಗನಾಗಿ ಚಂದ್ರ, ಚಂದ್ರನು ಬೃಹಸ್ಪತಿಯ ಪತ್ನಿಯಾದ ತಾರೆಯಲ್ಲಿ ಬುಧನನ್ನು ಪಡೆದದ್ದು, ಬುಧನ ಪುತ್ರನೇ ಪುರೂರವ, ಊರ್ವಶಿ ಒಲಿದು ಬಂದು ಪುರೂರವನೊಂದಿಗೆ ಇದ್ದು, ಅವನು ಷರತ್ತಿಗೆ ತಪ್ಪಿದಾಗ ಹೊರಟು ಹೋದದ್ದು, ಪುರೂರವನುತಪಸ್ಸಿನಿಂದ ಮತ್ತೆ ಊರ್ವಶಿಯನ್ನು ಪಡೆದದ್ದು, ಪುರುವಿನ ವಂಶದಲ್ಲಿ, ಗಾಧಿರಾಜ, ವಿಶ್ವಾಮಿತ್ರರು ಬಂದದ್ದು. ಗಾಧಿಯ ಮಗಳಾದ ಸತ್ಯವತಿಯಲ್ಲಿ ಋಚೀಕನ

ವಂಶದಲ್ಲಿ ಮುಂದೆ ಪರಶುರಾಮಾವತಾರ, ಕಾರ್ತವೀರ್ಯ ಮಥನ, ದುಷ್ಟಸಂಹಾರ, ಮುಂದೆ ನಹುಷ, ಯಯಾತಿ, ಇವರ ಚರಿತ್ರೆ. ಯಯಾತಿಯಿಂದ ದೇವಯಾನಿಯಲ್ಲಿ ಹುಟ್ಟಿದ ಯದುವಂಶದಲ್ಲಿ ಬಂದ ಶೂರ-ವಸುದೇವ ಹಾಗೂ ಶ್ರೀಕೃಷ್ಣನ ಚರಿತ್ರೆಗಳು; ಯಯಾತಿಯಿಂದ ಶರ್ಮಿಷ್ಠೆಯಲ್ಲಿ ಜನಿಸಿದ ಪುರುವಂಶದಲ್ಲಿ ಸುಮತಿ, ರೈಭ್ಯ, ದುಶ್ಯಂತ, ಭರತ, ರಂತಿದೇವ, ಶಂತನು, ಭೀಷ್ಮ, ಮುಂದೆ ಕೌರವರು ಪಾಂಡವರಿಂದ ಆ ವಂಶದ ಕ್ಷೇಮಕಾಂತ ರಾಜನವರೆಗಿನ ಕತೆಯನ್ನು ತಿಳಿಸುತ್ತಾರೆ.

**ದಶಮಸ್ಕಂಧ ಪೂರ್ವಾರ್ಧ**

ಪರೀಕ್ಷಿತನ ಪ್ರಾರ್ಥನೆಯಂತೆ ಶುಕಮುನಿಯು ವಿಸ್ತಾರವಾಗಿ ಶ್ರೀಕೃಷ್ಣಕಥೆಯನ್ನು ವಿವರಿಸುತ್ತಾನೆ ದುಷ್ಟರ ಬಾಧೆ ತಾಳಲಾರದೆ ಭೂದೇವಿ ಬ್ರಹ್ಮನಲ್ಲಿ ಶರಣಾದಾಗ ಬ್ರಹ್ಮಾದಿ ದೇವತೆಗಳು ವಿಷ್ಣುವನ್ನು ಪ್ರಾರ್ಥಿಸಿದಾಗ ಶ್ರೀಕೃಷ್ಣನಾಗಿ ಅವತರಿಸುವ ಸೂಚನೆ ನೀಡಿದ್ದು; ಶೂರವಂಶದ ವಸುದೇವನಿಗೆ ಕಂಸನ ಚಿಕ್ಕಪ್ಪನ ಮಗಳಾದ ದೇವಕಿಯೊಂದಿಗೆ ವಿವಾಹ ಕಾಲದಲ್ಲಿ ಅಶರೀರವಾಣಿ, ದೇವಕಿಯ ಅಷ್ಟಮ ಗರ್ಭದಿಂದ ಕಂಸನಿಗೆ ಮರಣವೆಂಬ ಸೂಚನೆ, ವಸುದೇವ ದೇವಕಿಯರ ಬಂಧನ, ಆರು ಮಕ್ಕಳ ಹತ್ಯೆ ಏಳನೆಯ ಗರ್ಭವನ್ನು ದುರ್ಗೆಯು ದೇವಕಿಯಿಂದ ರೋಹಿಣಿಯ ಉದರಕ್ಕೆ ಹಸ್ತಾಂತರಿಸುವುದು, ಅಷ್ಟಮಗರ್ಭ, ಬ್ರಹ್ಮಾದಿ ದೇವತೆಗಳು ಮಾಡಿದ ಗರ್ಭಸ್ತುತಿ, ಶ್ರೀಕೃಷ್ಣಾವತಾರ, ವಸುದೇವ ದೇವಕಿಯರಿಗೆ ದರ್ಶನ, ಅಭಯದಾನ, ವಸುದೇವನು ಗೋಕುಲದಲ್ಲಿರಿಸಿದ್ದು, ಪೂತನೀಸಂಹಾರ, ಶಕಟಾಸುರ ತೃಣಾವರ್ತ ಸಂಹಾರ, ನಾಮಕರಣ, ಯಶೋದೆಗೆ ಕೃಷ್ಣನ ಬಾಯಲ್ಲಿ ಬ್ರಹ್ಮಾಂಡ ದರ್ಶನ, ಯಶೋದೆ ಒರಳಿಗೆ ಕಟ್ಟಿದಾಗ ಎಳೆದುಕೊಂಡು ಹೋಗಿ ಅರ್ಜುನ ವೃಕ್ಷಗಳನ್ನುರುಳಿಸಿ ನಳಕೂಬರ ಮಣಿಗ್ರೀವರನ್ನು ಅನುಗ್ರಹಿಸಿದ್ದು, ಶ್ರೀಕೃಷ್ಣನ ಅನೇಕ ಬಾಲಲೀಲೆಗಳು, ವತ್ಸಾಸುರ, ಬಕಾಸುರ, ಅಘಾಸುರ ದೇನುಕಾಸುರವಧೆ, ಕಾಳಿಯಾಮರ್ದನ, ನಾಗಪತ್ನಿಯರಿಗೆ ಅಭಯಪ್ರದಾನ, ಬಂಧುಗಳನ್ನು ಕಾಳ್ಗಿಚ್ಚಿನಿಂದ ರಕ್ಷಿಸಿದ್ದು, ವೇಣುಗಾನ, ಗೋಪೀವಸ್ತ್ರಾಪಹರಣ, ಋಷಿಪತ್ನಿಯರಿಗೆ ಅನುಗ್ರಹ, ಇಂದ್ರಯಾಗವನ್ನು ನಿಲ್ಲಿಸಿ ಗೋವರ್ಧನೋತ್ಸವ ಮಾಡಿಸಿದಾಗ ಗೋಕುಲದ ಜನರನ್ನು ಇಂದ್ರ ಸುರಿಸಿದ ಮಳೆಯಿಂದ ರಕ್ಷಿಸಲು ಗೋವರ್ಧನ ಪರ್ವತವನ್ನು ಧರಿಸಿ ನಿಂತದ್ದು, ಶ್ರೀಕೃಷ್ಣನು ವರುಣ ಲೋಕದಿಂದ ನಂದನನ್ನು ಕರೆತಂದದ್ದು, ಕೃಷ್ಣಗೋಪಿಯರಸಲ್ಲಾಪ, ಗೋಪೀಗೀತೆ, ರಾಸಕ್ರೀಡೆ, ಶಂಖಚೂಡ, ವೃಷಭಾಸುರರ ವಧೆ, ಕಂಸನು ಅಕ್ರೂರನನ್ನು ಕಳಿಸುವುದು, ಅಕ್ರೂರಾಗಮನ, ಕೃಷ್ಣ ಬಲರಾಮರು ಅವನೊಂದಿಗೆ ಹೊರಟು ದಾರಿಯ ನದಿಯಲ್ಲಿ ದಿವ್ಯರೂಪ ತೋರಿಸಿದ್ದು, ಮಥುರಾ ಪ್ರವೇಶ, ಕೃಷ್ಣನು ರಜಕನನ್ನು ವಧಿಸಿ, ಸುದಮನೆಂಬ ಮಾಲೆಕಾರನಿತ್ತ ಹಾರ ಧರಿಸಿ, ಕುಬ್ಜೆಯಗಂಧವನ್ನು ಸ್ವೀಕರಿಸಿ, ಧನುರ್ಭಂಗ ಮಾಡಿದ್ದು, ಮರುದಿನ ಶ್ರೀಕೃಷ್ಣನು ಕುವಲಯಾಪೀಡಾ ಎಂಬ ಆನೆಯನ್ನು ವಧಿಸಿ ಮುಷ್ಟಿಕಾಸುರ ಚಾಣೂರರೊಂದಿಗೆ ಮಲ್ಲಯುದ್ಧ ಮಾಡಿ ವಧಿಸಿದ್ದು, ಕಂಸ ಸಂಹಾರ, ಉಗ್ರಸೇನ ರಾಜನಿಗೆ ಪಟ್ಟಾಭಿಷೇಕ ಮಾಡಿದ್ದು,

ಬಲರಾಮ ಕೃಷ್ಣರ ಉಪನಯನ, ಶ್ರೀಕೃಷ್ಣನು ಉದ್ಧವನನ್ನು ಗೋಕುಲಕ್ಕೆ ಕಳಿಸಿ ಗೋಪಿಯರನ್ನು ಸಂತೈಸುವುದು, ಭ್ರಮರಗೀತೆ, ಶ್ರೀಕೃಷ್ಣನು ಅಕ್ರೂರನನ್ನು ಹಸ್ತಿನಾವತಿಗೆ ಕಳಿಸಿ ಪಾಂಡವರ ಕ್ಷೇಮವನ್ನು ವಿಚಾರಿಸಿದ ವಿವರಗಳನ್ನು ಇಲ್ಲಿ ವರ್ಣಿಸಲಾಗಿದೆ.

**ದಶಮಸ್ಕಂಧ ಉತ್ತರಾರ್ಧ**

೧೮ ಬಾರಿ ಜರಾಸಂಧನ ಆಕ್ರಮಣ, ಕಾಲಯವನ ಸಂಹಾರ, ಮುಚುಕುಂದನಿಗೆ ಕೃಷ್ಣ ಅನುಗ್ರಹಿಸಿದ್ದು, ಕೃಷ್ಣನು ರುಕ್ಮಿಣೀ ಪತ್ರ ಸಂದೇಶ ತಿಳಿದು, ಅಪಹರಿಸಿದ್ದು, ಯುದ್ಧ, ರುಕ್ಮಿಯನ್ನು ಅವಮಾನಿಸಿದ್ದು, ಸ್ಯಮಂತಕೋಪಾಖ್ಯಾನ, ಅಕ್ರೂರನಿಗೆ ಮಣಿಯನ್ನು ಕೊಟ್ಟಿದ್ದು, ಜಾಂಬವತಿ ಸತ್ಯಭಾಮೆ ಮಿತ್ರವಿಂದೆ, ನೀಲಾದೇವಿ, ಲಕ್ಷಣಾ ಹಾಗೂ ಕಾಳಿಂದಿಯರ ವಿವಾಹ, ಶ್ರೀಕೃಷ್ಣ ರುಕ್ಮಿಣಿಯರ ಪ್ರೇಮಕಲಹ, ನರಕಾಸುರನನ್ನು ಸಂಹರಿಸಿ ಹದಿನಾರು ಸಾವಿರ ಸ್ತ್ರೀಯರನ್ನು ವಿವಾಹವಾದದ್ದು, ಶ್ರೀಕೃಷ್ಣನಿಗೆ ಪ್ರದ್ಯುಮ್ನನೆಂಬ ಮಗ, ಅನಿರುದ್ಧನೆಂಬ ಮೊಮ್ಮಗ ಜನಿಸಿದ್ದು, ಅನಿರುದ್ಧ ವಿವಾಹ, ಬಾಣಾಸುರಕಥಾ, ನೃಗರಾಜನಿಗೆ ಬಂದ ಶಾಪವನ್ನು ಕಳೆದದ್ದು, ನಾರದ ಮುನಿಯು ಕೃಷ್ಣನ ಸಂಸಾರವನ್ನು ನೋಡಿ ಸ್ತುತಿಸುವುದು, ಪಾಂಡವರಿಂದ ರಾಜಸೂಯಯಾಗ, ಭೀಮನಿಂದ ಜರಾಸಂಧವಧೆ, ಕೃಷ್ಣನಿಗೆ ಅಗ್ರಪೂಜೆ, ಶಿಶುಪಾಲ ಸಂಹಾರ, ದುರ್ಯೋಧನ ಮಾನಭಂಗ, ಸಾಲ್ವವಧೆ, ದಂತವಕ್ರವಧೆ, ಕುಚೇಲೋಪಾಖ್ಯಾನ, ಶ್ರೀಕೃಷ್ಣನ ತಂದೆ ವಸುದೇವ ಹಾಗೂ ಕೃಷ್ಣ ಪತ್ನಿಯರು ಬಂಧುಗಳಿಗೆ ಕೃಷ್ಣ ಕಥೆಯನ್ನು ಹೇಳುವುದು, ಬಲರಾಮ ಕೃಷ್ಣರು ಕಂಸನಿಂದ ಹತರಾದ ಮೃತ ಪುತ್ರರನ್ನು ದೇವಕಿಯ ಅಪೇಕ್ಷೆಯಂತೆ ಪುನಃ ತಂದುಕೊಡುವುದು, ಸುಭದ್ರಾ ವಿವಾಹ, ಶ್ರುತಿಗೀತೆ, ಭೃಗುಮುನಿಯು ತ್ರಿಮೂರ್ತಿಗಳಲ್ಲಿ ವಿಷ್ಣುವೇ ಉತ್ತಮನೆಂದು ನಿರೂಪಿಸುವುದು, ಶ್ರೀಕೃಷ್ಣನ ವಿವಿಧ ಲೀಲೆಗಳನ್ನು ಸಂತತಿಗಳನ್ನು ವರ್ಣಿಸುವುದು ಮುಂತಾದ ಕಥೆಗಳನ್ನು ಶುಕಮುನಿಯು ಪರೀಕ್ಷಿತನಿಗೆ ಉಪದೇಶಿಸುತ್ತಾನೆ.

**ಏಕಾದಶಸ್ಕಂಧ**

ಶ್ರೀಕೃಷ್ಣನು ಭೂಭಾರ ಹರಣಾನಂತರ ಉಳಿದ ಲಕ್ಷಗಟ್ಟಲೆ ಯಾದವ ಸೈನ್ಯವು ಪರಸ್ಪರ ಕಾದಾಡಿ ನಷ್ಟರಾಗಲು ಶಾಪವನ್ನೇ ನಿಮಿತ್ತ ಮಾಡಿದ್ದು, ಯಾದವರು ಸಾಂಬನಿಗೆ ಗರ್ಭವತಿಯ ವೇಷಹಾಕಿ ಪಿಂಡಾರಕ ಕ್ಷೇತ್ರಕ್ಕೆ ಬಂದ ವಿಶ್ವಾಮಿತ್ರ ನಾರದಾದಿ ಮುನಿಗಳೆದುರು ಕರೆತಂದು ಇವಳು ಏನನ್ನು ಹಡೆಯುವಳೆಂದು ಪ್ರಶ್ನಿಸಿದಾಗ ಅವರು 'ನಿಮ್ಮ ಕುಲನಾಶಕವಾದ ಒನಕೆಯನ್ನು' ಎಂದು ಉತ್ತರಿಸಿದ್ದು; ಒನಕೆಯ ಉತ್ಪತ್ತಿ, ಅದನ್ನು ಪುಡಿಮಾಡಿ ಸಮುದ್ರಕ್ಕೆ ಎಸೆದದ್ದು, ಒನಕೆಯ ಬಳೆಯ ಕಬ್ಬಿಣದ ಚೂರನ್ನು ಬೇಟೆಗಾರನು ತನ್ನ ಬಾಣಕ್ಕೆ ಅಳವಡಿಸಿಟ್ಟದ್ದು; ಹೀಗೆ ಯದುಕುಲನಾಶದ ಸಿದ್ಧತೆಯನ್ನು ಹೇಳಲಾಗಿದೆ.

ವಸುದೇವನು ಭಾಗವತ ಧರ್ಮಗಳನ್ನು ಉಪದೇಶಿಸುವಂತೆ ನಾರದರನ್ನು ಕೇಳಿದಾಗ, ಅವರು; ಋಷಭಪುತ್ರರಾದ, ಜಾಯಂತೇಯರೆಂದು ಹೆಸರಾದ(ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ,

ಅವಿಹೋರ್ತ್ರ, ದ್ರುಮಿಲ, ಚಮಸ ಹಾಗೂ ಕರಭಾಜನ)ರೆಂಬ ಋಷಿಗಳಿಗೂ ನಿಮಿರಾಜನಿಗೂ ಆದ ಸಂವಾದವನ್ನು ವಿವರಿಸುತ್ತಾರೆ. ಅಲ್ಲಿ ಭಾಗವತ ಧರ್ಮಗಳ ಉಪದೇಶವು ವಿಸ್ತಾರವಾಗಿ ಬಂದಿದೆ. ಬ್ರಹ್ಮಾದಿ ದೇವತೆಗಳು ದ್ವಾರಕೆಗೆ ಬಂದು ಶ್ರೀಕೃಷ್ಣನ ಅದ್ಭುತ ಮಹಿಮೆಗಳನ್ನು ಸ್ತುತಿಸಿ, ಅವತಾರ ಪರಿಸಮಾಪ್ತಿಗಾಗಿ ಪ್ರಾರ್ಥಿಸುತ್ತಾರೆ. ಉತ್ಪಾತಗಳನ್ನು ಕಂಡುಕೃಷ್ಣನು ಸಕಲ ಯಾದವರನ್ನು ಪ್ರಭಾಸಕ್ಷೇತ್ರಕ್ಕೆ ಕರೆತರುತ್ತಾನೆ. ಭಕ್ತನಾದ ಉದ್ಧವನು ಭೂಲೋಕವನ್ನು ಬಿಟ್ಟು ಹೊರಡಲು ನಿಶ್ಚಯಿಸಿದ. ಒಂದು ಕ್ಷಣವೂ ಬಿಟ್ಟಿರಲು ಬಯಸದೆ ತನ್ನನ್ನೂ ಕರೆದೊಯ್ಯುವಂತೆ ಪ್ರಾರ್ಥಿಸುತ್ತಾನೆ. ಆಗ ಕೃಷ್ಣನು ಅವನಿಗೆ ಕಲಿಯುಗದಲ್ಲಿ ಸಂಸಾರಾವಸ್ಥೆಯಲ್ಲೂ ಭಗವಂತನನ್ನು ಒಲಿಸಿಕೊಳ್ಳುವ ಬಗೆಯನ್ನು ಉಪದೇಶಿಸುತ್ತಾನೆ. ಮಹಾಜ್ಞಾನಿಯಾದ ಅವಧೂತನೊಬ್ಬನನ್ನು ಕಂಡು ಯದು ಮಹಾರಾಜನು ನಿನ್ನ ಆತ್ಮಾನಂದಕ್ಕೆ ಕಾರಣವೇನೆಂದು ಪ್ರಶ್ನಿಸಿದಾಗ ಉತ್ತರಿಸಿದ ಅವಧೂತನು ತಾನು ಇಪ್ಪತ್ನಾಲ್ಕು ಗುರುಗಳಿಂದ ಅಹಂಕಾರ ಮಮಕಾರಗಳನ್ನು ಗೆಲ್ಲುವುದನ್ನು ಕಲಿತುದಾಗಿ ತಿಳಿಸುತ್ತಾನೆ.

ಭೂಮಿಯಿಂದ ನಿರ್ವಿಕಾರತ್ವವನ್ನೂ, ವಾಯುವಿನಿಂದ ನಿರ್ಲಿಪ್ತತೆಯನ್ನೂ, ಜಲದಿಂದ ಸ್ವಭಾವ ಶುದ್ಧಿಯನ್ನೂ, ಈ ಕ್ರಮದಲ್ಲಿ ಭೂಮಿ, ನೀರು, ವಾಯು, ಆಕಾಶ, ಬೆಂಕಿ, ಚಂದ್ರ, ಸೂರ್ಯ, ಕಪೋತ(ಪಾರಿವಾಳ), ಅಜಗರ(ಹೆಬ್ಬಾವು), ಸಮುದ್ರ, ಪತಂಗ, ದುಂಬಿ, ಆನೆ, ಜೇನುಗಾರ, ಜಿಂಕೆ, ಮೀನು, ಪಿಂಗಲೆ, ಕುರರ ಪಕ್ಷಿ, ಮಗು, ಯುವತಿ, ಬಾಣಗಾರ, ಹಾವು ಜೇಡರ ಹುಳು ಹಾಗೂ ಕಣಜಗಳಿಂದ ವಿವಿಧ ಭಾಗವತ ಧರ್ಮಗಳನ್ನು ಕಲಿತುದಾಗಿ ತಿಳಿಸಿದ್ದು; ಮುಂದೆ ಶ್ರೀಕೃಷ್ಣನು ಉದ್ಧವನಿಗೆ ಜ್ಞಾನ ಸಾಧನಗಳನ್ನೂ, ಆತ್ಮನಿಗೆ ದೇಹಸಂಬಂಧವೇ 'ಸಂಸಾರ'ವೆಂದು ಸಂಸಾರ ಲಕ್ಷಣವನ್ನೂ; ಬದ್ಧರು, ಮುಕ್ತರು, ಸಾಧುಗಳು, ಭಕ್ತಿ, ಸತ್ಸಂಗ, ಕರ್ಮಯೋಗ, ಜ್ಞಾನೋತ್ಪತ್ತಿ, ಪ್ರಕಾರ, ಹಂಸೋಪಾಖ್ಯಾನ, ಧ್ಯಾನ, ಧಾರಣ, ಸಮಾಧಿ, ವರ್ಣಾಶ್ರಮ ಧರ್ಮಗಳು, ಜ್ಞಾನ, ಭಕ್ತಿ, ಕ್ರಿಯಾ ಯೋಗಗಳು, ಕಾಮ್ಯಕರ್ಮಾನುಷ್ಠಾನದ ದೋಷಗಳು, ಜನನ ಮರಣ ವಿಚಾರ, ಸಹನೋಪಾಯ ಮತ್ತು ಮನಸ್ಸಂಯಮ, ಸಾಂಖ್ಯಸ್ವರೂಪ, ಸಾತ್ವಿಕ, ರಾಜಸ, ತಾಮಸ ಪ್ರವೃತ್ತಿಗಳ ನಿರೂಪಣ ಮುಂತಾದುವುಗಳನ್ನೂ ಉಪದೇಶಿಸಿದ್ದು; ಒನಕೆಯ ವ್ಯಾಜದಿಂದ ಯಾದವರು ಲಯ ಹೊಂದಿದ್ದು ಹಾಗೂ ಶ್ರೀಕೃಷ್ಣನು ಜರಾನಾಮಕ ವ್ಯಾಧನ ಬಾಣ ವ್ಯಾಜದಿಂದ ವೈಕುಂಠಕ್ಕೆ ತೆರಳಿದ ಸಂದರ್ಭಗಳನ್ನು ತಿಳಿಸಿದ್ದಾರೆ.

### ದ್ವಾದಶ ಸ್ಕಂಧ

ಶುಕಮುನಿಯು ಪರೀಕ್ಷಿತನಿಗೆ ಕಲಿಯುಗದಲ್ಲಿ ಮುಂದೆ ಆಗಿ ಹೋಗುವ ಕೆಲವು ರಾಜವಂಶಗಳ ವಿವರಗಳನ್ನು ತಿಳಿಸುತ್ತಾನೆ. 'ಮಾಗಧರು, ನಂದರು, ಮೌರ್ಯರು, ಶುಂಗರು, ಕಾಣ್ವರು, ಗೊಲ್ಲರು, ಆಂಧ್ರರು, ಕಂಕರು, ಯವನರು, ತುರುಷ್ಕರು, ಪುರುಂಡರು, ಮೌನರು ಹಾಗೂ ಮ್ಲೇಚ್ಛರ ಆಳ್ವಿಕೆಯನ್ನು ತಿಳಿಸಿ, ಕಲಿಯುಗದಲ್ಲಿ ಕಾಲಕ್ರಮೇಣ ಸತ್ಯ, ಶೌಚ, ದಯೆ, ಕ್ಷಮೆ ಮೊದಲಾದ ಗುಣಗಳು ಹಾಳಾಗಿ

ಆಡಳಿತಾತ್ಮಕ, ಸಾಮಾಜಿಕ, ಕೌಟುಂಬಿಕ ಹಾಗೂ ವೈಯಕ್ತಿಕ ನೆಲೆಗಳಲ್ಲಿ ಸಂಭವಿಸುವ ನೈತಿಕ ಅಧಃಪತನ, ಹೀಗೆ ಅಧರ್ಮ ಮಿತಿಮೀರಿದಾಗ ಭಗವಂತನು ಶಂಬಲ ಗ್ರಾಮದಲ್ಲಿ ವಿಷ್ಣುಯಶನೆಂಬ ವಿಪ್ರನಿಗೆ ಮಗನಾಗಿ ಅವತರಿಸಿ ಕಲ್ಕಿ ಎಂದು ಖ್ಯಾತನಾಗಿ ದುಷ್ಟಶಿಕ್ಷಣ-ಶಿಷ್ಟರಕ್ಷಣೆಯ ಮೂಲಕ ಧರ್ಮಸ್ಥಾಪನೆ ಮಾಡುತ್ತಾನೆ. ನಂತರ ಮತ್ತೆ ಕೃತಯುಗ ಪ್ರಾರಂಭವಾಗುತ್ತದೆ. ಚತುರ್ಯುಗಗಳ ಕಾಲಚಕ್ರದ ವೇಗತಿಳಿಯದೆ ರಾಜರು ತುಂಡು ಭೂಮಿಗಾಗಿ ಕಡಿದಾಡುತ್ತಾರೆ. ರಾಜನೆಂದು ಮೆರೆದ ದೇಹವು ಕೊನೆಗೆ ಕೃಮಿ ಅಗ್ನಿ ಅಥವಾ ಮೃಗಗಳ ಪಾಲಾಗುವುದು. ಆದ್ದರಿಂದ ದೇಹದಿಂದ ಧರ್ಮಸಂಪಾದನೆ ಮಾಡಬೇಕೇ ಹೊರತು ಸ್ವಾರ್ಥಪರರಾಗಬಾರದೆನ್ನುತ್ತಾರೆ. ಕೀರ್ತಿವಂತರಾದ ನಹುಷ-ಮಾಂಧಾತ ಸಗರಾದಿ ಚಕ್ರವರ್ತಿಗಳೂ ಸಹಕಾಲವಶರಾದರು. ಆದರೂ ಶರೀರವನ್ನು ಕಾಪಾಡಿಕೊಳ್ಳಲಾಗಲಿಲ್ಲ. ಈ ನಿದರ್ಶನದಿಂದ ವೈರಾಗ್ಯ ತಾಳಬೇಕೆನ್ನುತ್ತಾರೆ. ಚತುರ್ಯುಗಗಳ ಲಕ್ಷಣಗಳನ್ನು ವಿವರಿಸಿ ಕಲಿಯುಗವು ದೋಷನಿಧಿಯಾದರೂ ಭಗವಂತನ ಮಹಿಮೆಗಳ ಕೀರ್ತನ ಮಾತ್ರದಿಂದ ಮುಕ್ತಿಯನ್ನು ಪಡೆಯಬಹುದಾದ ಸತ್ಕಾಲವೆಂದು ಹೇಳುತ್ತಾರೆ. ಬ್ರಹ್ಮಕಲ್ಪದ ಕೊನೆಗೆ ಜಗತ್ತಿನ ಪ್ರಳಯ ನಡೆಯುವ ವಿಧಾನವನ್ನೂ ಭಗವನ್ಮಹಿಮೆಯನ್ನೂ ಉಪದೇಶಿಸಿ ಭಗವಂತನನ್ನು ಚಿಂತಿಸುವಂತೆ ತಿಳಿಸಿ ಶುಕಮುನಿಯು ಹೊರಡುತ್ತಾನೆ.

ವೈರಾಗ್ಯ ಪರನಾದ ಪರೀಕ್ಷಿತನು ಏಕಾಗ್ರತೆಯಿಂದ ಹರಿಧ್ಯಾನರತನಾಗುತ್ತಾನೆ. ತಕ್ಷಕನು ಬಂದು ಪರೀಕ್ಷಿತನ ದೇಹವನ್ನು ಕಚ್ಚಿ ಬೂದಿ ಮಾಡುತ್ತಾನೆ.

ಪರೀಕ್ಷಿತನ ಮಗನಾದ ಜನಮೇಜಯನು ತಕ್ಷಕನ ಮೇಲಿನ ಕೋಪದಿಂದ ಮಾಡಿದ ಸರ್ಪಯಾಗ, ಇಂದ್ರಸಮೇತನಾದ ತಕ್ಷಕನನ್ನು ಆಹುತಿ ನೀಡಹೋದಾಗ ಆಸ್ತೀಕನು ಬಂದು ಸರ್ಪಹಿಂಸೆಯನ್ನು ನಿಲ್ಲಿಸಿದುದನ್ನು ತಿಳಿಸುತ್ತಾರೆ.

ಶೌನಕಾದಿ ಋಷಿಗಳ ಪ್ರಶ್ನೆಗಳಿಗೆ ಉತ್ತರವಾಗಿ ಸೂತರು ವೇದದ ವಿಭಾಗ ಕ್ರಮಗಳು, ಪುರಾಣ ಸಂಹಿತೆಗಳ ಲಕ್ಷಣಗಳು, ಮಾರ್ಕಂಡೇಯನ ತಪೋವರ್ಣನೆ, ನರ-ನಾರಾಯಣ ದರ್ಶನ, ಸ್ತುತಿ, ವರದಾನ, ಮೂರ್ಕಂಡೇಯರಿಗೆ ಭಗವಂತನ ದಿವ್ಯ ಪ್ರಳಯ ಶಕ್ತಿಯ ದರ್ಶನ, ಪಾರ್ವತೀ ಪರಮೇಶ್ವರರ ದರ್ಶನ, ಒಂದು ಕಲ್ಪದಷ್ಟು ಚಿರಂಜೀವತ್ವ ವರದಾನ, ಭಗವಂತನ ಮಾನಸ ಪೂಜಾವಿಧಾನ, ಸೌರಮಂಡಲದ ಉಪಾಸನಾಕ್ರಮ, ಇದುವರೆಗೆ ಉಪದೇಶಿಸಿದ ಶ್ರೀಮದ್ಭಾಗವತದ ಆದ್ಯಂತ ಅನುಕ್ರಮಣಿಕೆ, ಭಾಗವತ ಶ್ರವಣ, ಪಠಣಗಳ ಫಲಸ್ತುತಿಗಳನ್ನು ತಿಳಿಸಿ ಗ್ರಂಥವನ್ನು ಭಗವಂತನಲ್ಲಿ ಸಮರ್ಪಿಸುತ್ತಾರೆ.

೨

## ಹರಿದಾಸರ ಭಾಗವತ ಕಥನ ಕೃತಿಗಳು

### (ಮೊದಲ ಘಟ್ಟದ ಹರಿದಾಸರ 'ಉಪಾಖ್ಯಾನ ಕಥನ' ವಿಧಾನದ ರಚನೆಗಳ ವಿವರ)

| | ಆರಂಭ | ಕವಿ | ವಸ್ತು/ಶೀರ್ಷಿಕೆ | ಪ್ರಕಾರ | ಗಾತ್ರ | ವಿಶೇಷತೆ |
|---|---|---|---|---|---|---|
| ೭ಅ | ಶ್ರೀರಮಾಮಾನಿನೀ.... | ಶ್ರೀಪಾದರಾಜರು | ಶ್ರೀಲಕ್ಷ್ಮೀನೃಸಿಂಹಪ್ರಾದುರ್ಭಾವ ದಂಡಕ | ಗದ್ಯ ದಂಡಕ | ೫:೫:೫:೫ ನಡೆಯ ಪಾದಗಳಲ್ಲಿ ಮುದ್ರಿತವಾಗಿದೆ | |
| ೭ಆ | ನಾರಸಿಂಹನೆಂಬದೇವನು... | ಪುರಂದರದಾಸರು | ನೃಸಿಂಹಾವತಾರ | ಕೀರ್ತನೆ | ೧೪ ನುಡಿಗಳು | |
| ೭ಇ | ಓಂನಮೋನಾರಾಯಣಶೌರಿ... ಕೃತಯುಗದೊಳೊಬ್ಬನತಿ... | ಕನಕದಾಸರು | ನರಸಿಂಹಾವತಾರ (ಪ್ರಹ್ಲಾದಚರಿತ್ರೆ) | ವಾರ್ಧಕ ಷಟ್ಪದಿ | ೩೭ ಪದ್ಯಗಳು | ಉದಯರಾಗ |
| ೧೦ಅ | ರಾಮರಾಮರಾಮರಾಮು... | ಪುರಂದರದಾಸರು | ಸುಧಾಮಚರಿತ್ರೆ ಹಾಡು | ಭೋಗಷಟ್ಪದಿ (ಕುಚೇಲವೃತ್ತ) | ೫೩ ಪದ್ಯಗಳು | |
| ೧೦ಆ | ಪತಿಯ ಪಾದಕ್ಕೆರಗಿ... | ಪುರಂದರದಾಸರು | ಸುದಾಮನ ಹಾಡು | ಸಾಂಗತ್ಯ.. | ೩೬ ಪದ್ಯಗಳು | |
| ೮ಅ | ನಾರಾಯಣಾಯನಮೋ... | ಪುರಂದರದಾಸರು | ಗಜೇಂದ್ರ ಮೋಕ್ಷ | ವಾರ್ಧಕ ಷಟ್ಪದಿ | ಪಲ್ಲವಿ ೧೦ ಪದ್ಯಗಳು | ಉದಯರಾಗ |
| ೮ಆ | ಶ್ರೀನಾಥ ಪಾರ್ವತೀನಾಥ ಶರಣೆಂಬೆ... | ವಾದಿರಾಜರು | ಗಜೇಂದ್ರ ಮೋಕ್ಷ | ಚೌಪದಿ ೫:೫:೫:೩ ಮಾತ್ರೆ | ೫೦ ಪದ್ಯಗಳು | ಉದಯರಾಗ |
| ೮ | ಅದಿತಿದೇವಿಯು ಪಯೋವ್ರತವ | ಪುರಂದರದಾಸರು | ವಾಮನ ಹುಟ್ಟು (ವಾಮನ ಚರಿತ್ರೆ) | ಸಾಂಗತ್ಯ | ೨೮ ಪದ್ಯಗಳು | |
| ೬ | ನಾರಾಯಣ ನಿನ್ನ ನಾಮವನು ನೆನೆದರೆ | ಪುರಂದರದಾಸರು | ಅಜಾಮಿಳ ಚರಿತ್ರೆ | ವಾರ್ಧಕ ಷಟ್ಪದಿ ಷಟ್ಪದಿ | ಸೂಚನಾ ಪದ್ಯ + ೧೦ ಷಟ್ಪದಿ | ಉದಯರಾಗ |

೩

# ಕುಚೇಲೋಪಾಖ್ಯಾನದಲ್ಲಿ ಋಣ ಮತ್ತು ವೃದ್ಧಿ

**(ಮಹಿಳಾ ಪಠ್ಯ)**

ಹರಿದಾಸ ಪರಂಪರೆಯ ಪ್ರಥಮಘಟ್ಟದಲ್ಲಿ ಮಹಿಳೆಯರ ರಚನೆಗಳು ಉಪಲಬ್ಧವಿಲ್ಲದ ಕಾರಣ ಮಹಾಪ್ರಬಂಧದ ಅಧ್ಯಾಯಗಳಲ್ಲಿ 'ಮಹಿಳೆಯೊಬ್ಬಳು ಸಾಧಿಸುವ 'ಋಣ ಮತ್ತು ವೃದ್ಧಿಯ' ಸ್ವರೂಪವನ್ನು ಚರ್ಚಿಸಲು ಸಾಧ್ಯವಾಗಿಲ್ಲ. ನಂತರದ ಕಾಲಘಟ್ಟದಲ್ಲಿ ಬಂದ 'ಹರಪನಹಳ್ಳಿ ಭೀಮವ್ವ' ಎಂಬ ಹರಿದಾಸ ಮಹಿಳೆಯು 'ಸುದಾಮ ಚರಿತ್ರೆ' ಹಾಡನ್ನು ರಚಿಸಿದ್ದಾರೆ. ಅದನ್ನು ಭಾಗವತದ 'ಕುಚೇಲೋಪಾಖ್ಯಾನ'ದೊಂದಿಗೆ ಹೋಲಿಸಿ ನೋಡುವ ಮೂಲಕ ಕವಯತ್ರಿಯು ಸಾಧಿಸಿದ ಋಣ ಮತ್ತು ವೃದ್ಧಿಯ ವಿಶೇಷತೆಗಳನ್ನು ಇಲ್ಲಿ ವಿವರಿಸಲಾಗಿದೆ. ಇಲ್ಲಿಯ ಹಾಡಿನ ಸಾಲುಗಳನ್ನು ಬಳ್ಳಾರಿ ಜಿಲ್ಲೆಯ ಮಹಿಳೆಯರ ಮೌಖಿಕ ಪಾಠದಿಂದ ಆರಿಸಿಕೊಳ್ಳಲಾಗಿದೆ.

ಶ್ರೀಮದ್ಭಾಗವತ ದಶಮಸ್ಕಂಧ ಉತ್ತರಾರ್ಧದ ೯೮-೯೯ನೇ ಅಧ್ಯಾಯಗಳಲ್ಲಿರುವ 'ಕುಚೇಲೋಪಾಖ್ಯಾನ'ವನ್ನು ೧೯ನೇ ಶತಮಾನದ ಕೊನೆಯಲ್ಲಿದ್ದ ಹರಿದಾಸ ಮಹಿಳೆ ಹರಪನಹಳ್ಳಿ ಭೀಮವ್ವನವರು 'ಸುದಾಮನ ಹಾಡು' ಎಂಬ ಹೆಸರಿನಿಂದ ಕನ್ನಡಿಸಿದ್ದಾರೆ. ಈ ರಚನೆಯಲ್ಲಿ ಅವರು ಮೂಲಕ್ಕೆ ಎಷ್ಟು ಋಣಿಯಾಗಿದ್ದಾರೆ ಮತ್ತು ಭಾಗವತದ ಕುಚೇಲೋಪಾಖ್ಯಾನವನ್ನು ಹೇಗೆ ವೃದ್ಧಿಗೊಳಿಸಿದ್ದಾರೆ ಎಂಬುದನ್ನು ನೋಡೋಣ :



ಸಂಸ್ಕೃತ ಭಾಗವತದಲ್ಲಿ ಈ ಉಪಾಖ್ಯಾನವು ಸರಳ ಭಾಷೆಯಲ್ಲಿ ಹಿತಮಿತವಾದ ವಿವರಗಳಿಂದ ಕೂಡಿ ೭೭ ಅನುಷ್ಟುಪ್ ಶ್ಲೋಕಗಳಲ್ಲಿ ರಚಿತವಾಗಿದೆ. ಈ ಕತೆ ಬಹು ಜನಪ್ರಿಯವಾದುದು. 'ಅಯಾಚಿತ ವೃತ್ತಿಯಿಂದ (ಇತರರನ್ನು ಬೇಡದೆ, ನರಸೇವೆ ಮಾಡದೆ, ದೈವದತ್ತವಾಗಿ ಬಂದ ವಸ್ತುಗಳಲ್ಲಿ) ತೃಪ್ತನಾಗಿದ್ದ ಕುಟುಂಬಿಯಾದ ಬಡ ಬ್ರಾಹ್ಮಣನೊಬ್ಬನು ತನ್ನ ಹೆಂಡತಿಯ ಸೂಚನೆಯಂತೆ ದ್ವಾರಕೆಗೆ ಬಂದು ಕೃಷ್ಣನನ್ನು ಕಂಡು ಸತ್ಕೃತನಾಗಿ ತಾನು ತಂದ ಅವಲಕ್ಕಿಯನ್ನು ಕೊಡಲಾರದೆ ಸಂಕೋಚದಿಂದ ಇದ್ದಾಗ ಕೃಷ್ಣನೇ ಸಲಿಗೆಯಿಂದ ಅದನ್ನು ಸ್ವೀಕರಿಸಿ ಅಕ್ಷಯ ಸಂಪತ್ತನ್ನಿತ್ತ'-ಕಥಾವಸ್ತು ಇಲ್ಲಿದೆ.

ಭೀಮವ್ವನವರು ೧೯೩(ಭೋಗ ಷಟ್ಪದಿಯ ಲಯದಲ್ಲಿ ಬರೆದ) ಪದ್ಯಗಳಿಂದ ಕೂಡಿದ 'ಸುದಾಮ ಚರಿತ್ರೆ ಹಾಡಿನ ಪ್ರಾರಂಭದಲ್ಲಿ; ಗಣಪತಿ, ಸರಸ್ವತಿ, ಇತರ ಎಲ್ಲ ದೇವತೆಗಳು ಮತ್ತು ಕೃಷ್ಣನನ್ನು ವಂದಿಸಿ ಲಕ್ಷ್ಮೀವಲ್ಲಭನ ಕಥೆಗಳನ್ನು ವರ್ಣಿಸುವುದಾಗಿ ಪ್ರತಿಜ್ಞೆ ಮಾಡಿದ್ದಾರೆ.

'ಶ್ರೀ ಕೃಷ್ಣನಿಗೆ ವೈರಾಗ್ಯಶಾಲಿಯಾದ, ಜಿತೇಂದ್ರಿಯನಾದ, ಪ್ರಶಾಂತನಾದ, ದೇವರು ಕೊಟ್ಟಿದ್ದರಲ್ಲೇ ತೃಪ್ತನಾದ, ಗೃಹಸ್ಥಾಶ್ರಮಿಯಾದ, ಕುಚೇಲನೆಂಬ ಬ್ರಹ್ಮಜ್ಞಾನಿಯಾದ ಬ್ರಾಹ್ಮಣನು ಸ್ನೇಹಿತನಾಗಿದ್ದನು ಎಂಬ ಮೂಲದ ಮಾತನ್ನು

'ಸ್ವಾಮಿ ಶ್ರೀ ಕೃಷ್ಣರ ಪ್ರೇಮವನ್ನು ಪಡೆದ
ಸುಧಾಮನೆಂಬೊ ಭಕ್ತ ಬಡವ ಬ್ರಾಹ್ಮಣಿದ್ದನು'

ಎಂದು ಸಂಗ್ರಹಿಸಿದ್ದಾರೆ. 'ಸ್ನಾನಜಪವು ಹೋಮನಿತ್ಯ ನೇಮ ನಿತ್ಯದಿಂದ' ಇತ್ಯಾದಿಯಾಗಿ ಅವನ ಗುಣಗಳನ್ನು ಹೊಸದಾಗಿ ವರ್ಣಿಸಿದ್ದಾರೆ. ಭಾಗವತದಲ್ಲಿಲ್ಲದ ಮಕ್ಕಳ ಪ್ರಸ್ತಾಪ ಇಲ್ಲಿದೆ. 'ಅಶನವಿಲ್ಲ ವಸನವಿಲ್ಲ ಹಸಿದ ಮಕ್ಕಳನ್ನು ನೋಡಿ ವ್ಯಸನದಿಂದ ಪತಿಯ ಪಾದಕೆರಗಿನಿಂತ' ಕುಚೇಲ ಪತ್ನಿಯು ತಂದೆ ತಾಯಿ ಬಂಧು ಬಳಗರಲ್ಲಿ ನಿಮಗೆ ಯಾರೂ ಆಪ್ತರಿಲ್ಲವೆ ಎಂದು ಪ್ರಶ್ನಿಸುತ್ತಾಳೆ. ಹೆಂಡತಿಯ ಮಾತನ್ನು ಕೇಳಿ

'ಆದಿಮೂರುತಿ ಕೃಷ್ಣ ಓದಿಕೊಂಡ ಗೆಳೆಯನೊಬ್ಬ
ಮಾಧವನ ಬಿಟ್ಟು ಮತ್ತೊಬ್ಬರಿಲ್ಲವು'

ಎಂದು ಹೇಳುತ್ತಾನೆ. 'ಆತನಾ ಕಂಡು ಬಂದರ್ಯಾತರಾ ದಾರಿದ್ರ್ಯವೆಮಗೆ ಪ್ರೀತಿಯಿಂದ ಹೋಗಿ ಬನ್ನಿ' ಎಂದು ನುಡಿದು ಲಕ್ಷ್ಮೀಪತಿಯ ದರ್ಶನಕ್ಕೆ ಒಯ್ಯಲು ಮೂರು ಮುಕ್ಕು ಅವಲಕ್ಕಿಯನ್ನು ತಿರಿದು ತಂದು ಗಂಟುಕಟ್ಟಿಕೊಡುತ್ತಾಳೆ.

ಸುದಾಮನು ಭಾಗವತದಲ್ಲಿ ನೇರವಾಗಿ ದ್ವಾರಕೆ ತಲುಪುತ್ತಾನೆ. ಆದರೆ ಭೀಮವ್ವನವರು ಸುದಾಮನ ಪ್ರಯಾಣದ ವಿವರಗಳನ್ನು ಚಿತ್ರಿಸುತ್ತಾ ಅವನ ವರ್ತನೆಗಳ ಮೂಲಕ ಭಕ್ತ ಜೀವನವನ್ನು ಸೂಕ್ತವಾದ

ವಸ್ತು ಪ್ರತಿರೂಪ(objective correliative)ಗಳ ಮೂಲಕ ವರ್ಣಿಸಿದ್ದಾರೆ.

'ಹಾದಿಲ್ಹರಿವ ಜಲವ ಕಂಡು ಸ್ನಾನವನ್ನು ಮಾಡಿಕೊಂಡು |
ವೇದ ಪುಸ್ತಕದ್ವಾಲೆ ಓದುತಿದ್ದನು.' ||

ಮಲ್ಲೆ ಮಲ್ಲಿಗಿ ಜಾಜಿ ಅಲ್ಲೆ ಇದ್ದ ಫಲಗಳ |
ಲಕ್ಷ್ಮಿವಲ್ಲಭಾಗೆ ಅರ್ಪಿತೆಂದು ನಡೆದನು ||

ಹೀಗೆ ಸುದಾಮನ ಯಾತ್ರೆಯ ವಿವರಗಳನ್ನು ಹೇಳುವಾಗ ಅವನ ಸದಾಚಾರ ಮತ್ತು ಮಾನಸ ಪೂಜೆಯನ್ನು ತಮ್ಮದೇ ಆದ ಮಾತುಗಳಲ್ಲಿ ಚಿತ್ರಿಸಿದ್ದಾರೆ.

ಹೀಗೆ ನಡೆದು ಬಂದ ಸುದಾಮನು ದ್ವಾರಕಾಪುರವನ್ನು ತಲುಪಿ ಕೃಷ್ಣನ ಅರಮನೆಯ ಬಾಗಿಲಲ್ಲಿ ನಿಂತನು. ದ್ವಾರಪಾಲಕರು ಇವನ ಪರಿಚಯವನ್ನು ಕೇಳಿದಾಗ ನಾನು ನಾರಾಯಣನ ಸಖನೆಂದು ಹೇಳಿದನು. ಚಾರಕರು ಕೃಷ್ಣನಿಗೆ, ಬಂದ ಬ್ರಾಹ್ಮಣನ ವಿಷಯವನ್ನು ಹೇಳುತ್ತಾ :

'ಅಸ್ಥಿಚರ್ಮ ಆತನಂಗಕ್ಹತ್ತಿಕೊಂಡ ಹೊಟ್ಟೆ ಬೆನ್ನು
ಮತ್ತೆ ನಡೆಯಲಾರ ಮಾತನಾಡಲಾರನು'

'ಒಡೆದ ಗುಂಡುತಂಬಿಗ್ಗೆ ಬಡಿದ ಅದರ ಸುತ್ತ ಮ್ಯಾಣ
ಹೊತ್ತಗಂಟ ನೆಲಕೆ ಇಡದೆ ಬರುತಲಿದ್ದನು'

'ಮರದ ಗುಂಡು ಸರದಗುದ್ದಿ ಕೊರಳೊಳೆಗೆ ಹಾಕಿಕೊಂಡು
ಎರಳೆ ಚರ್ಮಸುತ್ತಿ ಎಡದ ಬಗಲಿಲಿಟ್ಟನು'

ದೊಡ್ಡನಾಮ ಹಚ್ಚಿಕೊಂಡು ಮುದ್ರೆಗಳನೆ ಒತ್ತಿಕೊಂಡು
ಶುದ್ಧ ಚಂದ್ರಮನಕಾಂತಿ ಹೋಲುತಿದ್ದನು.

ಛಿದ್ರವಾದ ಬಟ್ಟೆನುಟ್ಟು ಚಿಗುರು ತುಳಸಿ ಕಿವಿಯಲಿಟ್ಟು
ಪದ್ಮನಾಭ! ಪಾಲಿಸೆಂದು ಕೂಗುತಿದ್ದನು'

ಎಂದು ವಿವರಿಸಿದಂತೆ ಇಲ್ಲಿ ಭೀಮವ್ವನವರು ಸುದಾಮನ ಸದಾಚಾರ, ಭಕ್ತಿ, ಬಡತನಗಳನ್ನು ಹೀಗೆ ತಮ್ಮದೇ ಆದ ಮಾತುಗಳಿಂದ ನಿರೂಪಿಸಿ ಮೂಲ ಭಾಗವತದಲ್ಲಿಲ್ಲದ ವಿಷಯವನ್ನು 'ಅನುಕ್ತ ಕಥನ' ಮಾಡುವ ಮೂಲಕ ಸೊಗಸಾಗಿ ವೃದ್ಧಿಗೊಳಿಸಿದ್ದಾರೆ.

ಶ್ರೀಕೃಷ್ಣ ಸುದಾಮನ ಹೆಸರು ಕೇಳಿದೊಡನೆ ಕರೆತಂದು ಸಿಂಹಾಸನದ ಮೇಲೆ ಕೂಡಿಸಿ ತಾನೇ ಸ್ವತಃ ಕಾಲನ್ನು ತೊಳೆದು ಚಾಮರ ಹಾಕಿ ಉಪಚರಿಸುತ್ತಾನೆ. ...ಶ್ರೀಕೃಷ್ಣನ 'ಮದುವೆಯಾಯಿತೇನೊ ಸಖನೆ?' ಎಂಬ ಪ್ರಶ್ನೆಗೆ 'ಸೋಳಸಾವೀರ ಸ್ತ್ರೀಯರಾಳುವ ಶ್ರೀರಮಣಕೇಳು ಭಾರ್ಯಳೊಬ್ಬಳಿರುವಳಯ್ಯ ಎನಗೆ' ಎನ್ನುತ್ತಾನೆ ಸುಧಾಮ. ಕೃಷ್ಣನು 'ಅಣ್ಣನಮ್ಮತ್ತಿಗಿ ನಮಗೇನು ಕಳಿಸಿದಾಳು ನಿಮ್ಮ ಹೆಗಲ ಗಂಟು ಬಿಚ್ಚಿ

ತೋರಿಸೆ'ನ್ನುವ ಮಾತುಗಳಲ್ಲಿ ಕನ್ನಡ ನಾಡಿನ ಬಂಧುವಾಚಕ ಪದಗಳ ಬಳಕೆಯಿಂದ ಆತ್ಮೀಯತೆ ಮಡುಗಟ್ಟಿದೆ.

ತಲೆಯುಬಾಗಿ ಮನದಿ ನಾಚಿ ನೆಲವನೋಡುತಿರಲು ವಿಪ್ರ
ಸಲಿಗೆಯಿಂದ ಹೆಗಲಗಂಟ ಬಿಚ್ಚಿಸಿದನು"
ಸುಜನಜನರು ಮಾಡುವಂಥ ಭಜನೆಯೊಂದೆ ಸಾಕು ನಮಗೆ
ರಜತ ಹೇಮ ರತ್ನಾಭರಣವ್ಯಾತಕೆಂದನು?"

ಎಂಬಲ್ಲಿ ಕೃಷ್ಣನ ಭಕ್ತಪ್ರಿಯತೆ ಅತಿ ಸರಳವಾದರೂ ಮೂಲದ ಹತ್ತಾರು ಶ್ಲೋಕಗಳ ಸಾರ ಸಂಗ್ರಹ ರೂಪದಲ್ಲಿ ಚಿತ್ರಿತವಾಗಿದೆ. ಕೃಷ್ಣ ಸುದಾಮ ತಂದ ಅವಲಕ್ಕಿಯನ್ನು ಮೆಲ್ಲುವಾಗ:

"ಮೂರನೇ ಮುಷ್ಟಿಗೆ ನಾರಿ ರುಕ್ಮಿಣಿಯು ಬಂದು
ಕೃಷ್ಣಗೇನು ಕೊಡುವೆ ವಿಪ್ರ ಎಂದು ನುಡಿದಳು
ಅಕ್ಕಕಳಿಸಿದ ಅವಲಕ್ಕಿ ನಮಗಿಲ್ಲದ್ಹಾಗೆ
ಮುಕ್ಕಿಬಿಡುವರೇನೊ ಕೃಷ್ಣ' ಎಂದು ನುಡಿದಳು.

ಸಂಸ್ಕೃತ ಭಾಗವತದಲ್ಲಿ ರುಕ್ಮಿಣಿ ಕೃಷ್ಣನ ಮೂರನೇ ಮುಷ್ಟಿಯನ್ನು ತಡೆದು, "ಲೋಕದ ಒಬ್ಬ ವ್ಯಕ್ತಿಗೆ ಅಗತ್ಯವಾದ ಸಂಪತ್ತು ಲಭಿಸಲು ಎರಡು ಮುಷ್ಟಿ ಅವಲಕ್ಕಿ ಸ್ವೀಕರಿಸಿದ್ದೇ ಸಾಕು" ಎಂದು ಹೇಳುತ್ತಾಳೆ. ಆದರೆ ಅಲ್ಲಿ ಇಲ್ಲಿದ, ಹೆಚ್ಚು ಆಕರ್ಷಕವಾದ ಪ್ರೇಮಕಲಹದ ಒಂದು ಹೊಸ ಸನ್ನಿವೇಶ ವನ್ನು ನಿರ್ಮಿಸಲಾಗಿದೆ. ರುಕ್ಮಿಣಿ ಮೂರನೇ ಮುಷ್ಟಿಯನ್ನು ತಡೆದಾಗ ಶ್ರೀಕೃಷ್ಣನು :

ಇಷ್ಟು ಮಂದಿಯೊಳಗೆ ಎನ್ನ ಮುಷ್ಟಿಹಿಡಿದು ನಿಲ್ಲುವಂಥ |
ಗಟ್ಟಿತನವನೆಲ್ಲಿ ಕಲಿತೆ ಹೇಳೆ ಎಂದನು ||
ಸರ್ವರೊಳಗೆ ಅಧಿಕಳೆಂಬ ಗರ್ವದ ರುಕ್ಮಿಣಿಗೆ |
ಕರೆದು ಬುದ್ಧಿ ಹೇಳಬಾರೆ ಭಾಮೆ ಎಂದನು ||

ಸತ್ಯಭಾಮೆ ಆತ್ಮಾಭಿಮಾನಿಯಾದರೂ ಅಕ್ಕನ ಪಕ್ಷವಹಿಸುತ್ತಾಳೆ.

ಅಕ್ಕಗಾಡೊ ಮಾತ ಕೇಳಿ ಚಿಕ್ಕ ಸತ್ಯಭಾಮೆ ಬಂದು
ಅಕ್ಕರದಿ ಕೃಷ್ಣನೆದುರು ನಿಂತಳಾಗಲೇ ||
ರಂಗನಿಮ್ಮ ಪಟ್ಟದರ್ಧಾಗಿಯಾದ ರುಕ್ಮಿಣಿಗೆ |
ಮುಂಗೈ ಹಿಡಿಯುವುದಕ್ಕೆ ದಾರ ಭಯವು ಎಂದಳು ||"

* * * *

ಈ ನಿಂದಾಸ್ತುತಿಗೆ ಮರುಮಾತನಾಡಲಾಗದೆ ಶ್ರೀಕೃಷ್ಣ ಅವರಿಗೆಲ್ಲಾ ಅವಲಕ್ಕಿಯನ್ನು ಕೊಟ್ಟನೆಂಬ ಸಂಪೂರ್ಣ ಚಿತ್ರ ಭೀಮವ್ವನವರ ಪ್ರತಿಭೆಯ ಸೃಷ್ಟಿ ಮತ್ತು ಸ್ತ್ರೀ ಸಹಜವಾದ ನೈಜ ಅನ್ಯೋನ್ಯತೆಯ ದ್ಯೋತಕವಾಗಿದೆ.

ಶ್ರೀಕೃಷ್ಣನು ಸುದಾಮನೊಂದಿಗೆ ತನ್ನ ಗುರುಕುಲದ ನೆನಪುಗಳನ್ನು ಹೇಳಿಕೊಳ್ಳುವ ಮೂಲಕ ತಮ್ಮ ಸ್ನೇಹವನ್ನು ಗಟ್ಟಿಗೊಳಿಸಿಕೊಳ್ಳುವ ಸಂದರ್ಭ ಎರಡು ಕಡೆಯೂ ಇದೆ.

'ಗಿಡಕೆ ಒಬ್ಬರ್ಹತ್ತಿಕೊಂಡು ಮಿಡುಕುತ ನಿಂತಿರಲು |
ಹುಡುಕುತಾ ಬಂದರಾಗ ನಮ್ಮ ಗುರುಗಳು ||'

ಎಂಬ ಸ್ಮೃತಿ ಚಿತ್ರ ಕನ್ನಡದಲ್ಲಿ ಚೆನ್ನಾಗಿದೆ. ಮಕ್ಕಳಿಲ್ಲದೆ ತಮ್ಮನ್ನು ರಕ್ಷಿಸಿದ ಗುರುಗಳಿಗೆ ಗುರುದಕ್ಷಿಣೆಯಾಗಿ ಪುತ್ರದಾನವನ್ನು ನೀಡಿದ್ದನ್ನು ಶ್ರೀಕೃಷ್ಣನ ಬಾಯಿಂದ ಹೇಳಿಸಿ ಓದುಗರಿಗೆ ಆ ವಿಷಯ ತಿಳಿಯುವಂತೆ ಮಾಡಿದ್ದಾರೆ.

ಭಾಗವತದಲ್ಲಿ ಕೃಷ್ಣನು ಸುಧಾಮನಿಗೆ ನೀಡಿದ ಆತಿಥ್ಯವು ಗಂಧ-ಧೂಪ-ದೀಪಾದಿ ಶಿಷ್ಟರೂಪದಲ್ಲಿದೆ. ಭೀಮವ್ವನವರು ಕರ್ನಾಟಕದ ಸಾಂಪ್ರದಾಯಿಕ ವೈದಿಕ ಪರಿಸರದ ಆತಿಥ್ಯವನ್ನು ಇಲ್ಲಿಗೆ ಅಸ್ವಯಿಸಿ ಉತ್ಸಾಹದಿಂದ ವರ್ಣಿಸಿದ್ದಾರೆ.

"ಮಡಿಯ ಜರದ ಮೇಲೆ ಮುತ್ತಿನುಡುದಾರವನು ಸುತ್ತಿ |
ಕಡಗ ಕಂಕಣಗಳನ್ನು ಇಡಲು ಕೊಟ್ಟನು ||

ಕುಡಿಬಾಳೆದೆಲೆಯ ಹಾಕಿ ನಡುವೆ ಜ್ಯೋತಿ ಸಿಂಗರಿಸಿ |
ಕಡಲೆ ಕೋಸುಂಬರ್ಯುಪ್ಪುಕಾಯಿ ಶಾಕವು ||

ಹಪ್ಪಳ ಸಂಡಿಗಿ ಭಕ್ಷ್ಯ ಎಣ್ಣೂರಿಗಿ
ಲಕ್ಷ್ಮಣೀ ಕಾಳಿಂದಿ ತಂದು ಬಡಿಸುತ್ತಿದ್ದರು"

ಭೋಜನ-ತಾಂಬೂಲದ ನಂತರ ದಂತದ್ಹಲಿಗೆ ಮಂಚದಲ್ಲಿ ಸಂಪಿಗೆ ಹೂವಿನ ಹಾಸಿಗೆಯಲ್ಲಿ ಮಲಗಿಸುತ್ತಾನೆ. ಈ ವಿವರಗಳೂ ಭೀಮವ್ವನವರವು.

ಮರುದಿನ ಸುದಾಮ ಹೊರಟಾಗ ಕೃಷ್ಣ ಅಪ್ಪಣೆ ನೀಡುತ್ತಾನೆ. ಆದರೆ ರುಕ್ಮಿಣಿ ಬಾಳ ತಡೆದು ಬಂದಿರೀಗ ಏಳು ಎಂಟು ದಿನದಲಿದ್ದು ಹೋಗಬಹುದೆನ್ನುತ್ತಾಳೆ. 'ಸತಿಯಳೊಬ್ಬಳಿರುವಳಾಕೆ ಜತೆಯುದಾರು ಇಲ್ಲವು ಎಂಬ ಕೌಟುಂಬಿಕ ಕಾರಣವನ್ನು ಹೇಳಿ ಅಪ್ಪಣೆ ಪಡೆದು ಬರುವ ಸುಧಾಮನಿಗೆ ಸೇವಕರು ಛತ್ರ, ಚಾಮರಗಳನ್ನು ಹಿಡಿಯುತ್ತಾರೆ. ಕೃಷ್ಣನೇ ಮುತ್ತಿನ ಪಲ್ಲಕ್ಕಿ ಕಳಿಸಿ ಮೂರು ಹೆಜ್ಜೆದೂರ ಬಂದು ಬೀಳ್ಕೊಡುತ್ತಾನೆ. ಆದರೆ ಪುರದ್ವಾರದ ಹೊರಗೆ ಇದ್ದ ಭಟರು ಸುದಾಮನನ್ನು ತಡೆಯುತ್ತಾರೆ. ಭೀಮವ್ವನ ಪ್ರಕಾರ

"ಅಚ್ಯುತಾನಂತ ಕೊಟ್ಟ ವಸ್ತ್ರ ಆಭರಣವೆಲ್ಲ|
ಬಿಚ್ಚಿಕೊಂಡು ಬಿಳಿಯ ಕೋರಿ ಹಚ್ಚಿಕಳಿಸ್ಯಾರು||"

ಶ್ರೀಮದ್ಭಾಗವತದ ಸುದಾಮ ಬ್ರಹ್ಮಜ್ಞಾನಿ. ಅವಧೂತ, ಅಯಾಚನಾ ವೃತ್ತಿಯಿಂದ ಬದುಕಿದವನು. ಅವನ ಮನಸ್ಸಿಗೆ ವಿಕಾರವೇ ಇಲ್ಲ. ಅವನು ಸಿದ್ಧಪುರುಷ. 'ಎಲ್ಲ ಸಿದ್ಧರು ಯಾರ ಪಾದವನ್ನು

ಶ್ರಯಿಸಿದ್ದಾರೋ ಅಂತಹ ದೇವದೇವನು ನನ್ನ ಪಾದಗಳನ್ನು ಒತ್ತುವುದೇ ಮೊದಲಾದ ಉಪಚಾರಗಳಿಂದ ಸತ್ಕರಿಸಿದ' ಎಂದು ಅವನು ಕೃಷ್ಣನ ಭಕ್ತವಾತ್ಸಲ್ಯವನ್ನು ನೆನೆಯುತ್ತಾನೆ.

"ಅಧನೋಯಂ ಧನಂಪ್ರಾಪ್ಯ ಮಾದ್ಯನ್ನುಚ್ಚೈರ್ನಮಾಂ ಸ್ಮರೇತ್ |
ಇತಿ ಕಾರುಣಿಕೋ ನೂನಂ ಧನಂಮೇ ಭೂರಿನಾದದತ್ ||"

"ದರಿದ್ರನಾದ ಇವನಿಗೆ ಸಂಪತ್ತು ಬಂದರೆ ಮದಿಸಿ ನನ್ನನ್ನು ಸ್ಮರಿಸುವುದನ್ನು ಮರೆತಾನೆಂಬ ಕರುಣೆಯಿಂದ ಆತನು ನನಗೆ ತುಂಬಾ ಸಂಪತ್ತನ್ನು ಕೊಡಲಿಲ್ಲ" ಎಂದುಕೊಳ್ಳುತ್ತಾ ಸ್ಥಿತ ಪ್ರಜ್ಞನಾಗಿ ಕಂಡುಬರುತ್ತಾನೆ.

ಆದರೆ ಭೀಮವ್ವ ಚಿತ್ರಿಸಿದ ಸುದಾಮ ಕುಟುಂಬಿ - ಮನುಷ್ಯ. ಅವನಿಗೆ ಆಸೆ-ನಿರಾಸೆಗಳಿವೆ. ಆದ್ದರಿಂದ ತನ್ನನ್ನು ತಾನು ನಿಂದಿಸಿಕೊಳ್ಳುತ್ತಾನೆ.

"ಎತ್ತಹೋದರೆನ್ನ ಪ್ರಾರಬ್ಧಬೇರಾಗ್ವದೇ |
ಸತ್ಯವಾಗಿ ಬ್ರಹ್ಮಬರಹ ತಪ್ಪದೆಂಬನು ||

ಭಾಗ್ಯವಂತರಲ್ಲಿ ನಿರ್ಭಾಗ್ಯರ್ಹೋದರೇನು ಫಲ |
ರುಕ್ಮಿಣೀಗೆ ಕರುಣ ಹುಟ್ಟದ್ಹೋಯಿತೆಂದನು ||

ಸಡಗರದ ಸತ್ಯಭಾಮೆ ಉಡುವ ಒಂದ್ಹಳೆಯ ಸೀರೆ |
ಕೊಡಬಾರದಿತ್ತೆ ಎನ್ನ ಮಡದಿಗೆಂದನು ||

ಮಕ್ಕಳೆಲ್ಲ ಬಂದು ನಮ್ಮಪ್ಪ ಏನು ತಂದಿ ಎಂದು |
ಅಪ್ಪಿಕೊಂಡು ಕೇಳಿದರಿನ್ನೇನ ಹೇಳಲಿ?..."

ಹೀಗೆ ಸಂಸಾರಿಯಾದ ಅವನ ಹಳಹಳಿಕೆ ಮುಂದೆ ಸಾಗಿ ಶ್ರೀಕೃಷ್ಣನೂ ತನ್ನಂತೆಯೇ ಬಡವನಾಗಿದ್ದು ಅನುಭವ ಉಳ್ಳವನೆಂಬುದನ್ನು 'ನಿಂದಾಸ್ತುತಿ'ಯ ವ್ಯಾಜದಿಂದ ನೆನಪಿಸುತ್ತಾನೆ. ದಶಾವತಾರಗಳನ್ನು ಸ್ಮರಿಸಿದ್ದಲ್ಲದೆ

"ಬಾರದಿದ್ದ ಬಸಿರು ಬಾಣಂತಿ ಖರ್ಚಿಗಿಲ್ಲದ್ಹಾಂಗೆ|
ನಾಭಿಯಿಂದ ಪಡೆದೆ ನಾಲ್ಕುಮೋರೆ ಶಿಶುವನ್ನ ||"

ಎಂದು ಮಹಾವಿಷ್ಣುವಿನ ಸಾಂಸಾರಿಕ ಕಾರ್ಪಣ್ಯದ ಚಿತ್ರಗಳನ್ನು ಕಲ್ಪಿಸಿಕೊಂಡು ಭಕ್ತವತ್ಸಲನೆಂಬ ಬಿರುದನ್ನು ಉಳಿಸಿಕೊಳ್ಳಲು ಹೇಳುತ್ತಾನೆ.

ಕುಚೇಲನ ಗುಡಿಸಿಲು ಅರಮನೆಯಾಗಿ ಪರಿವರ್ತಿತವಾಗಿರುತ್ತದೆ. ವಿಶ್ವಕರ್ಮನಿಂದ ಶ್ರೀಕೃಷ್ಣನು ಸುದಾಮನಿಗೆ ತನ್ನಂತಹದೇ ಅರಮನೆ ಮಾಡಿಸಿರುತ್ತಾನೆ.

ಭೀಮವ್ವನ ಹಾಡಿನಲ್ಲಿ ಈ ಅರಮನೆ ತನ್ನದೆಂದು ದನಕಾಯುವ ಮಕ್ಕಳಿಂದ ತಿಳಿದ ಸುದಾಮನು ಕೃಷ್ಣನ ಉಪಕಾರವನ್ನು ನೆನೆದು ತನ್ನ ದಡ್ಡತನಕ್ಕಾಗಿ ತನ್ನನ್ನು ತಾನು ಬಯ್ದುಕೊಳ್ಳುತ್ತಾ

"ಮಾಣಿಕ್ಯದ ಸರವನೊಯ್ದು ಮಂಗನ ಕೈಗೆ ಕೊಟ್ಹಾಂಗೆ |
ತಿರುಕ ಬ್ರಾಹ್ಮಣಗೆ ಇಂಥ ದೊರೆತನ್ಯಾತಕೆ?"
"ಹುಚ್ಚಹಾರುವನೆ ಕೇಳು ಅಚ್ಯುತ ದೊರೆತನಾವ
ಮೆಚ್ಚಿಕೊಟ್ಟು ಇಚ್ಛೆ ಸಂಪೂರ್ಣ ಮಾಡಿದ"

ಎಂದು ತನಗೆ ತಾನೇ ಉದ್ಗರಿಸಿ ವಾಸ್ತವವನ್ನು ನಂಬುವ ನಾಟಕೀಯತೆ ನಿಜಕ್ಕೂ ಜೀವಂತವಾಗಿದೆ.

ಇಲ್ಲಿಂದ ಮುಂದೆ ಅಲಂಕೃತಳಾದ ಕುಚೇಲೆ ಪರಿವಾರದೊಂದಿಗೆ ಸಕಲ ವೈಭವದಿಂದ ಪತಿಯನ್ನು ಸ್ವಾಗತಿಸಿ ಪಲ್ಲಕ್ಕಿಯಲ್ಲಿ ಕರೆತರುವ ಸಂದರ್ಭವಿದೆ. ಅಲ್ಲಿಯ ಆಭರಣ, ಅಲಂಕಾರಗಳ ವರ್ಣನೆಯನ್ನು ಸವಿಯಲು ಹಾಡನ್ನು ಪೂರ್ಣವಾಗಿ ಓದಬೇಕು.

ಸಂಸ್ಕೃತ ಭಾಗವತದ ಭಾವವನ್ನು ಚೆನ್ನಾಗಿ ಹೀರಿದ ಭೀಮವ್ವನವರ ಹಾಡಿನ ಮುಂದಿನ ಭಾಗದಲ್ಲಿ ಬರುವ ವಿಶೇಷಗಳು ವಸ್ತುವಿನಲ್ಲಿ ಭಿನ್ನವಾಗದೆ ವರ್ಣನೆಯಲ್ಲಿ ಭಾವಸೂಕ್ಷ್ಮಗಳನ್ನು ಅಳವಡಿಸುವ ಮೂಲಕ ವಿಶಿಷ್ಟವಾಗುತ್ತವೆ. ಸರ್ವಾಭರಣಾಲಂಕೃತನಾಗಿ ಶುದ್ಧಜರದ ಛಾದರವನ್ನು ಹೊದ್ದ ಸುದಾಮನ ಮೆರವಣಿಗೆ

'ಹೊಡೆವಭೇರಿ ಹಿಡಿವಕಾಳಿ ಘಟಘುಡೆಂಬ ರಥವು ತೇಜಿ
ಬಿಡುವಬಾಣ ಬಿರುಸು ಬೀದಿ ಹಿಡಿಯದಂದದಿ"

ಸಾಗಿ ಬರುತ್ತದೆ. ಸಿಂಹಾಸನವನ್ನೇರಿ ಕುಳಿತ ಸುದಾಮನಿಗೆ ಕೃಷ್ಣನ ಉಪಕಾರಸ್ಮರಣೆಗೆ ಕ್ಷಣಕ್ಷಣಕ್ಕೂ ಅವಕಾಶ. ಇಲ್ಲಿ ಮತ್ತೆರಡು ಕೌಟುಂಬಿಕ ಪ್ರಸಂಗದ ಮಾತುಗಳು.

"ಕಂಠಿ ಕಂಠ ಮಾಲೆಯ ತಮ್ಮೆಬ್ಬಟ್ಟಿಡಿದು ತೋರುತ |
ಅಪ್ಪ ನಿನಗಿದಾರು ಕೊಟ್ಟರೆನುತ ಕೇಳಲು ||

ಗಡ್ಡಗೋಣು ಹಿಡಿದು ಕೇಳೊ ಮುದ್ದು ಮಕ್ಕಳನ್ನು ನೋಡಿ |
ಪದ್ಮನಾಭನೆಂಬ ದಣಿಯು ಕೊಟ್ಟನೆಂದನು"

"ಮಡದಿ ನೀನು ತಿರಿದು ತಂದ ಸೆರೆಯ ಅವಲಕ್ಕಿಗೆ |
ಹರಿಯು ಮಾಡಿದ ಚರ್ಯ ನಾನಿನ್ನೇನ ಹೇಳಲಿ ||
- - - - - - - - -
ಆತನಾ ಹೆಂಡಿರೊಳಗೆ ನಿನ್ನ ನೆನಸಿ ಮರುಗುತಾ |
ಕೋತಿ ಹಾಗೆ ಕಣ್ಣು ಬಿಡುತ ಕೂತು ನೋಡಿದೆ ||"

ಎಂದು ಊರಿನ ಸುದ್ದಿಯನ್ನು ತನ್ನ ಹೆಂಡತಿಗೆ ಹೇಳಿಕೊಂಡನೆಂದು ಚಿತ್ರಿಸಿ ಆಪ್ತ ವಾತಾವರಣವನ್ನು ಸೃಷ್ಟಿಸಿದ್ದಾರೆ.

"ಸುದಾಮನು ಸಂಪತ್ತು ಕಂಡರೂ ಉಕ್ಕದೇ ದೈವದತ್ತ ಭಾಗ್ಯವನ್ನು ಪತ್ನಿಯೊಂದಿಗೆ ಲಂಪಟನಾಗದೆ ಅನುಭವಿಸಿದನು" ಎಂಬ ಭಾಗವತದ ವಿವರಣೆಗೆ ಭೀಮವ್ವ ಮತ್ತೆ ವಸ್ತುಪ್ರತಿರೂಪ ಒದಗಿಸಿದ್ದಾರೆ.

ಅನ್ನದಾನ, ಚಿನ್ನದಾನ, ಭೂದಾನ, ರತ್ನದಾನ, ದೀಪದಾನ, ಕನ್ಯಾದಾನ, ಲಕ್ಷಾಂತರ ಜನರಿಗೆ ಸಂತರ್ಪಣೆ ಕೆರೆ. ಬಾವಿ, ತೋಟಗಳ ನಿರ್ಮಾಣ ಹಾಗೂ ಕೃಷ್ಣ ಮೂರ್ತಿ ಪ್ರತಿಷ್ಠೆ ಮಾಡಿಸುತ್ತಾ ಆ ಸಂಪತ್ತನ್ನು ವಿನಿಯೋಗಿಸಿದನು ಎಂಬುದು ಶ್ರೀಮದ್ಭಾಗವತದ 'ನಾತಿಲಂಪಟಃ' ಎಂಬ ಮಾತಿಗೆ ಬರೆದ ಭಾಷ್ಯದಂತಿದೆ.

ಹೀಗೆ 'ಹರಿಯು ಕೊಟ್ಟ ಭಾಗ್ಯವ ಹರಿಗೆ ಅರ್ಪಿಸಿ' ಬಾಳಿದ ಸುದಾಮನ ಚರಿತ್ರೆ ಬಹುಜನ ಪ್ರಿಯವಾಗಿದೆ. ಶ್ರೀಮದ್ಭಾಗವತದ ಕುಚೇಲೋಪಾಖ್ಯಾನದ ಮೂಲಕ್ಕೆ ಸಂಪೂರ್ಣ ಋಣಿಯಾಗಿರುತ್ತಲೇ ಭೀಮವ್ವನವರು ಮೂಲದ ಸೌಂದರ್ಯವನ್ನು ಭಾವಸೂಕ್ಷ್ಮಗಳ ಸಂಯೋಜನೆ, ವರ್ಣನೆಯ ನಾವೀನ್ಯತೆ, ಆಶಯಗಳ ವಿಸ್ತರಣೆ ಮುಂತಾದ ತಂತ್ರಗಳಿಂದ ವೃದ್ಧಿಗೊಳಿಸಿರುವುದು ಇಲ್ಲಿ ಕಂಡುಬಂದಿದೆ. ಇವರ ಈ ನೂತನ ರೂಪಾಂತರಕ್ಕೆ ಕನ್ನಡದ ಮತ್ತೊಂದು ಸುದಾಮಚರಿತ್ರೆಯ ನೆರವು ಇರುವಂತಿದೆ. ಅದು ಪುರಂದರದಾಸರ ಹೆಸರಿನಲ್ಲಿದೆ. ಅಲ್ಲಿಯ ರೂಪಾಂತರವು ಕೇವಲ ಹೊಸ ಹೊಳಹುಗಳ ಎಳೆಯ ರೂಪದಲ್ಲಿದ್ದು ಭೀಮವ್ವನವರು ತಮ್ಮ ಕಾವ್ಯ ಕೌಶಲದಿಂದ ಆ ಎಳೆಗಳನ್ನು ವೃದ್ಧಿಗೊಳಿಸಿದ್ದಾರೆ.

ಬಳ್ಳಾರಿ ಜಿಲ್ಲೆಯಲ್ಲಿ ಸುಪ್ರಸಿದ್ಧವಾಗಿ ಬ್ರಾಹ್ಮಣ ಮಹಿಳೆಯರ ಬಾಯಿ ಪಾಠವಾಗಿರುವ ಈ ಹಾಡು 'ಶ್ರೀಮದ್ಭಾಗವತ'ವನ್ನು ಹರಿದಾಸ ಮಹಿಳೆಯು ಸ್ವೀಕರಿಸಿ-ವಿಸ್ತರಿಸಿದ ಬಗೆಯನ್ನು ತಿಳಿಯಲು ಒಂದು ಉತ್ತಮ ಮಾದರಿಯಾಗಿದೆ.

೪

# ಆಕರ ಸೂಚಿ

**ಹರಿದಾಸಸಾಹಿತ್ಯ ಕೃತಿಗಳು**

೧. ಸಮಗ್ರದಾಸಸಾಹಿತ್ಯ, ೨೦೦೩, (೧ರಿಂದ ೩೫ ಸಂಪುಟಗಳು) ವಿವಿಧ ವಿದ್ವಾಂಸರು(ಸಂ), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು

೨. ಶ್ರೀಪಾದರಾಜರು, ೧೯೮೭, ಶ್ರೀಪಾದರಾಜರ ಕೃತಿಗಳು, ವರದರಾಜರಾವ್(ಸಂ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೩. ವ್ಯಾಸರಾಯರು, ೨೦೦೧, ಶ್ರೀವ್ಯಾಸರಾಯರ ಕೃತಿಗಳು, ನಾಗರತ್ನ.ಟಿ.ಎನ್.(ಸಂ), ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೪. ವಾದಿರಾಜರು, ೧೯೮೦, ಶ್ರೀ ವಾದಿರಾಜರ ಕೃತಿಗಳು, ನಾಗರತ್ನ.ಟಿ.ಎನ್.(ಸಂ), ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೫. ವಾದಿರಾಜರು, ೧೯೮೭ ವಾದಿರಾಜರ ದೀರ್ಘಕೃತಿಗಳು, ನಾಗರತ್ನ ಟಿ.ಎನ್.(ಸಂ), ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೬. ವಾದಿರಾಜರು, ೧೯೮೬, ಶ್ರೀವಾದಿರಾಜತೀರ್ಥವಿರಚಿತ 'ಶ್ರೀಕೃಷ್ಣಬಾಲಲೀಲೆ', ಎಚ್.ಜಿ. ಲೋಕೂರ(ಸಂ), ಮಿಂಚಿನಬಳ್ಳಿ ಗ್ರಂಥಮಾಲೆ, ಹುಬ್ಬಳ್ಳಿ

೭. ಚಿಕ್ಕಣ್ಣ ಕಾ.ತ., ೧೯೮೨, ಕನಕಕಿರಣ, ಕಾಳಿದಾಸ ಸಾಂಸ್ಕೃತಿಕ ಸಂಘ, ಬೆಂಗಳೂರು

೮. ತಿಪ್ಪೇರುದ್ರಸ್ವಾಮಿ ಎಚ್., ೧೯೬೮, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ.ಮೂರ್ತಿ, ಮೈಸೂರು

೯. ತಿಪ್ಪೇರುದ್ರಸ್ವಾಮಿ ಎಚ್., ೧೯೯೮, ತೌಲನಿಕ ಕಾವ್ಯಮೀಮಾಂಸೆ, ಡಿ.ವಿ.ಕೆ.ಮೂರ್ತಿ, ಮೈಸೂರು

೧೦. ದಿವಾಣಜಿ ಎ.ವಿ., ೧೯೭೨, ಪ್ರಸಾದಯೋಗ, ಉಷಾಸಾಹಿತ್ಯ ಮಾಲೆ, ಮೈಸೂರು

೧೧. ನಾಗರತ್ನ ಟಿ.ಎಸ್., ೧೯೮೬, ಹರಿದಾಸರ ಭಕ್ತಿ ಸ್ವರೂಪ, ಪ್ರಸಾರಾಂಗ, ಮೈ.ವಿ.ವಿ, ಮೈಸೂರು

೧೨. ನಾಗರಾಜ ಡಿ.ಕೆ., ೧೯೯೨, ಗಮಕ ಕಲೆ ಮತ್ತು ಅದರ ಮಹತ್ವ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೧೩. ನಾರಾಯಣಾಚಾರ್ಯ ಧೂಳಖೇಡ, ೧೯೯೩, ಶ್ರೀಹರಿಕಥಾಮೃತಸಾರ ಹಾಗೂ ಭಾಗವತಧರ್ಮ, ಪವಮಾನ ಪ್ರಕಾಶನ, ಲಕ್ಷ್ಮೇಶ್ವರ

೧೪. ನಾವಡ.ಎ.ವಿ.(ಸಂ), ೨೦೦೨, ಸಾವಿರಾರು ಕೀರ್ತನೆಗಳು, ಅಂಕಿತ ಪುಸ್ತಕ ಬಸವನಗುಡಿ, ಬೆಂಗಳೂರು

೧೫. ಪರಮೇಶ್ವರಭಟ್ಟ ಎಸ್.ವಿ., ೧೯೬೭, ಅದ್ಭುತರಾಮಾಯಣ(ಸಂ), ಶಾರದಾ ಮಂದಿರ, ಮೈಸೂರು

೧೬. ಪ್ರಧಾನ್ ಗುರುದತ್ತ, ೧೯೯೦, ಶ್ರೀಕೃಷ್ಣಕಥೆಯ ಉಗಮ ಮತ್ತು ವಿಕಾಸ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೭. ಪಾಟೀಲ.ಎ.ಟಿ., ೧೯೫೬, ಪ್ರಸನ್ನವೆಂಕಟದಾಸರು ಹಾಗೂ ಅವರ ಕೃತಿಗಳು, ಮಿಂಚಿನಬಳ್ಳಿ ಕಾರ್ಯಾಲಯ, ಹುಬ್ಬಳ್ಳಿ

೧೮. ಪಂಚಮುಖಿ ಆರ್.ಎಸ್., ೧೯೫೨, ಹರಿದಾಸರ ಸಾಹಿತ್ಯ, ಕನ್ನಡ ಸಾಹಿತ್ಯಪರಿಷತ್ತು, ಬೆಂಗಳೂರು.

೧೯. ಬಾದರಾಯಣಮೂರ್ತಿ ವಿ., ೧೯೮೪, ದಾಸಸಾಹಿತ್ಯದಲ್ಲಿ ಸೃಷ್ಟಿಪ್ರಕರಣ, ಅಪ್ಪಣಾಚಾರ್ಯ ಕೆ.(ಸಂ), ತಿರುಪತಿ ತಿರುಮಲೆ ದೇವಸ್ಥಾನ, ತಿರುಪತಿ

೧೭. ಬೇಲೂರು ಕೇಶವದಾಸ, ೧೯೮೦, ಹರಿದಾಸ ಸಾಹಿತ್ಯ, ಗೀತಾ ಬುಕ್‌ಹೌಸ್, ಮೈಸೂರು.

೧೮. ಮೋಟಗಾನಹಳ್ಳಿ ರಾಮಶೇಷಶಾಸ್ತ್ರಿ, ೧೯೯೩, ಟೀಕಾತಾತ್ಪರ್ಯಸಹಿತ, ಶ್ರೀಭಾಗವತ ಮಹಾಪುರಾಣ(೧ ರಿಂದ ೭ ಸಂಪುಟಗಳು) ವಿದ್ಯಾಗಣಪತಿ ಪ್ರಕಾಶನ, ಬೆಂಗಳೂರು.

೧೯. ರಂಗನಾಥ ದಿವಾಕರ(ಸಂ), ೧೯೩೮, ಹರಿಭಕ್ತಿ ಸುಧೆ, ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ.

೨೦. ರಾಮಚಂದ್ರನ್.ಸಿ.ಎನ್, ೨೦೦೨, ಸಾಹಿತ್ಯವಿಮರ್ಶೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೭. ಚಿಕ್ಕಣ್ಣ ಕಾ.ತ., ೧೯೮೨, **ಕನಕಕಿರಣ,** ಕಾಳಿದಾಸ ಸಾಂಸ್ಕೃತಿಕ ಸಂಘ, ಬೆಂಗಳೂರು

೮. ತಿಪ್ಪೇರುದ್ರಸ್ವಾಮಿ ಎಚ್., ೧೯೬೮, **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ಡಿ.ವಿ.ಕೆ.ಮೂರ್ತಿ, ಮೈಸೂರು

೯. ತಿಪ್ಪೇರುದ್ರಸ್ವಾಮಿ ಎಚ್., ೧೯೯೮, **ತೌಲನಿಕ ಕಾವ್ಯಮೀಮಾಂಸೆ,** ಡಿ.ವಿ.ಕೆ.ಮೂರ್ತಿ, ಮೈಸೂರು

೧೦. ದಿವಾಣಜಿ ಎ.ವಿ., ೧೯೭೨, **ಪ್ರಸಾದಯೋಗ,** ಉಷಾಸಾಹಿತ್ಯ ಮಾಲೆ, ಮೈಸೂರು

೧೧. ನಾಗರತ್ನ ಟಿ.ಎನ್., ೧೯೮೬, **ಹರಿದಾಸರ ಭಕ್ತಿ ಸ್ವರೂಪ,** ಪ್ರಸಾರಾಂಗ, ಮೈ.ವಿ.ವಿ, ಮೈಸೂರು

೧೨. ನಾಗರಾಜ ಡಿ.ಕೆ., ೧೯೯೨, **ಗಮಕ ಕಲೆ ಮತ್ತು ಅದರ ಮಹತ್ವ,** ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೧೩. ನಾರಾಯಣಾಚಾರ್ಯ ಧೂಳಖೇಡ, ೧೯೯೩, **ಶ್ರೀಹರಿಕಥಾಮೃತಸಾರ ಹಾಗೂ ಭಾಗವತಧರ್ಮ,** ಪವಮಾನ ಪ್ರಕಾಶನ, ಲಕ್ಷ್ಮೇಶ್ವರ

೧೪. ನಾವಡ.ಎ.ವಿ.(ಸಂ), ೨೦೦೨, **ಸಾವಿರಾರು ಕೀರ್ತನೆಗಳು,** ಅಂಕಿತ ಪುಸ್ತಕ ಬಸವನಗುಡಿ, ಬೆಂಗಳೂರು

೧೫. ಪರಮೇಶ್ವರಭಟ್ಟ ಎಸ್.ವಿ., ೧೯೬೭, **ಅದ್ಭುತರಾಮಾಯಣ(ಸಂ),** ಶಾರದಾ ಮಂದಿರ, ಮೈಸೂರು

೧೬. ಪ್ರಧಾನ್ ಗುರುದತ್ತ, ೧೯೯೦, **ಶ್ರೀಕೃಷ್ಣಕಥೆಯ ಉಗಮ ಮತ್ತು ವಿಕಾಸ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೭. ಪಾಟೀಲ.ಎ.ಟಿ., ೧೯೫೬, **ಪ್ರಸನ್ನವೆಂಕಟದಾಸರು ಹಾಗೂ ಅವರ ಕೃತಿಗಳು,** ಮಿಂಚಿನಬಳ್ಳಿ ಕಾರ್ಯಾಲಯ, ಹುಬ್ಬಳ್ಳಿ

೧೮. ಪಂಚಮುಖಿ ಆರ್.ಎಸ್., ೧೯೫೨, **ಹರಿದಾಸರ ಸಾಹಿತ್ಯ,** ಕನ್ನಡ ಸಾಹಿತ್ಯಪರಿಷತ್ತು, ಬೆಂಗಳೂರು.

೧೯. ಬಾದರಾಯಣಮೂರ್ತಿ ವಿ., ೧೯೮೪, **ದಾಸಸಾಹಿತ್ಯದಲ್ಲಿ ಸೃಷ್ಟಿಪ್ರಕರಣ,** ಅಪ್ಪಣಾಚಾರ್ಯ ಕೆ.(ಸಂ), ತಿರುಪತಿ ತಿರುಮಲೆ ದೇವಸ್ಥಾನ, ತಿರುಪತಿ

೧೭. ಬೇಲೂರು ಕೇಶವದಾಸ, ೧೯೮೦, **ಹರಿದಾಸ ಸಾಹಿತ್ಯ,** ಗೀತಾ ಬುಕ್‌ಹೌಸ್, ಮೈಸೂರು.

೧೮. **ಮೋಟಗಾನಹಳ್ಳಿ ರಾಮಶೇಷಶಾಸ್ತ್ರಿ,** ೧೯೯೩, **ಟೀಕಾತಾತ್ಪರ್ಯಸಹಿತ, ಶ್ರೀಭಾಗವತ ಮಹಾಪುರಾಣ(೧ ರಿಂದ ೭ ಸಂಪುಟಗಳು)** ವಿದ್ಯಾಗಣಪತಿ ಪ್ರಕಾಶನ, ಬೆಂಗಳೂರು.

೧೯. ರಂಗನಾಥ ದಿವಾಕರ(ಸಂ), ೧೯೩೮, **ಹರಿಭಕ್ತಿ ಸುಧೆ,** ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ.

೨೦. ರಾಮಚಂದ್ರನ್.ಸಿ.ಎನ್, ೨೦೦೨, **ಸಾಹಿತ್ಯವಿಮರ್ಶೆ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಲೇಖನಗಳು

೧. ಎಕ್ಕುಂಡಿ.ಸು.ರಂ., ೧೯೬೪, *ತಾಳ ತಂಬೂರಿ,* ಶ್ರೀಪುರಂದರದಾಸರು, ಮಿಂಚಿನಬಳ್ಳಿ ಪ್ರಕಾಶನ, ಹುಬ್ಬಳ್ಳಿ

೨. ಕುಲಕರ್ಣಿ ಎನ್.ಕೆ., ೧೯೮೭, *ಪುರಂದರದಾಸರವರೆಗಿನ ಹರಿದಾಸಸಾಹಿತ್ಯ,* ದಾಸಸಾಹಿತ್ಯ, ವಿ.ಸೀತಾರಾಮಯ್ಯ(ಸಂ), ಐ.ಬಿ.ಎಚ್ ಪ್ರಕಾಶನ, ಬೆಂಗಳೂರು

೩. ಕುವೆಂಪು, ೧೯೮೬, ಮುನ್ನುಡಿ, ಶ್ರೀಕೃಷ್ಣಚರಿತೆ, ವೆಂಕಟರಾಮಪ್ಪ ಕೆ.(ಸಂ), ಪ್ರಸಾರಾಂಗ, ಮೈ.ವಿ.ವಿ, ಮೈಸೂರು

೪. ಕುವೆಂಪು, ೨೦೦೩, *ಶಕ್ತಿಕವಿರನ್ನ,* ವಿಭೂತಿ ಪೂಜೆ(೧೯೫೩) ಸಮಗ್ರ ಗದ್ಯಸಂಪುಟ-೧, ಕೆ.ಸಿ. ಶಿವಾರೆಡ್ಡಿ(ಸಂ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ

೫. ಕುವೆಂಪು, ೨೦೦೩, *ಕವಿಕೃತಿಯಲ್ಲಿ ಅನನ್ಯಪರತಂತ್ರತೆ,* ದ್ರೌಪದಿಯ ಶ್ರೀಮುಡಿ(೧೯೬೦), ಸಮಗ್ರಗದ್ಯ ಸಂಪುಟ-೧, ಕೆ.ಸಿ.ಶಿವಾರೆಡ್ಡಿ(ಸಂ), ಪ್ರಸಾರಾಂಗ ಕನ್ನಡವಿಶ್ವವಿದ್ಯಾಲಯ, ಹಂಪಿ

೬. ಚನ್ನಯ್ಯ ಎಚ್.ಎಮ್., ೧೯೯೧, *ಪಂಪನಲ್ಲಿ ಸಾಮಾಜಿಕತೆಯ ಅರಿವು,* ಪಂಪ: ಒಂದು ಅಧ್ಯಯನ, ಶಿವರುದ್ರಪ್ಪ ಜಿ.ಎಸ್.(ಸಂ), ಪ್ರಸಾರಾಂಗ ಬೆಂ.ವಿ.ವಿ, ಬೆಂಗಳೂರು

೭. ನರಸಿಂಗರಾವ್ ಮಾಸ್ತಿ, ೧೯೬೪, *ಪುರಂದರದಾಸರಿಂದ ಜನಸಾಮಾನ್ಯಕ್ಕಾದ ಉಪಕಾರ,* ಶ್ರೀ ಪುರಂದರದಾಸರು, ಮಿಂಚಿನಬಳ್ಳಿ ಪ್ರಕಾಶನ, ಹುಬ್ಬಳ್ಳಿ.

೮. ಪ್ರಹ್ಲಾದಾಚಾರ್ಯ ಡಿ., ೧೯೮೮, *ಶ್ರೀಮದ್ಭಾಗವತ ಮತ್ತು ಭಗವದ್ಗೀತೆ,* ಶ್ರೀಮದ್ಭಾಗವತ ಗೀತಾಯಜ್ಞ ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ, ೧೭೪, ೨ನೇ ಅಡ್ಡರಸ್ತೆ, ಬಸವನ ಗುಡಿ, ಬೆಂಗಳೂರು.

೯. ಪಂಢರೀನಾಥಾಚಾರ್ಯ ಗಲಗಲಿ, ೧೯೯೩, ಮುನ್ನುಡಿ, ಹರಿಕಥಾಮೃತಸಾರ ಹಾಗೂ ಭಾಗವತಧರ್ಮ, ನಾರಾಯಣಾಚಾರ್ಯ ಧೂಳಖೇಡ(ಲೇ), ಪವಮಾನ ಪ್ರಕಾಶನ, ಲಕ್ಷ್ಮೇಶ್ವರ.

೧೦. ಪಾಂಡುರಂಗಿ ಕೆ.ಟಿ., ೧೯೯೪, ಮುನ್ನುಡಿ, ದಾಸಸಾಹಿತ್ಯ : ಒಂದು ಸೈದ್ಧಾಂತಿಕ ಅಧ್ಯಯನ, ಆರ್.ಜಿ.ಗುಡಿ(ಲೇ), ಶ್ರೀನಿಧಿ ಪ್ರಕಾಶನ ಅಥಣಿ.

೧೧. ಪುರುಷೋತ್ತಮ ಬಿಳಿಮಲೆ, ೧೯೯೨, *ಮುದ್ರಣ : ಋಣ ಮತ್ತು ವೃದ್ಧಿ,* ಶಿಷ್ಟ-ಪರಿಶಿಷ್ಟ, ಮದಿಪು ಪ್ರಕಾಶನ, ಮಂಗಳೂರು.

೧೨. ರಾಮಚಂದ್ರ ಆಚಾರ್ಯ ಡಿ., ೧೯೮೮, *ಗಾಯತ್ರೀ ಭಾಷ್ಯರೂಪೋಸೌ*, **ಶ್ರೀಮದ್ಭಾಗವತ ಗೀತಾ ಯಜ್ಞ ಸುವರ್ಣಮಹೋತ್ಸವ ಸ್ಮರಣ ಸಂಚಿಕೆ**, ೧೭೪, ೨ನೇ ಅಡ್ಡರಸ್ತೆ, ಬಸವನಗುಡಿ, ಬೆಂಗಳೂರು.

೧೩. ರಾಮಚಂದ್ರ ಉಚ್ಚಿಲ, ೧೯೭೫, *ಯಕ್ಷಗಾನಕೃತಿಗಳು, ರಾಮಪಟ್ಟಾಭಿಷೇಕ ಮತ್ತು ಅದ್ಭುತ* **ರಾಮಾಯಣ, ಮುದ್ದಣ**, ಸೀತಾರಾಮಯ್ಯ ವಿ.(ಸಂ), ಐಬಿಎಚ್ ಪ್ರಕಾಶನ, ಬೆಂಗಳೂರು.

೧೪. ಶಂಕರ ನಾರಾಯಣರಾವ್ ಎಚ್.ಎಂ., ೧೯೬೭, *ಮುನ್ನುಡಿ*, **ಹರಿದಾಸ ಹೃದಯ**, ವರದರಾಜರಾವ್ ಜಿ.(ಸಂ), ಶಾರದಾಮಂದಿರ ಮೈಸೂರು.

೧೫. ಶ್ರೀಕಂಠಯ್ಯ ತೀ.ನಂ., ೧೯೯೫, *ಗದಾಯುದ್ಧ ಪೂ ಸ್ವೀಕರಣ ವಿಚಾರವೂ*, **ರನ್ನಕವಿ ಪ್ರಶಸ್ತಿ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.೧೮

೧೬. ಶ್ರೀನಿವಾಸಯ್ಯಂಗಾರ್ ಎಸ್.ಟಿ.,೧೯೯೩, *ಮುನ್ನುಡಿ*, **ಶ್ರೀಭಾಗವತ ಮಹಾಪುರಾಣ** ಮೋಟಗಾನಹಳ್ಳಿ ರಾಮಶೇಷಶಾಸ್ತ್ರಿ(ಸಂ) ವಿದ್ಯಾಗಣಪತಿ ಪ್ರಕಾಶನ, ಬೆಂಗಳೂರು.

೧೭. ಸಂಪದ್ಗಿರಿರಾವ್ ಕೆ., ೧೯೮೭, *ದಾಸಸಾಹಿತ್ಯದ ಕೊಡುಗೆ*, **ದಾಸಸಾಹಿತ್ಯ**, ವಿ.ಸೀತಾರಾಮಯ್ಯ(ಸಂ), ಐಬಿಎಚ್ ಪ್ರಕಾಶನ, ಬೆಂಗಳೂರು.

## ಸಂಸ್ಕೃತ ಗ್ರಂಥಗಳು

೧. ಶ್ರೀಮದ್ಭಾಗವತಮ್ (ವಿಜಯಧ್ವಜೀಯ ಟೀಕಾಸಹಿತ)

೨. ಶ್ರೀಮದ್ಭಾಗವತ ತಾತ್ಪರ್ಯನಿರ್ಣಯಃ, ಆನಂದತೀರ್ಥರು

೩. ಶ್ರೀಮದ್ಭಾಗವತ ಸಾರೋದ್ಧಾರ, ಮಾದನೂರು ವಿಷ್ಣುತೀರ್ಥರು

೪. ಶ್ರೀಮನ್ನ್ಯಾಯಸುಧಾ, ಜಯತೀರ್ಥರು

೫. ಶ್ರೀರುಕ್ಮಿಣೀಶ ವಿಜಯ : ವಾದಿರಾಜರು

೬. ಸುಮಧ್ವವಿಜಯಃ, ನಾರಾಯಣ ಪಂಡಿತಾಚಾರ್ಯರು

## ಇಂಗ್ಲಿಷ್ ಗ್ರಂಥಗಳು

Basrur Subba Rao, 2001ã **Kanakadasa,** East West Books (Madras) Pvt., Ltd., Bangalore

Rukmani T.S., 1970, **A Critical Study of Bhagavata Purana,** The Choukamba Sanskrit Series, Varanasi

Srinivasan G., 1972, **Haridasas of Karnataka,** Academy of Compartive Philosophy and Religion, Belgaum

## ನಿಘಂಟುಗಳು

ಕಿಟ್ಟೆಲ್ ಆರ್.ಎಫ್., ೧೮೯೪, **ಕನ್ನಡ-ಇಂಗ್ಲಿಷ್ ಡಿಕ್ಷ್ನರಿ,** ಏಶಿಯನ್ ಎಜುಕೇಶನಲ್ ಸರ್ವೀಸಸ್, ನ್ಯೂಡೆಲ್ಲಿ

ಚಕ್ರವರ್ತಿ ಶ್ರೀನಿವಾಸಗೋಪಾಲಾಚಾರ್ಯ,೧೯೬೧, **ಶಬ್ದಾರ್ಥ ಕೌಸ್ತುಭಃ, ಸಂಸ್ಕೃತ ಕನ್ನಡ ಶಬ್ದಕೋಶ, ಸಂಪುಟ ೧ ರಿಂದ ೬,** ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ, ಬೆಂಗಳೂರು

Bharadvaj D.K., 2001, **English-English-Kannada Dictcnary,** BGS Publications, Gadad

